ಶಾರದಾ ಸಾಹಿತ್ಯ ಮಾಲೆ - ೪೪

# ಗೋವಾದೇವಿ

ಕಾದಂಬರಿ

ಲೇಖಕರು:
ಬಸವರಾಜ ಕಟ್ಟೀಮನಿ

ಮುದ್ರಣ ಮತ್ತು ಪ್ರಕಾಶನ
ಶಾರದಾ ಪ್ರಕಟನಾಲಯ
ಅರಳೇಪೇಟೆ, :: ಬೆಂಗಳೂರು - ೨.

# ಮೊದಲ ಮಾತು

ಸುಶಿಕ್ಷಿತರೆಂದೂ ಸುಸಂಸ್ಕೃತರೆಂದೂ ಹೇಳಿಕೊಂಡು ಸಮಾಜದಲ್ಲಿ ಎತ್ತರದ ಸ್ಥಾನ ಪಡೆಯಲೆತ್ನಿಸುವ ಇಂದಿನ ಮಧ್ಯಮ ಹಾಗೂ ಉಚ್ಚವರ್ಗದವರಲ್ಲನೇಕರ ಜೀವನ ವಾಸ್ತವವಾಗಿ ಎಂಥ ಮಟ್ಟಕ್ಕಿಳಿದಿದೆಯೆಂಬುದರ ಸತ್ಯ ದರ್ಶನ ಮಾಡಿಸುವುದೇ ಈ ಕಾದಂಬರಿಯ ಮುಖ್ಯ ಉದ್ದೇಶವಾಗಿದೆ.

ಈ ಕೃತಿಯಲ್ಲಿ ಬರುವ ಬಾಜೀರಾವ್, ಮೋಜಣ್ಣವರ್, ಹರಕಸೆಟ್ಟಿಯವರಂಥ 'ಸಂಡೇ ಪ್ಲೀಡರು'ಗಳನ್ನೂ ಇಂದ್ರಗೇರಿಯವರಂಥ ಡಾಕ್ಟರುಗಳನ್ನೂ ವೀರಭದ್ರಯ್ಯನವರಂಥ ಪ್ರೊಸಿಕ್ಯೂಟರುಗಳನ್ನೂ ಜಗದಂಬೆಯವರಂಥ ಮ್ಯಾಜಿಸ್ಟ್ರೇಟರನ್ನೂ ಪ್ರತಿಯೊಂದು ನಗರದಲ್ಲೂ ನೋಡಬಹುದಾಗಿದೆ. ಬಸಲಿಂಗ ಮತ್ತು ಚೆನ್ನಿಯಂಥವರಿಗಂತೂ ಕೊರತೆಯೇ ಇಲ್ಲ. ಲೀಲಾದೇವಿ ಗೌರೀದೇವಿ ಸುಮಿತ್ರಾದೇವಿ ಮೊದಲಾದ ಇಲ್ಲಿನ ದೇವಿಯರು ಇಂದಿನ ಸಮಾಜದಲ್ಲಿ ಅಲ್ಲಲ್ಲಿ ಕಂಡುಬರುವ, ಹಾದಿತಪ್ಪಿದ ಸ್ತ್ರೀಯರ ಪ್ರತಿನಿಧಿಗಳಾಗಿದ್ದಾರೆ.

ಈ ಕಾದಂಬರಿಯ ರಚನಾವಿಧಾನವೂ ಕೆಲವು ವಾಚಕರಿಗೆ ಹೊಸ ರೀತಿಯದಾಗಿ ತೋರಬಹುದು. ವಿಶ್ವವಿಖ್ಯಾತ ಅಮೆರಿಕನ್ ಕಾದಂಬರಿಕಾರ ಜಾನ್ ಸ್ಟೈನ್‌ಬೆಕ್ ಈ ವಿಧಾನವನ್ನು ಯಶಸ್ವಿಯಾಗಿ ಬಳಸಿಕೊಂಡಿದ್ದಾನೆ. ಅನೇಕ ವಸ್ತುಗಳನ್ನು ವ್ಯವಸ್ಥಿತವಾಗಿ ಇಟ್ಟು ಒಂದು ಅಂಗಡಿ ರಚಿಸುವಂತೆ, ಅನೇಕ ಹೂಗಳನ್ನು ಸೇರಿಸಿ ಒಂದು ಹಾರ ಹೆಣೆಯುವಂತೆ, ಅನೇಕ ಪಾತ್ರಗಳ ಕತೆಗಳನ್ನು ಬಿಡಿಬಿಡಿಯಾಗಿ ಹೇಳಿ ಒಂದು ಕಾದಂಬರಿ ರಚಿಸುವ ಇಲ್ಲಿನ ತಂತ್ರ ಕನ್ನಡ ವಾಚಕರಿಗೂ ಪ್ರಿಯವಾಗುವುದೆಂದೇ ನನ್ನ ಎಣಿಕೆ. ಪ್ರತಿಯೊಂದು ಕಾದಂಬರಿಯಲ್ಲೂ ಒಂದೇ ಬಗೆಯ ರಚನಾವಿಧಾನವನ್ನು ಬಳಸದೆ, ಹೊಸ ಹೊಸ ತಂತ್ರಗಳನ್ನುಪಯೋಗಿಸಿ ಹೊಸ ಹೊಸ ಪ್ರಯೋಗಗಳನ್ನು ನಡಸಿ ಕನ್ನಡ ಕಾದಂಬರಿಯನ್ನು ಆಧುನಿಕ ಪಾಶ್ಚಾತ್ಯ ಕಾದಂಬರಿಯ ಮಟ್ಟಕ್ಕೇರಿಸುವ ಯತ್ನವನ್ನೂ ನಾವು ಮಾಡಬೇಕಾಗಿದೆಯೆಂದೇ ನನ್ನ ಭಾವನೆ.

ಆ ಹಾದಿಯಲ್ಲಿ ಇದೊಂದು ನನ್ನ ಹೆಜ್ಜೆ.

**ಬಸವರಾಜ ಕಟ್ಟೀಮನಿ**

## ಈ ಲೇಖಕರ ಇತರ ಕೃತಿಗಳು

—o—

**ಕಾದಂಬರಿಗಳು :**

ಸ್ವಾತಂತ್ರ್ಯದೆಡೆಗೆ
ಮಾಡಿ ಮಡಿದವರು
ಜ್ವಾಲಾಮುಖಿಯ ಮೇಲೆ
ಮೋಹದ ಬಲೆಯಲ್ಲಿ
ಬೀದಿಯಲ್ಲಿ ಬಿದ್ದವಳು
ಜರತಾರಿ ಜಗದ್ಗುರು
ಮಣ್ಣು ಮತ್ತು ಹೆಣ್ಣು
ಖಾನಾವಳಿಯ ನೀಲಾ
ನೀ ನನ್ನ ಮುಟ್ಟಬೇಡ
ಜನಿವಾರ ಮತ್ತು ಶಿವದಾರ
ಬಲೆಯ ಬೀಸಿದರು
ನಾನು ಪೋಲೀಸನಾಗಿದ್ದೆ
ಬಂಗಾರದ ಜಿಂಕೆಯ ಹಿಂದೆ

**ಕಥಾಸಂಗ್ರಹಗಳು :**

ಕಾರವಾನ್
ಗುಲಾಬಿ ಹೂ
ಆಗಸ್ಟ ಒಂಭತ್ತು
ಸೆರೆಯಿಂದ ಹೊರಗೆ
ಜೋಳದ ಬೆಳೆಯ ನಡುವೆ

**ನಾಟಕ**

ಪಟ್ಟಣದ ಹುಡುಗಿ

ಸೋದರ ಸಾಹಿತಿ,

ಪ್ರಿಯ ಗೆಳೆಯ,

**ತ. ರಾ. ಸು.**

ಅವರಿಗೆ –

## ಒಂದು....                    ಬಸಲಿಂಗ ಮತ್ತು ಚೆನ್ನಿ

ಮೃದುವಾದ ಹಾಸುಗೆಯ ಮಡಿಲಲ್ಲಿ ಹಾಯಾಗಿ ಮಲಗಿದ್ದ ಚೆನ್ನಿಗೆ ಮೇಲಕ್ಕೇಳಲು ಮನಸ್ಸಾಗಲಿಲ್ಲ.

ಟಕ ಟಕ ಟಕ ಟಕ....

ಸದ್ದಾಗುತ್ತಲೇ ಇತ್ತು ಬಾಗಿಲಿನ ಮೇಲೆ.

"ಇಲ್ಲ. ಇವತ್ತು ಯಾರಿಗೂ ಬಾಗಿಲು ತೆಗೆಯೂದಿಲ್ಲ," ಎಂದು ತನ್ನಷ್ಟಕ್ಕೇ ಹೇಳಿಕೊಂಡು ಕಾಲುಗಳನ್ನು ನೀಳವಾಗಿ ಚಾಚಿ ಸುಖವಾಗಿ ಮಲಗಿಕೊಂಡಳು ಚೆನ್ನಿ.

ತಾಯಿಯ ತೊಡೆಮಡಿಲಿನಂತೆಯೇ ಸುಖದಾಯಕವಾಗಿತ್ತು ಆ ಹಾಸುಗೆ. ಅನ್ಯರಿಗೆ ಸುಖ ಮಾರುವ ಕಾಯಕದಿಂದ ಇದೊಂದು ರಾತ್ರೆಯ ಮಟ್ಟಿಗಾದರೂ ರಜ ಪಡೆದುಕೊಂಡು ಮನದಣಿಯೆ ನಿದ್ದೆ ಮಾಡುವುದೆಂದು ಮೊದಲೇ ನಿಶ್ಚಯಿಸಿದ್ದಳು ಚೆನ್ನಿ.

ಯಾರ ಕಾಟವೂ ಬೇಡ ಈ ದಿನ. ಯಾರ ಕಾಸೂ ಬೇಡ ಈ ದಿನ.

ಈ ಹಾಸುಗೆ, ಈ ಹೊದ್ದಿಕೆ ಮತ್ತು ಅವುಗಳೊಡನೆ ತಾನು. ತನ್ನೊಡನೆ ತನ್ನ ಕನಸು; ಸವಿಸವಿಯಾದ ಸುಂದರ ಸುಂದರ ಕನಸು.

ಟಕ ಟಕ ಟಕ ಟಕ....

ಇನ್ನೂ ಸದ್ದಾಗುತ್ತಲೇ ಇತ್ತು ಬಾಗಿಲಿನ ಮೇಲೆ.

"ಇಲ್ಲ. ನಾ ಓ ಕೊಡೂದಿಲ್ಲ," ಎಂದು ತನ್ನಷ್ಟಕ್ಕೇ ಹೇಳಿಕೊಂಡು ಹೊದ್ದಿಕೆಯನ್ನು ತಲೆಯವರೆಗೂ ಎಳೆದುಕೊಂಡು ಕಣ್ಣು ಮುಚ್ಚಿದಳು ಚೆನ್ನಿ.

ಮತ್ತೆ ಸದ್ದಾಗಲಿಲ್ಲ ಬಾಗಿಲಿನ ಮೇಲೆ.

"ಪೀಡಾ ಹೊಂಟುಹೋಗಿರಬೇಕು," ಎಂದು ಚೆನ್ನಿ ಬಿಡುಗಡೆಯ ಉಸಿರು ಹಾಕುತ್ತಿದ್ದ ಹಾಗೇ ಕೂಗು ಕೇಳಬಂತು.

"ಚೆನ್ನೀ, ಏ ಚೆನ್ನಿ...."

"ಪೀಡಾ ಇನ್ನೂ ಹೋಗಿಲ್ಲ ಹಾಂಗಾದರೆ!" ಎಂದುಕೊಳ್ಳುತ್ತಾ ಅಸ್ವಸ್ಥ ಮನಸ್ಸಿನಿಂದ ಮಗ್ಗುಲು ಬದಲಿಸಿದಳು ಚೆನ್ನಿ. ಓ ಕೊಡದೆ ಸುಮ್ಮನೆ ಬಿದ್ದುಕೊಂಡರಾಯಿತಲ್ಲ. ಬಂದವನು ಕೂಗಿ ಕೂಗಿ ತನಗೇ ಬೇಸರವಾಗಿ ಹೊರಟು ಹೋಗಬಹುದು.

ಆದರಾತ ಹೊರಟುಹೋಗಲಿಲ್ಲ.

"ಚೆನ್ನೀ, ಚೆನ್ನೀ," ಎಂದು ಕೂಗುತ್ತಲೇ ಇದ್ದ ಮತ್ತೆ ಮತ್ತೆ.

ಆತ ನಾಲ್ಕನೆಯ ಬಾರಿ ಕೂಗಿದಾಗ ಆ ಧ್ವನಿಯನ್ನು ಗುರುತಿಸಿಕೊಂಡು ಚೆನ್ನಿ ಥಟ್ಟನೆದ್ದು ಕುಳಿತಳು. ತನಗೆ ಪ್ರಿಯವಾದ ಆ ಧ್ವನಿಯನ್ನು ಅವಳು ಬಹಳ ದಿನಗಳಿಂದ ಆಲಿಸಿರಲಿಲ್ಲ. ಬಸಲಿಂಗನ ಧ್ವನಿಯೇ ಅಲ್ಲವೇ ಅದು? ಈ ಪ್ರಪಂಚದಲ್ಲಿ ತನಗೆ ಆತ್ಮೀಯವಾಗಿರುವ ಏಕಮಾತ್ರ ವ್ಯಕ್ತಿ ಬಸಲಿಂಗ. ನಿಜವಾಗಿ ಅವನೇ ಬಂದಿದ್ದರೆ ತನ್ನ ಬಲುದಿನಗಳ ಬೇಸರವೆಲ್ಲವೂ ನೀಗಿ ಹೋಗುವುದು.

ಅವಳು ಸಂಭ್ರಮದಿಂದಲೇ ಎದ್ದು ಬಾಗಿಲು ತೆಗೆದಳು.

ಕೊಟಡಿಯ ಗೋಡೆಯ ಮೇಲೆ ಉರಿಯುತ್ತಿದ್ದ ಪುಟ್ಟ ದೀಪದ ಬೆಳಕು ಬಸಲಿಂಗನ ಮೇಲೆ ಬಿದ್ದು, ಜರತಾರಿ ರುಮಾಲಿನ ಹಿನ್ನೆಲೆಯಲ್ಲಿ ಎದ್ದು ಕಾಣುತ್ತಿದ್ದ ಅವನ ಹಸನ್ಮುಖವನ್ನು ಪ್ರದರ್ಶಿಸಿತು. ಆ ಕೋಲುಮುಖದಲ್ಲಿ ಆಕರ್ಷಣೀಯವಾಗಿದ್ದುದೆಂದರೆ ಆ ನಗುವೊಂದೇ. ಕಣ್ಣು ಮೂಗು ತುಟಿ ಕೆನ್ನೆ ಎಲ್ಲಾ ಸಾಮಾನ್ಯವಾದುವುಗಳೇ. ಆ ಸಾಮಾನ್ಯತೆಗೆ ತಕ್ಕುದೇ ಆಗಿದ್ದ ತೆಳ್ಳನೆಯ ದೇಹ. ಚೆನ್ನಿಯಂಥ ಬಿನ್ನಾಣಗಿತ್ತಿ ಬಸಲಿಂಗನಂಥ ಸಾಧಾರಣ ವ್ಯಕ್ತಿಯನ್ನು ಒಲಿದುದೂ ಆಶ್ಚರ್ಯದ ವಿಚಾರವೇ ಸರಿ. ಬಸಲಿಂಗನೂ ಹಾಗೆ ಅಚ್ಚರಿಪಟ್ಟುಕೊಂಡುದುದು ಅನೇಕ ಬಾರಿ.

ಅವನನ್ನು ಒಳಗೆ ಬರಮಾಡಿಕೊಂಡು, ಕದವಿಕ್ಕಿ, ಚಿಲಕ ಹಾಕಿ ಚೆನ್ನಿ ಅವನನ್ನು ಬಳಸಿನಿಂತು, ಅವನ ಮುಖವನ್ನು ಅತ್ತಿತ್ತ ಹೊರಳಿಸಿದಳು, ಆನಂದದಿಂದಲೂ ಸಂಭ್ರಮದಿಂದಲೂ ಮತ್ತೆ ಮತ್ತೆ ಅವನನ್ನು ದಿಟ್ಟಿಸಿ

ನೋಡಿದಳು. ಹರ್ಷದ ಶಿಖರಕ್ಕೇರಿದಂತೆ ಭಾಸವಾಗುತ್ತಿತ್ತು ಬಸಲಿಂಗನಿಗೆ. ಚೆನ್ನಿಯ ಆ ಪುಟ್ಟ ಕೊಟಡಿಯಲ್ಲಿಯೆ ಆತ ಇಂದ್ರಲೋಕವನ್ನು ಕಾಣ ತೊಡಗಿದ್ದ.

"ಇಷ್ಟು ದಿನಾ ಪತ್ತೆಯಿಲ್ಲದವ ಈಗ ಒಮ್ಮಿಂದೊಮ್ಮೆ ಎಲ್ಲಿಂದ ಬಂದಿಯೋ ಬಸಲಿಂಗಾ?"

"ಎಲ್ಲಿಂದ ಅಂದರೆ....ಬಸ್ ಸ್ಟಾಂಡಿನಿಂದ. ಮತ್ತೇನು ಆಕಾಶದಿಂದ ಇಳಿದುಬಂದೆನಂತ ತಿಳದೀಯೇನು ನೀ?" ಎಂದು ನಗುನಗುತ್ತಲೇ ನುಡಿದು ಅವಳ ಕೆನ್ನೆಯನ್ನು ಮೃದುವಾಗಿ ಚಿವುಟಿದ ಬಸಲಿಂಗ.

ಅವನಿಗೆ ಮತ್ತಷ್ಟು ಬಿಗಿಯಾಗಿ ಅಂಟಿಕೊಳ್ಳುತ್ತ ಚೆನ್ನಿಯೆಂದಳು.

"ಎಷ್ಟು ದಿನಗಳಿಂದ ನಿನ್ನ ಹಾದಿ ಕಾಯುತಿದ್ದೆನಲ್ಲ ಬಸಲಿಂಗಾ. ನೀ ನನ್ನ ಮರತೇಬಿಟ್ಟಿದ್ದಿಯೇನು? ಇಲ್ಲಾ, ಇನ್ಯಾವಳಾದರೂ ಗಂಟು ಬಿದ್ದಾಳೋ ಶಹರದಾಗ?"

"ನನ್ನ ಹತ್ತರ ಗಂಟು ಇದ್ದರೆ ಹೌದಲ್ಲೋ ಯಾವಳಾದರೂ ಗಂಟು ಬೀಳೂದು! ಒಂದು ವ್ಯಾಳೆ ಯಾವಳಾದರೂ ಬಂದರೂ ನಾ ಕರಕೋಬೇಕಲ್ಲ ಅವಳನ್ನ?"

ಆ ಮಾತಿನಿಂದ ಚೆನ್ನಿ ಇನ್ನಷ್ಟು ಸಂತುಷ್ಟಳಾದಳು. ಅಂತೂ ಬಸಲಿಂಗ ತನ್ನನ್ನು ಮರೆತಿಲ್ಲ ಹಾಗಾದರೆ!

"ಯಾವಾಗ ಉಂಡೀದೀಯೋ ಏನೋ. ಅನ್ನ ಮಾಡುತ್ತೀನಿ," ಎಂದು ಚೆನ್ನಿ ಅವನನ್ನು ಬಿಟ್ಟು ಅಡುಗೆಯ ಕೊಟಡಿಗೆ ನಡೆದಳು.

"ಏನೂ ಹಸಿವಿಲ್ಲ ಬಿಡೇ. ಯಾಕೆ ತ್ರಾಸ ಮಾಡಿಕೊಂತೀ?" ರುಮಾಲನ್ನೂ ಕೋಟನ್ನೂ ತೆಗೆದು ಗೂಟಕ್ಕಿಡುತ್ತಾ ಬಸಲಿಂಗ ಹೇಳಿದ.

"ಎಷ್ಟು ಗಂಟೇಕ್ಕ ಓರೆಕೋರೆಯಿಂದ ಹೊಂಟದ್ದಿ ಬಸಲಿಂಗಾ?"

"ಹೊಂಟಾಗ ಮಧ್ಯಾನ್ನ ಆಗಿತ್ತು. ನಡುವೆ ಮೋಟರಿಗೇನೋ ಧಾಡಿ ಯಾಗಿ – ಹೂಂ, ಅದಕ್ಕೆ ಎಂದು ಧಾಡಿಯಾಗೂದಿಲ್ಲ ಅನ್ನು – ಎರಡು ತಾಸು ಒದರುತಾ ಬಿದ್ದಿತ್ತು. ಆಮ್ಯಾಲ ಪ್ಯಾಸಿಂಜರರೆಲ್ಲಾ ಇಳಿದು ಅದನ್ನ ನುಗಿಸಿ ಕೊಂಡು ಒಂದು ಮೈಲು ಬಂದಮ್ಯಾಲ ಶಕ್ತಿ ಬಂತು ಗಾಡಿಗೆ. ಅಷ್ಟರೊಳಗೆ ನಮ್ಮ ಶಕ್ತಿ ಮಾತ್ರ ಎಲ್ಲಾ ಹೋಗಿಬಿಟ್ಟಿತ್ತು. ಏನ್ಮಾಡೂದು ಚೆನ್ನೀ, ಈ

ಬಸ್ಸಿನಗಳ ಸಾವಾಸ ಅಂದರೆ ಹೀಂಗೇ ಯಾವಾಗ್ಲೂ," ಎಂದು ಹೇಳುತ್ತಾ ಮಧ್ಯೆ ಮಧ್ಯೆ ನಗುತ್ತಾ ಅಡುಗೆಯ ಕೋಟಡಿಗೇ ಬಂದು, ಮೂಲೆಯಲ್ಲಿದ್ದ ಬಚ್ಚಲಿನಲ್ಲಿ ಕೈಕಾಲು ಮುಖ ತೊಳೆದುಕೊಂಡು, ಒಂದು ಮಣೆಯೆಳೆದು ಅದರ ಮೇಲೆ ಗಂಭೀರವಾಗಿ ಕುಳಿತುಕೊಂಡ ಬಸಲಿಂಗ.

" ಹೂಂ. ನೀ ಹ್ಯಾಂಗ ಇದ್ದೀ? ಎಲ್ಲಾ ಅರಾಮು ಹೌದಲ್ಲೋ?"

ಉರಿಯುತ್ತಿದ್ದ ಒಲೆಯ ಮೇಲೆ ಅನ್ನದ ಗಡಿಗೆಯನ್ನಿಡುತ್ತ ಚೆನ್ನಿ ಹೇಳಿದಳು :

" ಎಲ್ಲೀ ಅರಾಮು ಬಸಲಿಂಗಾ? ಸಾಕುಸಾಕಾಗಿ ಹೋಗ್ಯೆತಿ ಈ ಬಾಳೀವು."

" ಅದ್ಯಾಕೇ? ನಿನಗೇನಾತು ಅಂಥಾ ಧಾಡಿ?"

ಅಳುವುಕ್ಕೆ ಬರುವ ಹಾಗಾಯಿತು ಚೆನ್ನಿಗೆ. ಒಳ್ಳೆಯ ಪ್ರಶ್ನೆಯೆ ಬಸಲಿಂಗನದು. ಈ ಬಾಳಿನಲ್ಲಿ ತನಗೆ ಪರಮಸುಖವಿದೆಯೆಂದೇ ಅವನು ಭಾವಿಸಿಕೊಂಡಿರಬೇಕು. ಪಾಪ! ಅವನಿಗೇನು ಗೊತ್ತು ಇದರ ಸಂಕಟ....

" ಮಲ್ಲವ್ವ ತೀರಿಕೊಂಡಳಲ್ಲ ಬಸಲಿಂಗಾ. ನಿನಗೆ ಗೊತ್ತಿಲ್ಲೇನು?"

" ಅದೂ ಗೊತ್ತಾಯ್ತಲ್ಲ ಇದೇ ಈಗ."

" ಆ ಮನೀಗೆ ಹೋಗಿ ಬಂದಿಯೇನು?"

" ಹೌದು ಮತ್ತೆ! ನನಗೇನು ಗೊತ್ತು ಇದೆಲ್ಲಾ? ಬಸ್‌ಸ್ಟಾಂಡಿನಿಂದ ನೆಟ್ಟಗೆ ಅಲ್ಲಿಗೆ ಹೋಗಿದ್ದಿನಿ. ಯಾರೋ ಇನ್ನೊಬ್ಬಾಕೆ ಅದಾಳಲ್ಲ ಆ ಮನಿಯಾಗ, ಆಕಿ ಹೇಳಿದಳು – ಮಲ್ಲವ್ವ ಸತ್ತು ನಾಕು ತಿಂಗಳಾತು – ನೀ ಹೊಸಾ ಮನೀ ಮಾಡಿ ಇಲ್ಲಿ ಇದ್ದೀ ಅಂತ. ಅಲ್ಲೇ ಚೆನ್ನೀ, ಇನ್ನೂ ಎಷ್ಟು ಗಟ್ಟಿಮುಟ್ಟ ಇತ್ತಲ್ಲೇ ಆ ಮುದುಕಿ ಕೋಣ ಇದ್ದಂಗ. ಒಮ್ಮಿಂದೊಮ್ಮೆಲೆ ಹ್ಯಾಂಗ ಸತ್ತಿತೇ?"

" ಇನ್ನೂ ಇಪ್ಪತ್ತು ವರ್ಷ ಬದುಕಬೇಕು ಅಂತ ಆಸೆಯಿತ್ತಲ್ಲ ಅವಳಿಗೂ. ಏನೋ ಹೋಗುವ ವ್ಯಾಳೇ ಬಂತು. ಹೋದಳು. ಹೋಗುವಾಕಿ ಹೋಗು ವಾಗಾದರೂ ನನಗೆ ಏನಾರೆ ಬಿಟ್ಟು ಹೋದಳು ಅಂತೀಯಾ ಬಸಲಿಂಗಾ, ಹತ್ತು ವರ್ಷ ಅವಳ ಪೆಟ್ಟಿಗೀ ತುಂಬಿಸಿದ ನನಗೆ...."

" ಹಾ? ಏನೂ ಬಿಡಲಿಲ್ಲಾ?"

"ಬಿಟ್ಟಳಲ್ಲ ನಡುನೀರಾಗ ಕೈ. ಅವಳಿಗಾಗಿ ನಾ ಜೀವ ತೇದದ್ದು ನೆನೆದರ ಹೊಟ್ಟ್ಯಾಗ ಬೆಂಕಿ ಬೀಳುತ್ತೈತಿ, ಬೆಂಕಿ. ನಾ ದುಡಿದದ್ದೆಲ್ಲಾ ಗಂಟು ಕಟ್ಟಿ ಇಟ್ಟು ಸಾಯುವಾಗ ತಮ್ಮಾಗ ಕೊಟ್ಟು ಹೋದಳಲ್ಲ ಅದನ್ನೆಲ್ಲಾ...."

"ಎಲ್ಲೀ ತಮ್ಮ ಬಂದನೇ ಅವ?"

"ಎಲ್ಲಿಂದಾ ಬಂದನೊ. ಇವಳು ಬದುಕಿರೂತನಕಾ ಇವಳ ಮಾರೀ ಕೂಡಾ ನೋಡಾಕ ಬಂದಿರಲಿಲ್ಲ ಅವ ಒಮ್ಮೆ ಕೂಡಾ. ಹೊಟ್ಟ್ಯಾಗ ಹುಟ್ಟಿದ ಮಗಳಿಗಿಂತಾ ಹೆಚ್ಚಾಗಿ ಇವಳ ಸೇವಾ ಮಾಡಿದ ನನಗಿಂತ ಇವನೇ ಹೆಚ್ಚಿನವ ಆದ. ರೊಕ್ಕ ಬಂಗಾರ ಮನಿ ಎಲ್ಲಾ ಅವನ ಹೆಸರಿಗೇ ಮಾಡಿ ನನಗ ಪರಟೀ ಕೊಟ್ಟು ಹೋದಳು...."

ಹೇಳುತಿದ್ದ ಹಾಗೇ ಚೆನ್ನಿಯ ಕಣ್ಣು ತೇವಗೊಂಡಿತು. ಬಸಲಿಂಗನಿಗೂ ವ್ಯಸನವಾಗದಿರಲಿಲ್ಲ. ಚೆನ್ನಿಯ ವಿಷಯಕವಾದ ಅನುಕಂಪ ಬೇರೆ; ತನ್ನ ಹೊಲಮನೆಗಳ ಕಹಿನೆನಹು ಬೇರೆ. ಹತ್ತು ವರ್ಷಗಳ ಹಿಂದೆ ಚೆನ್ನಿಗೆ ಮರುಳಾಗಿ ಆ ಊರಿನಲ್ಲೇ ಇದ್ದ ತನ್ನ ಮನೆಯನ್ನೂ ಹೊಲಗಳನ್ನೂ ಮಲ್ಲವ್ವನ ಹೆಸರಿಗೆ ಬರೆದುಕೊಟ್ಟು ಕೈಯಲ್ಲಿದ್ದ ಕಾಸೆಲ್ಲ ತೀರಿದ ತರುವಾಯ ಅವಳಿಂದ ತಿರಸ್ಕೃತನಾಗಿ ಓರೆಕೋರೆ ನಗರಕ್ಕೆ ಹೊರಟುಹೋಗಿದ್ದವನು ಬಸಲಿಂಗ. ಮಲ್ಲವ್ವ ಅವನನ್ನು ಹೊರದೂಡಿದ್ದಳಾದರೂ ಚೆನ್ನಿ ಮಾತ್ರ ಅವನ ಸ್ನೇಹವನ್ನು ಬಿಟ್ಟುಕೊಡದೆ ಇಷ್ಟು ವರ್ಷಗಳವರೆಗೂ ಕಾದುಕೊಂಡು ಬಂದಿದ್ದಳು. ತನ್ನ ಆಸ್ತಿ ಕೈಬಿಟ್ಟು ಹೋದ ಬಗೆಗೂ ಅವನಿಗೆ ಅಂಥ ದುಃಖವೇನೂ ಆಗಿರಲಿಲ್ಲ. ಮಲ್ಲವ್ವನ ತರುವಾಯ ಅದೆಲ್ಲವೂ ತನ್ನ ಪ್ರಿಯತಮೆಯದೇ ಆಗುವುದೆಂಬ ಸಮಾಧಾನ ಅವನಿಗಿತ್ತು. ಅವಳಿಗಾಗಿ ತನ್ನ ಜೀವವನ್ನು ಕಳೆದುಕೊಳ್ಳಲು ಸಿದ್ಧನಾಗಿದ್ದ ಬಸಲಿಂಗ ಹೊಲಮನೆಗಳನ್ನು ಕುರಿತು ಎಂದೂ ಶೋಕಿಸಿರಲಿಲ್ಲ.

ಆದರೆ, ಇಂದು ಚೆನ್ನಿಯ ಮುಖದಿಂದ ಅವುಗಳಿಗೊದಗಿದ ಗತಿಯನ್ನು ತಿಳಿಯುತ್ತಲೂ ಅವನಿಗೆ ಹತ್ತು ವರ್ಷಗಳ ಅವಧಿಯಲ್ಲಿ ಅದೇ ಮೊದಲನೆಯ ಬಾರಿಗೆ ದುಃಖವೆನ್ನಿಸಿತು. ಎಂಥ ಭಯಂಕರ ಅನ್ಯಾಯವಾಯಿತಲ್ಲ. ತನ್ನ ಹೊಲಮನೆಗಳು ಯಾವನೋ ಅಸಾಮರ್ಥ್ಯೆಯನ ಉಡಿಗೆ ಬಿದ್ದುವಲ್ಲ....

ಬಸಲಿಂಗನ ಮನಸ್ಸಿನಲ್ಲಿನ ಯೋಚನೆಗಳನ್ನು ಚೆನ್ನಿಯೂ ಅರಿತು ಕೊಂಡಳೇನೊ, ಕೇಳಿದಳು :

" ನಿನ್ನ ಹೊಲಾಮನೀ ಕೂಡಾ ಅವಗೇ ಹೋತು ಅಂತ ಕೆಟ್ಟನಿಸುತೈತಿ ಹೌದಲ್ಲೋ ಬಸಲಿಂಗಾ ?"

ಕೂಡಲೆ ಮಾತನಾಡಲಿಲ್ಲ ಬಸಲಿಂಗ. ಮನಸ್ಸಿನಲ್ಲಿಯೆ ಅವನು ಯಾವುದೋ ನಿರ್ಧಾರಕ್ಕೆ ಬಂದು ಮುಟ್ಟುತ್ತಿದ್ದ ಹಾಗಿತ್ತು.

ಒಂದು ಗಳಿಗೆ ಸುಮ್ಮನಿದ್ದು ಅವನು ಹೇಳಿದ :

" ಇಷ್ಟು ದಿನಾ ನನಗೇನು ದುಕ್ಕ ಇರಲಿಲ್ಲ ಚೆನ್ನೀ. ಖರೇ ಹೇಳುತೀನಿ. ಇಂದಿಲ್ಲ ನಾಳೆ ಅದೆಲ್ಲಾ ನಿನಗೇ ಸಿಗುತೈತಿ ಅಂತ ನಂಬಿ ನಾ ಸುಮ್ಮನಿದ್ದಿನಿ ನನ್ನ ಹೊಲಾ ನನ್ನ ಮನಿ ಅಂತ ಒಮ್ಮೆ ಕೂಡಾ ನೆನಪಾಗಿರಲಿಲ್ಲ. ನನ್ನ ಕೈಯಾಗಿದ್ದರೇನು, ನಿನ್ನ ಕೈಯಾಗಿದ್ದರೇನು, ಎಲ್ಲಾ ಒಂದೇ ಅಲ್ಲೇನೇ ಚೆನ್ನೀ? ಆದರೆ, ಈಗ ಗೊತ್ತಾತಲ್ಲ. ಅವು ನನ್ನ ಕೈಯಾಗೂ ಉಳೀಲಿಲ್ಲ, ನಿನ್ನ ಕೈಯಾಗೂ ಉಳೀಲಿಲ್ಲ. ಯಾವನೋ ಏನೂ ಸಂಬಂಧ ಇಲ್ಲದವನ ಕೈಯಾಗ ಹೋದವು...."

ಮತ್ತೊಂದು ಗಳಿಗೆ ಸುಮ್ಮನಿದ್ದು ಅವನು ಹೇಳಿದ:

" ಅವನ್ನ ಹೀಂಗೇ ಬಿಡೂದು ಬ್ಯಾಡ ಚೆನ್ನೀ. ಏನಾರೆ ಮಾಡಿ ನಮ್ಮ ಹೊಲಾ ಮನೀ ಮತ್ತೆ ನಮ್ಮ ಕೈಯಾಗ ತಗೊಳ್ಳೂಣು."

" ಅವ ಯಾಕ ಕೊಡಾಕ ಬಂದಾನು ?"

" ಪುಕಟ ಸಿಕ್ಕದ್ದನ್ನ ಅವನಾಗೇ ಯಾಕ ಕೊಟ್ಟಾನು ಚೆನ್ನೀ? ರೊಕ್ಕಾ ಕೊಟ್ಟು ತಗೊಳ್ಳೂಣು. ಎಷ್ಟೇ ಹೋದರೂ ಚಿಂತಿಲ್ಲ. ಅವನ್ನ ಮಾತ್ರ ಬಿಡೂದು ಬ್ಯಾಡ."

" ನೀ ಹೇಳೂದು ಕೇಳಿದರ ನಿನಗೇನೋ ಗಂಟು ಸಿಕ್ಕಂಗ ಕಾಣುತೈತಿ," ಎಂದು ನುಡಿದು ಚೆನ್ನಿ ಕಿಲಕಿಲನೆ ನಕ್ಕಳು.

" ಹೂಂ. ಅಂಥಿಂಥಾ ಗಂಟಲ್ಲ. ದೊಡ್ಡ ಗಂಟೇ ಸಿಕ್ಕೈತಿ."

" ಖರೇ ಅಂದರೂ ?" ನಗುವನ್ನು ತಡೆದು ಕಣ್ಣುಗಳನ್ನರಳಿಸಿ ಕೇಳಿದಳು ಚೆನ್ನಿ.

" ಖರೇ ಅಂದರೂ."

" ಹಾ ? ಎಷ್ಟು ಸಿಕ್ಕೈತಿ ?"

"ನಿನ್ನ ಹಾಸಿಗೆ ಹಿಡಿಸುವಷ್ಟು!" ಎಂದು ಹೇಳುತ್ತಾ ಕಣ್ಣು ಮಿಟುಕಿಸಿ ಹುಬ್ಬು ಹಾರಿಸಿ ನಕ್ಕ ಬಸಲಿಂಗ.

ಆಗಲೂ ಅರ್ಥವಾಗಲಿಲ್ಲ ಚೆನ್ನಿಗೆ. ಬಸಲಿಂಗ ತಮಾಷೆ ಮಾಡುತ್ತಿರ ಬಹುದೆಂದೂ ಅವಳಿಗೆ ಹೊಳೆಯಲಿಲ್ಲ.

ಮಣೆಯನ್ನು ಬಿಟ್ಟು ಅವಳ ಹತ್ತಿರ ಸರಿದು ಬಂದು ತನ್ನ ತೋಳುಗಳಲ್ಲಿ ಅವಳನ್ನು ಬಿಗಿದುಕೊಳ್ಳುತ್ತ ಬಸಲಿಂಗ ಹೇಳಿದ:

"ನನಗೆ ಸಿಕ್ಕ ಗಂಟು ಅಂದರಿದೇ ನೋಡು."

ಆಗಲೂ ಅರ್ಥಮಾಡಿಕೊಳ್ಳಲಾರದಷ್ಟು ಅಜ್ಞಳಾಗಿರಲಿಲ್ಲ ಚೆನ್ನಿ. ಹುಸಿ ಮುನಿಸಿನಿಂದ ಅವನ ಎದೆಗೆ ಮೆಲ್ಲಗೆ ಹೊಡೆಯುತ್ತ ಅವಳೆಂದಳು:

"ಅಂತೂ ಶಹರಕ್ಕ ಹೋಗಿ ಬಲೇ ಜೆರಿಕಿ ಆಗಿದ್ದೀ ಮಾತಿನಾಗ! ನಾ ಏನೋ ಅಂತ ತಿಳಿದಿದ್ದಿನಿ. ಏನು ಪಕ್ಕಾ ಅದೀಯೋ! ಎಲ್ಲಿ ಕಲಿತಿ ಇಂಥಾ ಮಾತೆಲ್ಲಾ?"

"ಆರು ಮಂದಿ ವಕೀಲರ ಕಾರಕೂನ ಆಗಿದ್ದೀನಿ. ಇಂಥಾ ಸೊಟ್ಟ ಮಾತು ಕಲಿಯೂದು ಏನು ದೊಡ್ಡದು!"

"ಆರು ಮಂದಿ ವಕೀಲರ ಕಾರಕೂನ!" ಬಲಗೈಯ ತರ್ಜನಿಯನ್ನು ಗಲ್ಲಕ್ಕಾನಿಸಿ ವಿಸ್ಮಯದಿಂದ ಕೇಳಿದಳು ಚೆನ್ನಿ. "ಕಾರಕೂನ ಎಂದಿನಿಂದ ಆದಿಯೋ ಬಸಲಿಂಗಾ?"

"ಎಂದಿನಿಂದ ಆದೆನೋ ಏನೇನು ಆದೆನೋ ನನಗೇ ಗೊತ್ತಿಲ್ಲ ನೆಟ್ಟಗೆ!" ಎಂದು ಹೇಳಿ ಮತ್ತೆ ನಕ್ಕ ಬಸಲಿಂಗ.

"ಅಂದರೆ? ವ್ಯಾಪಾರ ಬಿಟ್ಟುಬಿಟ್ಟೆಯಾ?"

"ವ್ಯಾಪಾರಾ? ವ್ಯಾಪಾರ....ಹೂಂ. ಈಗ ನಾ ಮಾಡುತ್ತಿರೂದೂ ಒಂದು ವ್ಯಾಪಾರನೇ."

"ಅಂದರೆ? ಕಾರಕೂನೀ?"

"ಹೂಂ. ಈ ಕಡೆ ಕಾರಕೂನೀನೂ ಮಾಡುತಾ ಇದೀನಿ ಈ ಕಡೆ ವ್ಯಾಪಾರನೂ ಮಾಡುತಾ ಇದೀನಿ. ಕಾರಕೂನೀನೂ ಒಂದು ತರದ ವ್ಯಾಪಾರನೇ."

"ಅದ್ಯಾಕ ವ್ಯಾಪಾರ ಆದೀತೋ? ಕಾರಕೂನೀ ಅಂದರ ನನಗೇನು

ಗೊತ್ತಿಲ್ಲಂತ ತಿಳಿದೀಯಾ? ಎಷ್ಟೋ ಮಂದಿ ಕಾರಕೂನರನ್ನ ನೋಡಿನಲ್ಲ ನಾನೂ. ಬಿಡು, ಬಿಡು, ಇಲ್ಲದ್ದೊಂದು ಹೇಳಬ್ಯಾಡ."

"ಇದ್ದದ್ದನ್ನೇ ಹೇಳುತಾ ಇದೀನಿ ಚೆನ್ನೀ. ನೀ ನೋಡಿದ ಕಾರಕೂನರು ಬ್ಯಾರೆ. ಈ ಕಾರಕೂನೀ ಬ್ಯಾರೆ. ಕೆಲಸ ಇಲ್ಲದ ವಕೀಲರ ಕಾರಕೂನರನ್ನ ನೀ ಇಲ್ಲೀ ತನಕಾ ನೋಡಿದಾಂಗ ಕಾಣೂದಿಲ್ಲ."

"ಕೆಲಸ ಇಲ್ಲದ ವಕೀಲರಂದರೆ?"

"ಅಂದರೆ ಪ್ರಾಕ್ಟೀಸ್ ಇಲ್ಲದವರು. ಇಂಥವರಿಗೆ ಶಹರದಾಗ ಸಂಡೇ ಪ್ಲೀಡರ್ ಅಂತ ಕರೀತಾರೆ. ಈ ಸಂಡೇ ಪ್ಲೀಡರ್‌ಗಳ ಸಂಡೇ ಕಾರಕೂನ ನೋಡು ಈ ಬಸಲಿಂಗ."

"ಏನೇನೋ ವಿಚಿತ್ರಾನೇ ಹೇಳುತಾ ಇದೀಯಲ್ಲ. ಓರೆಕೋರೆ ಶಹರದಾಗ ಇಂಥಾ ವಿಚಿತ್ರಾನೇ ತುಂಬ್ಯೈತ್ಯೋ ಏನು ಮಣ್ಣೋ!"

"ಇಂಥಾದ್ದಷ್ಟೇ ಯಾಕೇ ಚೆನ್ನೀ, ಇದಕ್ಕಿಂತೂ ಚಿತ್ರ ವಿಚಿತ್ರಾ ತುಂಬ್ಯೈತಿ ಆ ಊರಾಗೆ. ಒಂದೊಂದರ ಕಥೀ ಹೇಳುತಾ ಕುಂತರೆ ಸಾವಿರ ರಾತ್ರಿ ಸಾಕಾಗಲಿಕ್ಕಿಲ್ಲ. ಅರೇಬಿಯಾದ ಸಾವಿರದಾ ಒಂದು ರಾತ್ರಿಯ ಕಥಿ ಅಂತ ಹೇಳುತಾರೆ. ಅದರವ್ಯಾಲ ಒಂದು ಸಿನಿಮಾ ಕೂಡಾ ತಯಾರ‍್ಮಾಡಿದ್ದರಲ್ಲ. ನೀನೂ ನೋಡಿರಬಹುದೋ ಏನೊ. ಅದನ್ನು ಮೀರಿಸುವ ಹಾಂಗಿದಾವೆ ನೋಡು ನಮ್ಮ ಓರೆಕೋರೆ ನಗರದ ಮಂದಿಯ ಕಥಿ. ಏನು ಹೇಳಲಿ ಚೆನ್ನೀ ಅಲ್ಲಿಯ ಮಜಾವ್!"

"ಹಾಂಗಾದರೆ ನೀನೂ ಮಜಾವಾಗೇ ಇದ್ದೀ ಅನ್ನು ಆ ಊರಾಗ."

"ನನ್ನ ಮಜಾ ಎಲ್ಲಾ ಇಲ್ಲೇ ಇರುವಾಗ ಅಲ್ಲೇನು ಮಾಡಲಿ ನಾ ಮಜಾ? ಅದಕ್ಕೇ ನಿನ್ನ ಕರಕೊಂಡು ಹೋಗೂಣಾಂತ ಬಂದೀನಿ."

"ಖರೇ ಅಂದರೂ?"

"ಮತ್ತೇನು ಆಣೀ ಮಾಡಲೇನು ಗುಡ್ಡದ ದೇವೀದು?"

ಗಡಿಗೆಯಲ್ಲಿ ಅನ್ನದ ಎಸರು ಕಡಲ ತೆರೆಗಳಂತೆ ಎದ್ದೆದ್ದು ಬೀಳುತ್ತಿತ್ತು. ಹುಟ್ಟು ಹಾಕಿ ಅನ್ನ ತಿರುವುತ್ತಿದ್ದ ಚೆನ್ನಿ ಒಂದೆರಡು ನಿಮಿಷ ಮೌನವಾಗಿ ಕುಳಿತು ಯೋಚಿಸುತ್ತಿದ್ದಳು.

ಬಸಲಿಂಗನ ಜೊತೆಗೆ ಹೊರಟುಬಿಡುವುದೇ ಓರೆಕೋರೆ ನಗರಕ್ಕೆ? ಅಲ್ಲಿ ಯಾದರೂ ನೆಮ್ಮದಿ ಲಭಿಸಬಹುದೇ ತನ್ನ ಜೀವಕ್ಕೆ?

ಬಸಲಿಂಗನ ಜೊತೆಯಲ್ಲಿರುವುದೇ ಒಂದು ಆನಂದದ ವಿಚಾರ ಎಂದು ಹೇಳುತ್ತಿತ್ತು ಅವಳ ಹೃದಯ. ಎಷ್ಟು ದಿನಗಳಿಂದ ಅವನ ಆಗಮನಕ್ಕಾಗಿ ಹಂಬಲಿಸುತ್ತಿರಲಿಲ್ಲ ಅವಳ ಮನಸ್ಸು! ಮಲ್ಲವ್ವ ತೀರಿಕೊಂಡಾಗಲೇ ಸವದತ್ತಿಯು ಬಗೆಗೆ ಬೇಸರು ಹುಟ್ಟಿಕೊಂಡಿತ್ತು ಚೆನ್ನಿಗೆ. ಮಲ್ಲವ್ವನ ಮನೆಯನ್ನು ಬಿಟ್ಟು ಬೇರೆ ಮನೆ ಹಿಡಿದು ಸ್ವತಂತ್ರವಾಗಿ ಕಸಬಿಗೆ ನಿಲ್ಲಲು ಉತ್ಸಾಹವಿರಲಿಲ್ಲವಾದರೂ ಬೇರೆ ವಿಧಿಯಿರಲಿಲ್ಲವೆಂದು ಮನಸ್ಸಿಲ್ಲದ ಮನಸ್ಸಿನಿಂದ ಈ ಮನೆ ಹೂಡಬೇಕಾಗಿ ಬಂದಿತ್ತು. ಹಳೆಯ ಗಿರಾಕಿಗಳಿಗೇನೂ ಕೊರತೆಯಿರಲಿಲ್ಲ. ಅವಳನ್ನು 'ಕಾಯಂ' ಆಗಿ ಇಟ್ಟುಕೊಳ್ಳಬಯಸುವವರಿಗೂ ಅಭಾವವಿರಲಿಲ್ಲ. ತಿಂಗಳು ತಿಂಗಳೂ ಕನಿಷ್ಠ ಪಕ್ಷಕ್ಕೆ ನೂರಿನ್ನೂರು ರೂಪಾಯಿಗಳವರೆಗೂ ಸಂಪಾದನೆ ಯಾಗುವಂತಿದ್ದಿತಾದರೂ ಅವಳ ಮನಸ್ಸು ಪ್ರಫುಲ್ಲವಾಗಿರಲಿಲ್ಲ. ಆ ಓಣಿ, ಆ ಊರು, ಆ ಜನ ಎಲ್ಲವೂ ಬೇಡವೆನ್ನಿಸಿತ್ತು. ಮನಃಪೂರ್ವಕವಾಗಿ ಪ್ರೀತಿಸುವ ಗಂಡಸೊಬ್ಬನನ್ನು ಕಟ್ಟಿಕೊಂಡು ಹಾಯಾಗಿ ಬದುಕಬೇಕೆಂದು ಮನಸ್ಸು ಬಯಸುತ್ತಿತ್ತು. ಅಂಥ ಸಂದರ್ಭಗಳಲ್ಲೆಲ್ಲ ಅವಳಿಗೆ ಬಸಲಿಂಗನ ನೆನಪಾಗದಿರುತ್ತಿರಲಿಲ್ಲ.

ತನಗಾಗಿ ಹೊಲ ಮನೆ ಕಳೆದುಕೊಂಡು ಹುಟ್ಟಿದೂರನ್ನು ತ್ಯಜಿಸಿ ದೇಶಾಂತರ ಹೋಗಿದ್ದ ಬಸಲಿಂಗನ ವಿಚಾರವಾಗಿ ಅವಳಲ್ಲಿ ಮೊದಲಿನಿಂದಲೂ ಕನಿಕರವಿತ್ತು. ಅಂಥ ಸಾಧಾರಣ ದರ್ಜೆಯ ವ್ಯಕ್ತಿಯನ್ನು ಅವಳು ಪ್ರೀತಿಸಲು ಆ ಕನಿಕರವೇ ಮುಖ್ಯ ಕಾರಣವಾಗಿರಲು ಸಾಕು. ಅವಳ ಹತ್ತಿರ ಬರುತ್ತಿದ್ದ ಇತರ ವಿಟಪುರುಷರು ಒಂದು ಬಾರಿಯೂ ಆಡದಿದ್ದ ಮಾತನ್ನು ಬಸಲಿಂಗ ಆಡಿದ್ದುದಲ್ಲದೆ ಆಡಿದಂತೆ ಮಾಡಲೂ ಸಿದ್ಧನಾಗಿದ್ದುದು ಅವನ ಕುರಿತಾದ ಮೆಚ್ಚುಗೆಯನ್ನು ಹೆಚ್ಚಿಸಿತ್ತು.

ಎರಡು ವರ್ಷಗಳ ಹಿಂದೊಂದು ಬಾರಿ ಇಲ್ಲಿಗೆ ಬಂದಿದ್ದಾಗಲೇ "ನನ್ನ ಸಂಗಡ ಬಂದುಬಿಡ್ತೀಯಾ ಚೆನ್ನೀ ಶಹರಕ್ಕೆ?" ಎಂದು ಕೇಳಿದ್ದ ಬಸಲಿಂಗ.

"ನಿನಗೇನು ಹುಚ್ಚು ಹಿಡದೈತೇನೋ?" ಎಂದು ಅವಳು ಹಾಸ್ಯ ಮಾಡಿದ್ದಳು.

"ಹೌದು ಚೆನ್ನೀ. ಹುಚ್ಚು ಹಿಡಿದೈತಿ. ಹಿಡಿಸಿದಾಕೆ ನೀನೇ!" ಎಂದು ಅವನೂ ಹಾಸ್ಯವಾಗಿಯೇ ಹೇಳಿದ್ದ.

"ಹೂಂ. ಈಗೇನು ಮಾಡಬೇಕಂತೀ? ಹುಚ್ಚು ಹಿಡಿದಿದ್ದರೆ ಹೋಗು ಹುಚ್ಚರ ಆಸ್ಪತ್ರೆಗೆ. ಅಲ್ಲೀ ಇರಬೇಕಲ್ಲ ಅದು ಶಹರದಾಗ?"

"ಐತಿ. ಆದರೆ ಅಲ್ಲಿ ನನ್ನ ಹುಚ್ಚು ಬಿಡೂದಿಲ್ಲ ಚೆನ್ನೀ."

"ಮತ್ತೆ?"

"ನೀ ನನ್ನ ಕೈಹಿಡಿದು ಬಂದು ನನ್ನ ಪ್ರೀತಿಯ ಹೆಂಡತಿಯಾಗಿ ನನ್ನ ಮನಿಯಾಗಿದ್ದರೆ ಹಾ ಹಾ ಅಂತ ಹೊರಟುಹೋಗುತ್ತೈತಿ ಈ ಹುಚ್ಚು!"

"ಮೆಲ್ಲಗ...ಮೆಲ್ಲಗ....ಮುದುಕಿಗೆಲ್ಲಾದರೂ ಕೇಳಿಸಿದರೆ ನಿನಗೂ ನನಗೂ ಕೂಡೇ ಹುಚ್ಚು ಹಿಡಿಸಿಬಿಟ್ಟಾಳು ಹೊಯ್ಮಾಲಿ," ಎಂದು ನುಡಿದು ಒಂದು ಗಳಿಗೆ ಸುಮ್ಮನಿದ್ದು ಅವಳು ಕೇಳಿದ್ದಳು:

"ಹೌದೋ ಬಸಲಿಂಗಾ, ನೀ ಖರೇ ಅಂದರೂ ನನ್ನ ಕೈಹಿಡಿಯಾಕ ತಯಾರದೀಯಾ?"

"ಬರೇ ಕೈ ಅಷ್ಟೇ ಯಾಕ ಚೆನ್ನೀ, ಕಾಲು ಕೂಡಾ ಹಿಡಿಯಾಕ ತಯಾರಿದೀನಿ," ಎಂದು ಅವನು ಹೇಳಿದಾಗ ಅವಳಿಗೆ ನಗುವನ್ನು ತಡೆಯಲಾಗಿರಲಿಲ್ಲ.

"ಅಲ್ಲ ಬಸಲಿಂಗಾ, ನನ್ನ ಮಾಡಿಕೊಂಡರ ಮಂದಿ ನಿನ್ನ ನೋಡಿ ನಗಲಿಕ್ಕಿಲ್ಲೇನು?"

"ಅವರು ಮಾಡಿಕೊಂಡ ಹೆಂಗಸರಿಗಿಂತ ನೀನೇ ಸಾವಿರಪಾಲಿಗೆ ಬೇಕು. ನಗುವವರ ಕಿಮ್ಮತ್ತು ನೋಡು. ಇಂದಿನ ಪ್ರಪಂಚದಾಗ ಸಂಭಾವಿತರೆಷ್ಟು ಮಂದಿ ಅದಾರನ್ನೂದು ನಿನಗೇನು ಗೊತ್ತಿಲ್ಲೇನೇ ಚೆನ್ನೀ?"

"ಹೂಂ. ಹೂಂ. ಅದೂ ಖರೇವು. ಆದರೂ....ನನ್ನಂಥಾಕೀನ್ನ...."

ಅವಳ ಬಾಯನ್ನು ಬೆರಳುಗಳಿಂದ ಮುಚ್ಚಿ ಮುಂದಿನ ಮಾತುಗಳನ್ನು ತಡೆದು ಬಸಲಿಂಗ ಹೇಳಿದ್ದ:

"ಮತ್ತೆ ಮತ್ತೆ ಅದೇ ಅದೇ ಮಾತು ಆಡುತಾ ಹೊಂಟೆಯಂದರೆ ನನಗ ಖರೇ ಅಂದರೂ ತಲೀ ಕೆಟ್ಟೇತು ಚೆನ್ನೀ. ನಿಮ್ಮವ್ವ ಸೂಳೆಯಾಗಿದ್ದರ ನಿನ್ನದೇನು ತಪ್ಪು?"

"ನಾನೂ ಸೂಳಿಯಾಗೇ ಇದೀನಲ್ಲ?"

"ನೀ ದೊಡ್ಡಾಕಿಯಾಗೂದರೊಳಗೇ ಯಾರಾದರೂ ನಿನ್ನ ಮದುವೀ ಮಾಡಿಕೊಂಡಿದ್ದರ ನೀನ್ಯಾಕ ಸೂಳಿಯಾಗುತಿದ್ದಿ?"

"ಹೂಂ. ಅದೂ ಖರೇವು. ಆದರೆ, ನಮಗ ಮದುವಿಯಿಲ್ಲಾ ಅಂತ ಎಲ್ಲವ್ವನ ಆಣಿಯೇ ಐತಲ್ಲ ಬಸಲಿಂಗಾ?"

"ಅದೆಲ್ಲಾ ಸುಳ್ಳು. ದೊಡ್ಡ ಸುಳ್ಳು. ನಮ್ಮಂಥಾ ಲುಚ್ಚಾ ಮಂದಿ ನಮ್ಮ ತಿಂಡಿಗಾಗಿ ನಿಮ್ಮಂಥವರನ್ನ ಸೂಳೇರನ್ನಾಗಿ ಇಡೂದಕ್ಕ ಇಂಥಾ ಸುಳ್ಳು ಹುಟ್ಟಸಿದ್ದಾರ. ಸೂಳೆಗಾರಿಕೆ ಮಾಡು ಅಂತ ಯಾವ ದೇವರಾದರೂ ಹೇಳೀತೇನು! ಅದನ್ನೆಲ್ಲಾ ನಂಬಬ್ಯಾಡ ಚೆನ್ನೀ. ನಿನ್ನ ಮದುವಿ ಮಾಡಿಕೊಂಡು ಸಂಸಾರ ಮಾಡೂದಕ್ಕ ನಾ ತಯಾರಿದೀನಿ. ನೀನೇನಂತೀ ಹೇಳು."

ಆ ಕ್ಷಣಕ್ಕೆ ಅವಳು ಏನನ್ನೂ ಹೇಳಿರಲಿಲ್ಲವಾದರೂ ಅವಳ ಮನಸ್ಸು ಅಂದಿನಿಂದಲೂ ಅದೇ ವಿಚಾರ ಮೆಲುಕುಹಾಕುತ್ತ ಬಂದಿತ್ತು. ತಾಯಿ ತಂದೆ ಅಣ್ಣ ತಮ್ಮ ತಂಗಿ ಯಾರೂ ಇಲ್ಲದಿದ್ದ ಚೆನ್ನಿಯ ಹೃದಯ ಯಾರಾದರೊಬ್ಬರ ಅಕೃತ್ರಿಮ ಪ್ರೀತಿಗಾಗಿ ಹಾತೊರೆಯುತ್ತಿತ್ತು. ಬಸಲಿಂಗನಲ್ಲಿ ಅಂಥ ಪ್ರೀತಿಯನ್ನು ಅವಳು ಗುರುತಿಸಿಕೊಂಡಿದ್ದಳು. ಆಗಲೇ ಅವನೊಡನೆ ಓಡಿ ಹೋಗಬೇಕೆಂದು ಅವಳಿಗೆನ್ನಿಸಿದ್ದಿತಾದರೂ ಮಲ್ಲವ್ವನ ಕಣ್ಣು ತಪ್ಪಿಸಿಕೊಂಡು ಹೋಗುವುದು ಸುಲಭವಾದ ಕೆಲಸವೇನೂ ಆಗಿರಲಿಲ್ಲ. ಈಗ ಮಲ್ಲವ್ವನ ಪೀಡೆಯಿಲ್ಲ. ತನ್ನ ಮೇಲೆ ಯಾರ ಅಧಿಕಾರವೂ ಇಲ್ಲ. ಈಗ ತಾನು ಬಸಲಿಂಗನೊಡನೆ ಹೊರಟುನಿಂತರೆ ತನ್ನನ್ನು ತಡೆಯುವವರಾರೂ ಇಲ್ಲ.

"ಹೊರಟುಬಿಡಲೇ? ಈಗಲೇ ಹೊರಟುಬಿಡಲೇ?" ಮತ್ತೆ ಮತ್ತೆ ತನ್ನನ್ನೇ ಕೇಳಿಕೊಂಡಳು ಚೆನ್ನಿ.

ಅನ್ನದ ಉಕ್ಕು ಹೊರಚಿಮ್ಮಿ ಒಲೆಗೆ ಧುಮುಕಿದುದರಿಂದ ಚುರು ಚುರು ಸಪ್ಪಳಾಯಿತು. ಚೆನ್ನಿ ಬೆಚ್ಚಿ ಲಗುಬಗೆಯಿಂದ ಗಡಿಗೆಯನ್ನಿಳಿಸಿದಳು.

ಅವಳ ಮುಖವನ್ನೇ ದಿಟ್ಟಿಸುತ್ತಿದ್ದ ಬಸಲಿಂಗ ಕೇಳಿದ:

"ಏನು ಬಹಾಳ ವಿಚಾರ ನಡದಾಂಗ ಕಾಣುತೈತಲ್ಲ?"

"ಎಲ್ಲೀ ವಿಚಾರ ಬಿಡೋ."

“ವಿಚಾರ ಮಾಡೂದಕ್ಕ ಇಡೀ ರಾತ್ರಿಯೆಲ್ಲಾ ಐತಲ್ಲ! ನಾನೇನು ಈಗಿಂದೀಗ ನಿನ್ನ ಕರಕೊಂಡು ಹೋಗೂದಿಲ್ಲ.”

“ಅಂದರೆ? ಎಲ್ಲಾ ಗಟ್ಟಿ ಮಾಡಿಕೊಂಡೇ ಬಂದೀಯೋ ಏನು?”

“ನಂದು ನಿನಗೆ ಗೊತ್ತೇ ಐತಲ್ಲ ಚೆನ್ನೀ. ಅರ್ಧಮರ್ಧ ಕೆಲಸದಿಂದ ಏನುಪಯೋಗ? ಮಾಡೂದಾದರೆ ಪೂರಾ ಮಾಡಿಮುಗಿಸೂದು. ಇಲ್ಲದಿದ್ದರಿಲ್ಲೇ ಇಲ್ಲ. ನಿನ್ನ ಕರಕೊಂಡೇ ಹೋಗೂದು ಅಂತ ನಿಶ್ಚಯಮಾಡಿ ಮನೀ ಕೂಡಾ ನೋಡಿ ಸಾಮಾನು ಗೀಮಾನು ತಯಾರುಮಾಡಿಟ್ಟು ಬಂದೀನಿ.”

“ಎಲ ಎಲಾ! ಏನೇನು ಗುಳಿಗೀ ಒಗೀತೀಯೋ!”

“ಗುಳಿಗೀ ಯಾಕೆ ಒಗದೇನು ಚೆನ್ನೀ? ನೀ ಬಂದೇ ಬರುತೀ ಅಂತ ನನಗೆ ಗೊತ್ತೇ ಇತ್ತು. ಅದಕ್ಕೇ ಎಲ್ಲಾ ತಯಾರಿ ಮಾಡೇ ಹೊರಟುಬಂದೀನಿ. ಹೊಸಾ ಮದುವಣಗಿತ್ತಿಗೆ ಉಡಿಸೂದಕ್ಕ ಗದಗಿನ ರೇಶಿಮಿಾ ಸೀರೀ ಕೂಡಾ ತಂದೀನಿ.”

“ಹಾ!” ಎಂದು ಆಶ್ಚರ್ಯದ ಉದ್ಗಾರ ತೆಗೆದಳು ಚೆನ್ನಿ.

ಬಸಲಿಂಗ ಎದ್ದು ಹೊರಗಿನ ಕೊಟಡಿಗೆ ಹೋಗಿ ತಾನು ತಂದಿದ್ದ ಕೈಚೀಲದಿಂದ ಸೀರೆಯನ್ನೂ ರವಕೆಯನ್ನೂ ತೆಗೆದುಕೊಂಡು ಬಂದ. ಸೀರೆಯ ಅಂದ ಚೆಂದಗಳನ್ನು ಕಂಡ ತರುವಾಯವಂತೂ ಚೆನ್ನಿಗೆ ಹಿಡಿಸಲಾರದಷ್ಟು ಹಿಗ್ಗು. ಇಪ್ಪತ್ತೈದರ ಆ ಪ್ರಾಯದಲ್ಲೂ ಅವಳು ಹದಿನೈದರ ವಧುವಿನ ಉತ್ಸಾಹವನ್ನನುಭವಿಸಿದಳು.

ಆ ಇರುಳು ಚೆನ್ನಿಯ ಪಾಲಿಗೆ ಹುಣ್ಣಿಮೆಯಿರುಳಾಯಿತು. ಬಸಲಿಂಗನ ತೋಳತೆಕ್ಕೆಯಲ್ಲೊರಗಿದ್ದ ಹಾಗೆ ಅವಳು ತನ್ನ ಕಷ್ಟಗಳನ್ನೆಲ್ಲ ತೋಡಿಕೊಂಡು ಹೃದಯವನ್ನು ಹಗುರಗೊಳಿಸಿಕೊಂಡಳು. ಅವನೂ ತನ್ನ ಕಷ್ಟವನ್ನೆಲ್ಲ ಬಣ್ಣಿಸಿ ಹೇಳಿದ.

“ಈಗ ಸಂಬಳ ಎಷ್ಟು ಸಿಗುತೈತಿ ನಿನಗ ಬಸಲಿಂಗಾ?” ಎಂದು ವಿಚಾರಿಸಿದಳು ಚೆನ್ನಿ.

“ಆರೂ ಮಂದಿ ವಕೀಲರು ಕೊಡೂದು ಒಟ್ಟು ಎಪ್ಪತ್ತು ರೂಪಾಯಿ. ಅದರಾಗ ಒಬ್ಬರೇ ಹದಿನೈದು ಕೊಡುತಾರೆ. ಉಳಿದ ಐದು ಮಂದಿಗಿಂತ ಅವರು ಸಾವುಕಾರರು.”

"ಕೆಲಸ ಬಹಳ ಇರುತ್ತೈತೇನು?"

"ಅವರಿಗೇ ಕೆಲಸ ಇರೂದಿಲ್ಲಂದ ಮ್ಯಾಲ ನನಗಾದರೂ ಎಲ್ಲೀ ಕೆಲಸ ಚೆನ್ನೀ!"

"ಮತ್ತೆ! ಸುಮ್ಮಸುಮ್ಮನೇ ಸಂಬಳ ಕೊಡುತಾರೇನು ಹಾಂಗಾದರೆ?"

"ನನ್ನ ಸಂಬಳ ಕೂಡಾ ನಾನೇ ದುಡಕೊಂತೀನಿ, ನನಗ ಕೈಯಾರ ಸಂಬಳ ಕೊಡುವವರಂದರ ಬಾಜೀರಾವ್ ವಕೀಲರೊಬ್ಬರೇ ನೋಡು. ಉಳಿದ ಐದು ಮಂದಿಗೆ ನಾನೇ ಕೊಡಿಸಬೇಕಾಗುತ್ತೈತಿ ದುಡ್ಡು!"

"ಅಂದರೆ! ಎಲ್ಲಾ ಮಜಾನೇ ಐತಲ್ಲ ಹಂಗಾದರೆ! ಈ ಬಾಜೀರಾವ್ ಅಂದರೆ ಯಾರು? ಹೆಸರೂ ಮಜಾನೇ ಐತಲ್ಲ!"

"ಮಜಾ ಇರೂ ಮಂದಿಗೆ ಮಜಾ ಹೆಸರೇ ಇರಾಕ ಬೇಕಲ್ಲ ಚೆನ್ನೀ! ಅವರ ಖರೇ ಹೆಸರು ರಂಗರಾವ್ ಅಂತ. ಕ್ಲಬ್ಬಿನಾಗಿನ ಮಂದಿ ಚೇಷ್ಟೆಗಂತ ಬಾಜೀರಾವ್ ಅಂತ ಕರದರು. ಬರಬರುತಾ ಅದೇ ರೂಢಿಯಾತು. ಉಂಡೀ ಬಾಜೀರಾವ್ ಅಂತ ಒಬ್ಬ ಪೇಶವೇ ಇದ್ದ ಪುಣೇದಾಗ. ಮಜಾ ಮಾಡೂದ ರಾಗ ಅವನ್ನ ಮೀರಿಸಿದವರೇ ಇಲ್ಲ. ಅದಕ್ಕ ಅವನ ಹೆಸರಿನಿಂದ ಕರೀತಾರ ನಮ್ಮ ರಂಗರಾಯರನ್ನ."

"ಅದೇನೋ ಕ್ಲಬ್ ಅಂದೆಲ್ಲ?"

"ಕ್ಲಬ್ ಅಂದರೆ ಕೆಲಸ ಇಲ್ಲದ ಮಂದಿ ಕೂಡಿ ರೊಕ್ಕ ಹಚ್ಚಿ ಇಸ್ಪೀಟಾಡುವ ಜಾಗಾ. ನಮ್ಮ ಆರು ಮಂದಿ ವಕೀಲರದೂ ಅವರ ಗೆಳೇರದೂ ಒಂದು ಬ್ಯಾರೇನೇ ಕ್ಲಬ್ ಐತಿ. ಅದರ ಹೆಸರೂ ಮಜಾನೇ–ಸರದಾರ್ಸ್ ಕ್ಲಬ್ ಅಂತ."

"ಸರದಾರ ಮಂದಿನೂ ಬರುತಾರೇನು ಅಲ್ಲಿ?"

"ಹೂಂ. ಅವರೂ ಅದಾರು ಒಬ್ಬಿಬ್ಬರು. ನಮ್ಮ ಬಾಜೀರಾವ್ ವಕೀಲರೂ ಸರದಾರ ಮನೆತನದವರೇ. ಅಪ್ಪಾಸಾಹೇಬ್ ದೇಸಾಯಿ ಅಂತ ಒಬ್ಬರಿದಾರ ಬಹಾದ್ದೂರರು. ಅವರಂತೂ ಎಲ್ಲಾರನ್ನೂ ಮೆಟ್ಟಿ ಹಾಕುತಾರೆ ನೋಡು ಮೋಜು ಮಾಡೂದ್ರಾಗ...."

ಬಸಲಿಂಗನ ಆಲಿಂಗನದಿಂದ ದೂರವಾಗಿ ಅತ್ತಿತ್ತ ಹೊರಳಿದಳು ಚೆನ್ನಿ. ಏಕೋ ಅವಳ ಮನಸ್ಸು ಅಸ್ವಸ್ಥವಾಯಿತು.

"ಯಾಕ ಚೆನ್ನೀ, ಬಾಯಾಗ ನೀರು ಬಿಡಾಕ ಹತ್ತಿತೇನು ನಾ ಹೇಳೂದು ಕೇಳಿ?" ಎಂದು ನಗುನಗುತ್ತ ನುಡಿದ ಬಸಲಿಂಗ.

ತನ್ನ ಗುಟ್ಟು ಬಿಟ್ಟುಕೊಡಲಿಲ್ಲ ಚೆನ್ನಿ. ಹೇಳಿದಳು:

"ಇಂಥಾ ಸಾವಿರ ಮಂದಿ ಸರದಾರರನ್ನ ನಾನೂ ಕಂಡೀನಿ ಬಿಡು. ಸ್ವತಾ ಮಾಮಲೇದಾರರೇ ಬರುತಿದ್ದರಂತೆ ನನ್ನ ಹತ್ತಿರ!"

"ಇಂಥಾ ನೂರು ಮಾಮಲೇದಾರರನ್ನ ಚಾಕರಿಗಿಟ್ಟುಕೊಳ್ಳುವಂಥಾ ಇಸಮುಗಳಿದಾವ ಓರೆಕೋರೆಯೊಳಗ, ಚೆನ್ನಿ."

"ಅವರದೆಲ್ಲಾ ಗುರುತ್ಯೆತೇನು ನಿನಗೆ?"

"ಬರೇ ಗುರುತು ಅಷ್ಟೇ ಯಾಕೇ ಹುಚ್ಚೀ? ನನ್ನ ಕಿಸೇದಾಗ ಬಿದ್ದಾರ ಅವರು ಕಿಸೇದಾಗ. ನಾನೊಂದು ದಿನ ಇರದಿದ್ದರ ಅವರ ಜೀವ ಉಳಿಯೂದಿಲ್ಲ ಜೀವ...."

"ಹ ಹ ಹ ಹಾ ಹಾ!" ಎಂದು ನಕ್ಕಳು ಚೆನ್ನಿ.

"ಹಿ ಹಿ ಹಿ ಹೀ ಹೀ!" ಎಂದು ನಕ್ಕ ಬಸಲಿಂಗ.

"ಸುಳ್ಳಲ್ಲ ನಾ ಹೇಳೂದು ಚೆನ್ನೀ. ಒಂದಿನಾ ಕೂಡಾ ತಡಾಮಾಡದೆ ಹೊಂಟು ಬಾ ಅಂತ ಹೇಳಿದಾರ ಎಲ್ಲರೂ."

"ಅಂದರೇನು ನಾಳೇ ಹೊಂಡಾವೇನು?"

"ಹೌದು. ಹೋಗಾಕಬೇಕಲ್ಲ. ಅಲ್ಲಿ ಎಷ್ಟು ಕೆಲಸ ನನಗೆ!"

"ಒಂದೆರಡು ದಿನ ಆರಾಮು ಇದ್ದು ಹೋಗಲ್ಲ ಬಸಲಿಂಗಾ?"

"ಊಹೂಂ. ನಾಳೆ ಮಧ್ಯಾನ್ನದ ಬಸ್ಸಿಗೆ ಹೋಗಾಕಃ ಬೇಕು ಚೆನ್ನಿ–ನಿನ್ನೂ ಕರಕೊಂಡು."

"ನಾ ಬರಾಕಃ ಬೇಕು ಅಂತೀಯಾ?"

"ಈ ಹೊಲಸು ಊರಾಗಾದರೂ ಏನೈತಿ ಚೆನ್ನೀ ನಿನಗ ಸುಖಾ? ಪಟ್ಟಣದಾಗ ಅಂದರೆ ಬೇಕಾದಂಗ ಚೈನೀ ಮಾಡಬಹುದು. ಎಷ್ಟು ಬೇಕಷ್ಟು ಸಿನಿಮಾ ನೋಡಬಹುದು, ನಾಟಕಾ ನೋಡಬಹುದು. ಬಣ್ಣಬಣ್ಣದ ಸೀರೀ ಉಟ್ಟುಕೊಂಡು ಡೌಲಿನಿಂದ ಪ್ಯಾಟಿಯೊಳಗ ತಿರುಗಬಹುದು. ಇಲ್ಲೇನೈತಿ ಮಣ್ಣು!"

"ಇಲ್ಲೇನೈತಿ ಮಣ್ಣು! ಬಸಲಿಂಗನ ಮಾತೂ ಖರೇವು," ಎಂದು ತನ್ನಷ್ಟಕ್ಕೇ ಮತ್ತೆ ಮತ್ತೆ ಹೇಳಿಕೊಂಡಳು ಚೆನ್ನಿ.

ಆದರೂ, ಹಾಗೆ ಅವಳು ಒಮ್ಮಿಂದೊಮ್ಮೆಲೆ ಊರು ಬಿಟ್ಟು ಹೊರಡುವುದೂ ಸಾಧ್ಯವಿರಲಿಲ್ಲ. ಅನೇಕರಿಂದ ಹಣ ಬರುವುದಿತ್ತು, ಅನೇಕರಿಗೆ ಅವಳೂ ಕೊಡುವುದಿತ್ತು, ಮನೆಯ ಮಾಲೀಕರನ್ನು ಕಾಣಬೇಕು, ಅವರಿಗೆ ಸಲ್ಲಿಸಬೇಕಾದ ಬಾಡಿಗೆಯ ಹಣ ಮುಟ್ಟಿಸಬೇಕು, ಮನೆ ಬಿಡುವುದಾಗಿ ಹೇಳಬೇಕು. ಅಂಗಡಿಯವರಿಗೆ ಹಾಲಿನವಳಿಗೆ ದುಡ್ಡು ಮುಟ್ಟಿಸಬೇಕು. ಕಸಬಿನ ಗೆಳತಿಯರೆಲ್ಲರನ್ನೂ ಕಂಡು ಮಾತನಾಡಿ ಬೀಳ್ಕೊಂಡು ಬರಬೇಕು. ಸವದತ್ತಿಯನ್ನು ಬಿಟ್ಟು ಹೊರಡುವ ಈ ಸಂದರ್ಭದಲ್ಲಿ, ಇಷ್ಟು ದಿನ ತನ್ನನ್ನು ಕಾಪಾಡಿಕೊಂಡು ಬಂದ ಗುಡ್ಡದ ದೇವಿಯ ದರ್ಶನ ಪಡೆದು ಸಾಷ್ಟಾಂಗಹಾಕಿ ಬರುವುದೂ ಅತ್ಯಗತ್ಯ. ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ಪರದೇಶಿಯಾದ ತಾನು ಗುಡ್ಡದ ದೇವಿಯ ಕೃಪೆಯಿಂದಲೇ ಅಲ್ಲವೇ ಬದುಕಿ ಬೆಳೆದದ್ದು? ಆ ಮಹಾದೇವಿಯನ್ನು ನೋಡದೆ ಹೋಗುವುದುಂಟೇ?

ಎಲ್ಲವ್ವನ ಗುಡ್ಡಕ್ಕೆ ಹೋಗಿ ಬರುವುದಾಗಿ ಚೆನ್ನಿ ಹೇಳಿದಾಗ ಬಸಲಿಂಗನೂ ಬೇಡವೆನ್ನಲಿಲ್ಲ.

"ನಾನೂ ಬರಬಹುದಿತ್ತು. ಆದರೆ ಈಗ ನನಗೆ ವ್ಯಾಳೇ ಇಲ್ಲ. ನೀನೇ ಹೋಗಿಬಿಟ್ಟು ಬಾ ಚೆನ್ನೀ. ಮತ್ತೆ ನಾನೇ ಬರಬೇಕೇನು ನಿನ್ನ ಕರಕೊಂಡು ಹೋಗೂದಕ್ಕೆ?"

"ನಿನಗೆ ಕೂಡಿದರ ಬಾ."

"ನೋಡು. ಬಾ ಅಂದರೆ ಬರ್ತೀನಿ. ಸಾಮಾನೂ ಬಹಳ ಇಲ್ಲ ಏನಿಲ್ಲ. ಇದೊಂದು ಹಾಸಿಗೆ. ಇನ್ನೊಂದು ಚೀಲ ಆದೀತು ಬಹಳ ಆದರೆ. ಎರಡನ್ನೂ ಬಸ್ಸಿನ ಮ್ಯಾಲ ಇರಿಸಿಕೊಂಡು ಬಂದುಬಿಡಲ್ಲ ನಾಡದ್ದು ಮುಂಜಾನೆಯ ಬಸ್ಸಿಗೆ. ನಾ ಬಂದಿರುತೀನಿ ಬಸ್‌ಸ್ಟಾಂಡಿಗೆ."

"ಹೂಂ. ಹಂಗs ಮಾಡು," ಎಂದಳು ಚೆನ್ನಿ.

ಬೆಳಗಾಗುತ್ತಲೂ ಬಸಲಿಂಗ ಓರೆಕೋರೆನಗರದ ಬಸ್ಸು ಹತ್ತಿ ಹೊರಟ. ಚೆನ್ನಿ ಎಲ್ಲವ್ವನ ಗುಡ್ಡದ ಬಸ್ಸಿಗಾಗಿ ಕಾದು ನಿಂತಳು.

## ಎರಡು.... ಹೊಸ ಸಂಸಾರ

ಮೂರು ಕೊಟಡಿಗಳ ಆ ಪುಟ್ಟ ಮನೆಯನ್ನು ಕಂಡಾಗ ಚೆನ್ನಿಗೆ ಸಂತೋಷವುಂಟಾಗದಿರಲಿಲ್ಲ. ಹೊಸ ಮಾದರಿಯ ಮನೆ. ಸಿಮೆಂಟ್ ಕಾಂಕ್ರೀಟಿನ ಗೋಡೆಗಳು. ಗೋಡೆಗಳಿಗೆ ಕಪಾಟುಗಳು. ಪ್ರತಿಯೊಂದು ಕೊಟಡಿಗೂ ಒಂದೊಂದು ವಿದ್ಯುದ್ದೀಪ. ಅಡುಗೆಯ ಮನೆಯಲ್ಲಿ ಅಂದವಾಗಿ ಕಟ್ಟಿಸಲ್ಪಟ್ಟ ಬಚ್ಚಲು. ಪಾತ್ರೆಗಳನ್ನಿಡಲು ಹಲಗೆಗಳು. ಸೌದೆಯನ್ನು ಸಂಗ್ರಹಿಸಲು ಅಟ್ಟ. ಮನೆಯ ಎದುರಿನಲ್ಲಿಯೇ ನಲ್ಲಿ. ಹಿಂಭಾಗದಲ್ಲಿಯೇ ಕಕ್ಕಸು. ಸವದತ್ತಿಯಲ್ಲಿ ಇಂಥ ಅನುಕೂಲತೆಗಳೆಲ್ಲ ಎಲ್ಲಿಂದ ಬಂದಾವು? ಅಂತೆಯೇ ಓರೆಕೋರೆನಗರವೆಂದರೆ, ಸವದತ್ತಿಯೆದುರಿಗೆ ಸ್ವರ್ಗವೆಂದೇ ಚೆನ್ನಿಗೆನ್ನಿಸಿತು.

"ಇದಕ್ಕ ಬಾಡಿಗೆ ಎಷ್ಟೋ ಬಸಲಿಂಗ?"

"ಬಾಡಿಗೆ? ಏನೂ ಇಲ್ಲ."

"ಹಾ?"

"ಏನೂ ಇಲ್ಲ. ಈ ಚಾಳದಾಗಿರುವ ಬ್ಯಾರೆಯವರೆಲ್ಲಾ ಇಂಥಾ ಮನೆಗಳಿಗೇ ಇಪ್ಪತ್ತು ರೂಪಾಯಿ ಕೊಡುತಾರೆ. ನನಗೆ ಮಾತ್ರ ಫುಕಟ್...."

"ನಿನಗೆ ಮಾತ್ರ ಫುಕಟ ಯಾಕೆ?" ಅವಳ ಧ್ವನಿಯಲ್ಲಿ ವಿಸ್ಮಯವಿತ್ತು.

"ಮೊನ್ನೆ ಹೇಳಿದ್ದಿನಲ್ಲ ನಿನಗೆ – ನಮ್ಮ ವಕೀಲರು ಬಾಜೀರಾಯರೂ ಅಂತ. ಈ ಚಾಳ್ ಎಲ್ಲಾ ಅವರದೇ. ವಕೀಲರಿಗೂ ಅವರ ಬಾಯಿಸಾಹೇಬರಿಗೂ ನನ್ನ ವ್ಯಾಲ ಬಹಳ ಪ್ರೀತಿ. ಹೆಂಡತೀನ್ನ ಕರಕೊಂಡು ಬಂದು ಮನೀ ಮಾಡುತೀನಿ ಅಂದ ಕೂಡಲೇ ಈ ಮನೆ ಖಾಲಿ ಮಾಡಿಸಿ ಫುಕಟ ಕೊಟ್ಟುಬಿಟ್ಟರು ನೋಡು."

ಸಹಜವಾಗಿಯೆ, ಬಾಜೀರಾಯರ ಬಗೆಗೂ ಅವರ ಬಾಯಿಸಾಹೇಬರ ಬಗೆಗೂ ಚೆನ್ನಿಯಲ್ಲಿ ಆದರಭಾವ ಉತ್ಪನ್ನವಾಯಿತು. ಇಪ್ಪತ್ತು ರೂಪಾಯಿ ಬಾಡಿಗೆ ಬಿಟ್ಟುಬಿಡುವ ಅವರು ಉದಾರ ಮನೋವೃತ್ತಿಯವರೇ ಆಗಿರಬೇಕೆಂದು ಅವಳಿಗೆನ್ನಿಸಿತು.

"ಅಷ್ಟೇ ಅಲ್ಲ ಚೆನ್ನೀ. ಏನು ಸಾಮಾನು ಬೇಕಾದರೂ ತಮ್ಮನ್ನ ಕೇಳಿ ತಗೊಂಡು ಹೋಗಬಹುದಂತ ಹೇಳಿದಾರ ಬಾಯಿಸಾಹೇಬರು."

"ಅವರೂ ಇದೇ ಚಾಳದಾಗ ಇದಾರೇನು?"

"ಇಲ್ಲ. ಅವರ್‍ಯಾಕ ಇಲ್ಲಿದ್ದಾರು? ಇವೆಲ್ಲಾ ಬಾಡಿಗೆ ಕೊಡೂದಕ್ಕಾಗೇ ಕಟ್ಟಿಸಿದ ಮನೆಗಳು. ಅವರು ಬಂಗಲೇದಂಥಾ ದೊಡ್ಡ ಮನೆಯಾಗಿದಾರೆ– ಇಲ್ಲಿಂದ ಸ್ವಲ್ಪ ದೂರದಲ್ಲಿ."

"ಮಕ್ಕಳು ಮರಿ?"

"ಹೂಂ. ಒಬ್ಬ ಹುಡುಗನಿದಾನ. ಮೋಹನ ಅಂತ ಹೆಸರು ಅವಗೆ. ಮನಿಯಾಗ ಮೋಟರುಕಾರು ರೇಡಿಯೋ ಆಳುಕಾಳು – ಏನು ಹೇಳಲಿ ಆ ವೈಭವಾ ಚೆನ್ನೀ!"

"ಬಸಲಿಂಗಾ...."

"ಚೂ....ಚೂ...."

"ಯಾಕೋ, ಏನಾತು?"

ಬಸಲಿಂಗ ಅವಳ ಬಳಿ ಬಂದು ಅವಳ ತಲೆಗೂದಲನ್ನು ನೇವರಿಸುತ್ತ ತಡವರಿಸುವ ಧ್ವನಿಯಲ್ಲಿ ಹೇಳಿದ:

"ಇದು ಸವದತ್ತಿಯಲ್ಲ, ಓರೆಕೋರೆ ಶಹರ ಅನ್ನೂದನ್ನ ಮರೆತಿಯಾ ಚೆನ್ನೀ?"

"ಯಾಕೋ?"

"ನೋಡಿದಿಯಾ, ಮತ್ತೆ ಮರೆತಿ. ಇಲ್ಲಿ ಅಕ್ಕಪಕ್ಕಕ್ಕ ಸಂಸಾರಸ್ಥ ಮಂದಿ ಇದ್ದಾರ. ನಾವಿಲ್ಲಿ ಮಾತಾಡೂದು ಪಕ್ಕದ ಮನೆಯವರಿಗೆ ಕೇಳಿಸುತ್ತೈತಿ. ನೀ ನನ್ನ ಹೆಂಡತಿ ಅಂತ ಅವರೆಲ್ಲಾ ತಿಳಕೊಂಡಿದಾರ. ಇನ್ನಮ್ಯಾಲ ನೀ ನನ್ನ ಹೆಂಡತಿಯ ಹಂಗೇ ಇರಬೇಕಾಗುತ್ತೈತಿ. ಹೌದೋ ಅಲ್ಲೋ? ಬಸಲಿಂಗಾ

ಬಸಲಿಂಗಾ ಅಂತ ಒದರೂದು, ಯಾಕೋ ಏನೋ ಅನ್ನೂದು ಬಿಟ್ಟುಬಿಡ ಬೇಕಾಗುತ್ತೈತಿ. ಹೌದೋ ಅಲ್ಲೋ?"

"ಮತ್ತೇನು ಯಾಕ್ರೀ ಏನ್ರೀ ಅನ್ನಬೇಕೇನು!" ಎಂದು ನುಡಿದು ಗಟ್ಟಿಯಾಗಿ ನಕ್ಕಳು ಚೆನ್ನಿ.

"ಅನೋ....ಅದೋ....ಮತ್ತೆ ತಪ್ಪಿದಿ. ಹೀಂಗೆಲ್ಲ ಗಟ್ಟಿಯಾಗಿ ನಗೂ ಹಾಂಗೂ ಇಲ್ಲ ಇಲ್ಲಿ. ಆ ಕಡೆ ಈ ಕಡೆ ಮಂದಿ ಏನಂದಾರು ನಿನಗ! ಅಂ?"

ಚೆನ್ನಿಯ ತುಟಿಗಳ ಮೇಲಿನ ನಗು ತಾನಾಗಿಯೇ ಅದೃಶ್ಯವಾಯಿತು. ಇಳಿದ ಧ್ವನಿಯಲ್ಲಿ ಅವಳೆಂದಳು:

"ಇಲ್ಲಿ ಬಾಳೇ ಮಾಡೂದು ಬಹಾಳ ಸುಖಾ ಅಂತ ತಿಳಿದಿದ್ದಿನಿ ನಾ, ಈಗ ನೋಡಿದರ ಬಲೇ ಪಂಚೇತಿ ಐತಲ್ಲ!"

"ಹಂಗೇನೂ ಇಲ್ಲ ಚೆನ್ನೀ. ಆದರೆ ಸ್ವಲ್ಪ ಸಮಾಧಾನದಿಂದಿರ ಬೇಕಾಗುತ್ತೈತಿ. ಅಷ್ಟೆ. ಚಿಂತೀ ಮಾಡುವಂಥಾದ್ದೇನೂ ಇಲ್ಲ," ಎಂದು ಅವಳನ್ನು ಸಂತೈಸಿದ ಬಸಲಿಂಗ.

ಅವಳು ನಗರಕ್ಕೆ ಬರುವುದರೊಳಗಾಗಿಯೇ ಆತ ಮಂಗಲಸೂತ್ರದ ಮಣಿ ಸರವನ್ನು ತಂದಿರಿಸಿದ್ದ. ಅದನ್ನು ಕೊರಳಲ್ಲಿ ಕಟ್ಟಿಸಿಕೊಳ್ಳುತ್ತಿದ್ದಾಗ ಅವಳ ಮನಸ್ಸಿನಲ್ಲಿ ಬಗೆಬಗೆಯ ಭಾವನೆಗಳು ತಾಂಡವವಾಡುತ್ತಿದ್ದುವು. ಏನೋ ಒಂದು ಬಗೆಯ ಸಂತೋಷ, ಅದಕ್ಕೂ ಮಿಗಿಲಾದ ಕೌತುಕ. ತಾನು ಮಾಡು ತ್ತಿದ್ದುದು ಸರಿಯೇ ತಪ್ಪೇ ಎಂಬ ಸಂದೇಹವೂ ಇತ್ತು. ಹತ್ತು ವರ್ಷಗಳ ಕಾಲ ದಿನಕ್ಕೊಬ್ಬ ಗಂಡಸಿನ ಸೂಳೆಯಾಗಿ ಬಾಳಿದ ತಾನು ಇನ್ನು ಮುಂದೆ, ಜೀವನದ ಅಂತ್ಯದವರೆಗೂ ಒಬ್ಬನೇ ಒಬ್ಬ ಗಂಡನ ಹೆಂಡತಿಯಾಗಿ ಮರ್ಯಾದೆಯಿಂದ ಬಾಳಲು ಸಾಧ್ಯವಾದೀತೇ? ಆ ಜೀವನದಲ್ಲಿ ದೊರಕದ ಸುಖ ಈ ಜೀವನದಲ್ಲಿ ತನಗೆ ದೊರಕೀತೇ?

ಮಂಗಲಸೂತ್ರ ಕಟ್ಟಿಯಾದ ಬಳಿಕ ತಾನೇ ಅವಳ ಹಣೆಯ ಮೇಲೆ ಕುಂಕುಮವನ್ನು ಇಟ್ಟ ಬಸಲಿಂಗ. ಅವಳ ಹಾಗೇ ಅವನ ಮನಸ್ಸಿನಲ್ಲೂ ಚಿತ್ರವಿಚಿತ್ರ ಭಾವನೆಗಳು. ತಾನು ಬಹಳ ದಿನಗಳಿಂದ ಇರಿಸಿಕೊಂಡಿದ್ದ ಆಸೆಯೊಂದು ಅಂತು ಪೂರೈಸಿತಲ್ಲಾ ಎಂದು ಸಮಾಧಾನ. ತನ್ನ ಸಹವಾಸದಲ್ಲಿ ಇವಳು ಸುಖಿಯಾಗಬಹುದೇ ಎಂಬ ಸಂದೇಹ. ಅವಳ ಶೀಲದ ವಿಚಾರವಾಗಿ

ಮಾತ್ರ ಅವನಿಗಾವ ಶಂಕೆಯೂ ಇರಲಿಲ್ಲ. ಅವನ ದೃಷ್ಟಿಯಲ್ಲಿ ಆ ವಿಷಯಕ್ಕೆ ಅಷ್ಟು ಮಹತ್ವವೂ ಇರಲಿಲ್ಲ. ಇಷ್ಟು ದಿನಗಳ ಕಾಲ ಖಾನಾವಳಿಯ ಊಟ ಉಂಡು ಉಂಡು ಅವನಿಗೆ ಬೇಸರಕ್ಕಿಟ್ಟುಕೊಂಡಿತ್ತು. ತನ್ನ ಏಕಾಕಿ ಜೀವನದ ಬಗೆಗೂ ಬೇಸರವುಂಟಾಗಿತ್ತು. ಸದ್ಯ ಅದು ತಪ್ಪಿತಲ್ಲಾ ಎಂದು ಅವನಿಗೆ ಸಮಾಧಾನ. ಅದಕ್ಕಿಂತ ಮುಂದೆ ಅವನ ವಿಚಾರ ಓಡಲಿಲ್ಲ.

ಅಂದು ಸಾಯಂಕಾಲ ಚೆನ್ನಿ ಅಡುಗೆ ಮಾಡುತ್ತಲಿದ್ದಾಗಲೇ ಆತ ಮನೆಗೆ ಬಂದ. ಅವನ ಜೊತೆಗೆ ಇನ್ನಿಬ್ಬರಾರೋ ಬಂದಿದ್ದರು.

“ಈಗ ನಾ ಮನೆ ಮಾಡಿದ್ದೀನಿ. ಇನ್ನು ಮ್ಯಾಲ ಮೊದಲಿನ ಕೋಣೆಗೆ ಹೋಗಬ್ಯಾಡ್ರಿ. ಬಂದಾಗೆಲ್ಲಾ ಇಲ್ಲಿಗೇ ಬರ್ರಿ.” ಎಂದು ಅವರಿಗೆ ಹೇಳುತ್ತಿದ್ದ ಬಸಲಿಂಗ.

ಅಷ್ಟರಲ್ಲಿ ನಡುಮನೆಗೆ ಬಂದ ಚೆನ್ನಿ ಆ ಅಪರಿಚಿತರನ್ನು ದಿಟ್ಟಿಸುತ್ತ ಕೇಳಿದಳು :

“ಇವರ್‍ಯಾರು ?”

“ಇವರು ನನ್ನ ಗೆಳೆಯರು. ಹಳ್ಳಿಯಿಂದ ಕಟ್ಟಿಗೆ ಹೊರೆ ತಂದು ಮಾರು ತಿರುತಾರೆ. ಆಗಾಗ ಬರ್‍ತಿರುತಾರೆ ಮನೆಗೆ.” ಎಂದು ಹೇಳಿ ಬಸಲಿಂಗ ತನ್ನ ಗೆಳೆಯರನ್ನು ಕುರಿತು ಹೇಳಿದ: “ನಾನಿಲ್ಲದಾಗ ಬಂದರೆ ಇವಳ ಕೈಯಾಗ ಕೊಟ್ಟು ಹೋಗಿರಿ.”

ಬಂದವರು ಹೊರಟುಹೋಗುತ್ತಲೂ ಚೆನ್ನಿ ಕೇಳಿದಳು :

“ಏನದು ಅವರು ಕೊಡೂದು ?”

ಬಸಲಿಂಗ ಬಾಗಿಲು ಮುಚ್ಚಿ ಚಿಲಕ ಹಾಕಿದ, ನಡುಮನೆಯ ಕಪಾಟಿನಲ್ಲಿ ಆಗತಾನೆ ಬಚ್ಚಿಟ್ಟಿದ್ದ ಚೀಲವೊಂದನ್ನು ಹೊರದೆಗೆದು,

“ಇದರಾಗೇನೈತಿ ಹೇಳುತೀಯಾ ?” ಎಂದು ಕೇಳಿದ.

ಚೀಲದಲ್ಲಿದ್ದ ವಸ್ತುವಿನ ವಾಸನೆ ಮನೆಯಲ್ಲೆಲ್ಲ ಹರಡಿಕೊಂಡಿತು. ಚೆನ್ನಿಗೇನೂ ಅಪರಿಚಿತವಾದುದಾಗಿರಲಿಲ್ಲ ಆ ವಾಸನೆ. ಅವಳು ಕಣ್ಣು ಕುಣಿಸಿ ಪಿಸುದನಿಯಲ್ಲಿ ಕೇಳಿದಳು :

“ಸೆರೆ ಹೌದಲ್ಲೋ ?”

" ನಿನ್ನಂಥಾಕಿಗೆ ಕಲಿಸಿಕೊಡಬೇಕೇನು ನಾ? ಈಗ ಗೊತ್ತಾತೇ ನಿನಗೆ ನಾ ಮಾಡುವ ವ್ಯಾಪಾರ ಎಂಥಾದ್ದು ಅನ್ನೂದು ?"

" ನನಗೂ ಆಗಲೇ ಅನುಮಾನ ಬಂದಿತ್ತು. ಸವದತ್ತಿಯೊಳಗೂ ಇದಾರಲ್ಲ ಇದರ ವ್ಯಾಪಾರ ಮಾಡುವವರು ಎಷ್ಟೋ ಮಂದಿ."

" ನಿನಗೇನು ಇದರ ಚಟ ಇಲ್ಲ ಹೌದಲ್ಲೋ ?"

ಚೆನ್ನಿ ತಕ್ಷಣ ಉತ್ತರವೀಯಲಿಲ್ಲ. ಒಂದು ಕ್ಷಣ ತಡೆದು ಹೇಳಿದಳು :

" ಹೂಂ. ಸುಳ್ಳಾದರೂ ಯಾಕೆ ಹೇಳಬೇಕು ? ಹಾಂಗ ಚಟ ಅಂತೇನು ಇಲ್ಲ. ಆದರೂ ಯಾವಾಗಲಾದರೊಮ್ಮೆ ಬಯಕೆಯಾದಾಗ ಒಂದೆರಡು ಕಪ್ಪು ತಗೋತೀನಿ."

" ಯಾವಾಗಾವರೊಮ್ಮೆ ಸ್ವಲ್ಪ ತಗೊಂಡರ ಇದೇನು ಕೆಟ್ಟದಲ್ಲ."

" ಹಾಂಗಾದರ ನೀನೂ ತಗೋತೀ ಅನ್ನು."

" ನಾನೂ ನಿನ್ನ ಹಾಂಗೇ. ಎಂದಾದರೊಮ್ಮೆ ಒಂದು ಕಪ್ಪೋ ಅರ್ಧ ಕಪ್ಪೋ. ಅಷ್ಟೇ. ವ್ಯಾಪಾರ ಮಾಡುವವರು ಚಟ ಅಂಟಿಸಿಕೊಂಡರ ದಿವಾಳಿ ತೆಗೆಯೂದು ತಡಾ ಆಗಲಿಕ್ಕಿಲ್ಲ. ಹೌದಲ್ಲೋ ?"

" ಹೂಂ. ಹುಷಾರಿಯಿಂದ ಮಾಡಿದರ ಬೇಕಾದಷ್ಟು ಲಾಭ ಐತಿ ಈ ವ್ಯಾಪಾರದಾಗ. ಪೋಲೀಸರ ಕೈಯಾಗ ಸಿಗಬಾರದು. ಅದಕ್ಕೇನು ಮಾಡಿದ್ದೀ ?"

" ಸವದತ್ತಿಯ ವ್ಯಾಪಾರದವರು ಏನು ಮಾಡಿದಾರೋ ಅದನ್ನೇ."

" ತಿಂಗಳಿಗೆ ಇಷ್ಟು ರೂಪಾಯಿ ಅಂತ ಮಾಮೂಲು ಕೊಡುತಾರಂತೆ ಪೋಲೀಸರಿಗೆ."

" ಇಲ್ಲೂ ಹಾಂಗೇ ನಡದೈತಿ. ಫೌಜದಾರರೂ ನನ್ನ ದೋಸ್ತಿ. ಅವರಿಗೂ ಆಗಾಗ ಒಂದೊಂದು ಬಾಟಲು ಮುಟ್ಟಸುತೀನಿ. ಮಾಮೂಲು ಬ್ಯಾರೇನೇ. ಹೀಂಗಾಗಿ ಯಾರದೂ ಉಪದ್ರ ಇಲ್ಲ."

" ನಿಮ್ಮ ವಕೀಲರಿಗೆ ಗೊತ್ತಿಲ್ಲ ಹೌದಲ್ಲೋ ಇದೆಲ್ಲಾ ?"

" ಗೊತ್ತಿಲ್ಲ ಅಂದರೇನೇ ? ಅವರೇ ನನ್ನ ಗುರುಗಳು !" ಎಂದು ಗಹಗಹಿಸಿ ನಕ್ಕ ಬಸಲಿಂಗ.

" ಆನೂ ಮಂದಿ ?"

"ಆರೂ ಮಂದಿ."

"ಬಾಜೀರಾಯರು ಕೂಡಾ?"

"ಅವರು ಇಂಥಾ ಸಾಧಾರಣ ಸೆರೆ ಮುಟ್ಟೂದಿಲ್ಲ. ಅವರದೆಲ್ಲಾ ಹೈಕ್ಲಾಸ್ ಮಾಲು. ಗೋವಾದ ದೇವಿ!"

ಆ ಮಾತು ಅರ್ಥವಾಗದೆ ಚೆನ್ನಿ ಬಸಲಿಂಗನ ಮುಖವನ್ನೇ ನೋಡ ತೊಡಗಿದಳು. ಅವನು ಮುಗುಳ್ನಕ್ಕು ಹೇಳಿದ:

"ಆ ದೇವಿಗೆ ಮಶೀರಾ ಅಂತ ಇನ್ನೊಂದು ಹೆಸರೂ ಐತಿ!"

ಆಗಲೂ ಅರ್ಥವಾಗಲಿಲ್ಲ ಚೆನ್ನಿಗೆ. ಸವದತ್ತಿಯಂಥ ತಾಲ್ಲೂಕಿನ ಸ್ಥಳದಲ್ಲಿ ಹುಟ್ಟಿ ಬೆಳೆದವಳಿಗೆ ಅಂಥದೆಲ್ಲವೂ ಅರ್ಥವಾಗುವುದೂ ಕಷ್ಟವೇ.

"ಮಶೀರಾ ಅಂದರೆ ಪರದೇಶೀ ಬ್ರಾಂಡಿ. ಗೋವಾದೊಳಗೆ ಅದು ಬಹಳ ಅಗ್ಗ. ಇಲ್ಲಿ ಸೆರೆಬಂದೀ ಕಾಯದೆ ಬಂದವ್ಯಾಲ ಗೋವಾದಿಂದಲೇ ತುಡುಗಿನಿಂದ ತರುತಾರೆ ಅದನ್ನ. ಅದಕ್ಕೇ ಗೋವಾದ ದೇವಿ ಅಂತ ಹೆಸರು ಬಿದ್ದದ್ದು."

ಚೆನ್ನಿ ಬಿದ್ದು ಬಿದ್ದು ನಕ್ಕಳು.

"ಓಹೊಹೊ! ಹೀಂಗೇನು! ನಾ ಏನೋ ಅಂತ ಮಾಡಿದ್ದಿನಿ. ಗುಡ್ಡದ ಎಲ್ಲವ್ವ ದೇವಿಯ ಹಾಂಗ ಇವಳೂ ಒಬ್ಬಳು ಗೋವಾದ ದೇವಿಯಿದ್ದಾಳು ಅಂತ ತಿಳಿದಿದ್ದಿನಿ. ಗೋವಾದ ದೇವಿ....ಹ ಹ ಹ....ಒಳ್ಳೇ ದೇವೀನೇ...."

ಚೆನ್ನಿ ಮತ್ತೆ ಮತ್ತೆ ನಕ್ಕಳು.

ರಾತ್ರಿಯೂಟ ಮುಗಿದು ಮಲಗುವ ಸಿದ್ಧತೆ ನಡೆದಿದ್ದ ಹಾಗೆ ಅವಳು ಕೇಳಿದಳು:

"ಇಲ್ಲೀತನಕ ಈ ವ್ಯಾಪಾರ ಮಾಡಿ ಎಷ್ಟು ಗಂಟು ಮಾಡಿದ್ದೀ?"

ಆ ಪ್ರಶ್ನೆಗೆ ಬಸಲಿಂಗನಿಂದ ತಕ್ಷಣ ಉತ್ತರ ಬರಲಿಲ್ಲ. ಹಾಸಿಗೆಯ ಮೇಲೆ ಕಾಲು ಚಾಚಿ, ಗೋಡೆಗೊರಗಿಕೊಂಡು ಬೀಡಿ ಸೇದುತ್ತಾ ಆತ ಹೇಳಿದ:

"ಗಂಡಸರ ಕೈಯಾಗ ಗಂಟು ಉಳಿಯೂದಿಲ್ಲ ಚೆನ್ನೀ. ಗೃಹಲಕ್ಷ್ಮಿ ಇದ್ದರೇನೇ ಲಕ್ಷ್ಮಿ ಉಳಿಯೂದು ಮನಿಯೊಳಗ."

ಮತ್ತೆ ಒಂದೆರಡುಬಾರಿ ಹೊಗೆಯೆಳೆದು ಬೀಡಿಯನ್ನು ದೂರ ಬಿಸುಟು ಹಾಸಿಗೆಯ ಮೇಲೆ ಸರಿಯಾಗಿ ಪವಡಿಸುತ್ತಾ ಆತ ಹೇಳಿದ:

"ಈಗ ನೀ ಬಂದಿ, ನನ್ನ ಗೃಹಲಕ್ಷ್ಮಿ ಯಾದಿ. ಇನ್ನುವ್ಯಾಲ ನನಗೂ ಒಲಿದಾಳು ಲಕ್ಷ್ಮಿ. ಏನಾರೆಮಾಡಿ ನನ್ನ ಹೊಲಾ ಮನೀ ಆದಷ್ಟು ಲಗೂ ಬಿಡಿಸಿಕೋ ಬೇಕು ನೋಡು ಚೆನ್ನೀ."

"ಹೌದ್ಹೌದು. ಹಂಗೇ ಮಾಡಬೇಕು."

"ಅವನ್ನ ಮತ್ತೆ ಕೈಯಾಗ ತಗೊಂಡು ನಿನ್ನ ಹೆಸರಿಗೇ ಮಾಡಿ, ಹೊಲಾ ಯಾರಿಗಾದರೂ ಲಾವಣಿಗೆ ಕೊಟ್ಟು ಮನೆ ಯಾರಿಗಾದರೂ ಬಾಡಿಗೆಗೆ ಕೊಟ್ಟು ತಣ್ಣಗಿರಬೇಕು ನೋಡು ಚೆನ್ನೀ."

"ಹೌದ್ಹೌದು. ಹಂಗೇ ಮಾಡಬೇಕು. ಆದರೆ ಈ ಸೆರೇದ ವ್ಯಾಪಾರದಿಂದ ಬರುವ ಲಾಭ ಆದರೂ ಎಷ್ಟು? ತಿಂಗಳಿಗೆ ಎಷ್ಟು ರೂಪಾಯಿ ಉಳಿದಾವು?"

"ಏನೋ ನೂರು ರೂಪಾಯಿ ಉಳಿದರೆ ಬಹಳ ಆಯ್ತು. ಎಲ್ಲಾ ಅವ ರಿವರು ಕಿತ್ತುಕೊಂಡು ಬಿಡುತಾರ. ಪೋಲೀಸಪ್ಪಗಳಿಗೇ ನೂರಿನ್ನೂರು ಹೋಗುತ್ತೈತಲ್ಲ?"

"ಅದನ್ನ ತಪ್ಪಿಸೂದಕ್ಕ ಆಗಲಿಕ್ಕಿಲ್ಲ ಅಂತೀಯಾ?" ಎಂದಳು ಚೆನ್ನಿ. "ಅದೇನು, ಬಹಳ ಸುಲಭ," ಎಂದು ತನ್ನಲ್ಲಿಯೆ ಹೇಳಿಕೊಳ್ಳುತ್ತ.

"ಅದ್ಯಾಂಗ ಆದೀತು ಚೆನ್ನೀ? ಪೋಲೀಸರಂದರ ಪೂಜಾರಿಗಳಿದ್ದ ಹಾಂಗ. ಅವರಿಗೆ ನೈವೇದ್ಯ ಕೊಡದಿದ್ದರ ನಮ್ಮ ವ್ಯಾಪಾರ ನಡಿಯೂದು ಹ್ಯಾಂಗ?"

"ಬಿಡು ಬಿಡು. ಅದೇನು ದೊಡ್ಡದು! ಫೌಜದಾರರ ದೋಸ್ತಿ ಐತಿ ಅಂದಿದ್ದಿಯಲ್ಲ. ಅವರು ಯಾವ ಜಾತಿಯವರು? ಮನುಷ್ಯ ಹ್ಯಾಂಗ?"

"ಜಾತಿಯಿಂದ ಬ್ರಾಹ್ಮಣರೇ. ಆದರೂ ಮಜಾ ಮಾಡೂದರಾಗ ಯಾರಿಗೂ ಕಡಮಿಯವರಲ್ಲ. ಬಾಯಿಾ ಮತ್ತು ಬಾಟಲಿ ಎರಡಕ್ಕೂ ಭಕ್ತರೇ."

"ಹಾಂಗಿದ್ದರ ಚಿಂತಿ ಯಾಕ? ಅವರನ್ನೊಮ್ಮೆ ಮನಿಗೆ ಕರಕೊಂಡು ಬಾ. ನಾ ನೆಟ್ಟಗ ಮಾಡುತೀನಿ."

ಮಲಗಿಕೊಂಡಿದ್ದ ಬಸಲಿಂಗ ಚಕಿತನಾಗಿ ಮೇಲಕ್ಕೆದ್ದು,

"ನೆಟ್ಟಗ ಮಾಡುತೀಯಾ? ನೀ? ನೀ?" ಎಂದ.

ಅವಳೂ ಎದ್ದು ಕುಳಿತು ಅವನ ಗಲ್ಲಕ್ಕೆ ತಿವಿಯುತ್ತಾ ಹೇಳಿದಳು:

"ಏನು, ಮುಗಿಲು ಮೈಮ್ಯಾಲ ಬಿದ್ದಂಗೇ ಮಾಡುತೀಯಲ್ಲ? ತಿಂಗಳು

ತಿಂಗಳು ಅವರ ಹೆಣಕ್ಕೆ ಹಾಕುವ ನೂರಿನ್ನೂರು ರೂಪಾಯಿ ಉಳಿಸೂದಕ್ಕಲ್ಲೇನು ನಾ ಈ ವಿಚಾರ ಮಾಡಿದ್ದು? ನಾನೇನು ನಿನ್ನ ಬಿಟ್ಟು ಆ ಫೌಜದಾರರನ್ನ ಕಟ್ಟಿಕೊಂಡು ಓಡಿಹೋಗೂದಿಲ್ಲ. ನೆಟ್ಟಗ ಮಾಡೂದು ಅಂದರೇನಂತ ತಿಳಿದಿದ್ದೀ?"

"ಹೆ ಹೆ! ಏನಿಲ್ಲ, ಏನಿಲ್ಲ," ಎಂದು ಆತ ಹಲ್ಲು ಕಿರಿದ.

"ನೆಟ್ಟಗ ಮಾಡೂದು ಅಂದರ ಅವರ ಕೂಡ ಮಲಗೂದು ಅಂತಲ್ಲ. ಆ ಮೂಳಗಳನ್ನ ಮನೀಗೆ ಕರದು ಹೋಳಿಗೀ ಊಟಾ ಹಾಕಿ ಮ್ಯಾಲ ಒಂದೆರಡು ಬಾಟಲಿ ಕೊಟ್ಟು ನಗುನಗುತಾ ಮಾತಾಡಿದರ ಸಾಕು, ಮರುಳಾಗಿ ಮುಂಗ್ಯಾ ನಂಗ ಮಾತು ಕೇಳುತಾವ ಅವು. ಗೊತ್ತಾತೂ?"

"ಹೆ ಹೆ! ಗೊತ್ತಾತು!"

"ಅದೂ ಮಾರಿ, ಅಂಥಾ ಪ್ರಸಂಗ ಬಂತು ಅಂದರೆ...."

"ಹೆ ಹೆ! ಅಂದರೆ...."

"ಅಂದರೆ....ನಾ ಹೇಳೂದೇನು ಗೊತ್ತಾತೂ?"

"ಹೆ ಹೆ! ಗೊತ್ತಾತು."

"ನೋಡು. ಮೊದಲೇ ಹೇಳಿಬಿಡುತೀನಿ. ಹಿಂದಿನಿಂದ ಜಗಳ ಬ್ಯಾಡಾ. ನಾನೇನು ನಿನ್ನ ಲಗ್ನದ ಹೆಂಡತಿ ಅಲ್ಲ. ನನ್ನ ಮ್ಯಾಲ ನೀ ಅಂಥಾ ಅಧಿಕಾರ ನಡಸೂದಕ್ಕ ಬಂದರ ನಾನದನ್ನ ನಡೀಗೊಡಾಕಿಲ್ಲ. ಏನೋ ಪಿರೀತಿಗೆ ಬಂದೀನಿ ನಿನ್ನ ಸಂಗಾತ. ನೀನೂ ಪಿರೀತಿಯಿಂದ ಇರೂತನಕ ನಾನೂ ಇರ್ತೀನಿ. ಗೊತ್ತಾತೂ?"

"ಹೆ ಹೆ! ಗೊತ್ತಾತು!"

ಒಯ್ಯಾರದಿಂದ ಮೈ ಮಣಿಸುತ್ತಾ ಮತ್ತೆ ಮಲಗಿಕೊಂಡಳು ಚೆನ್ನಿ. ಆ ತುಂಬುದೇಹದ ವಕ್ರವಿನ್ಯಾಸವನ್ನು ಕಂಡು ಹುಚ್ಚು ಹಿಡಿದಂತಾಯಿತು ಬಸಲಿಂಗನಿಗೆ. ಏನೇ ಆದರೂ ತಾನು ಅವಳನ್ನು ಕಳೆದುಕೊಳ್ಳಬಾರದೆಂದು ಆತ ಮನಸ್ಸಿನಲ್ಲಿಯೆ ನಿಶ್ಚಯಿಸಿದ.

ಸ್ವಲ್ಪ ಹೊತ್ತು ಹಾಗೇ ಮೌನವಾಗಿ ಕಳೆದ ಬಳಿಕ ಆತನೆಂದ:

"ನಮ್ಮ ವಕೀಲರೂ ಅವರ ಮನೆಯವರೂ ನಿನ್ನ ನೋಡುವದಕ್ಕ ಆತುರ ರಾಗಿದಾರ ಚೆನ್ನೀ."

" ಯಾರು ಬಾಜೀರಾಯರೇ ?"

" ಅವರಷ್ಟೇ ಅಲ್ಲ. ಎಲ್ಲರೂ. ಬಾಜೀರಾಯರು, ಅವರ ಹೆಂಡತಿ ತಾರಾ ಬಾಯಿ, ಮೋಜಣ್ಣವರ ವಕೀಲರು ಅವರ ಹೆಂಡತಿ ಗೌರಾದೇವಿ, ಹರಕಸೆಟ್ಟಿ ವಕೀಲರು ಅವರ ಹೆಂಡತಿ ಲೀಲಾದೇವಿ, ಮಡಿವಾಳ ವಕೀಲರು, ಕೃಷ್ಣರಾವ್ ವಕೀಲರು, ಚೈನೀ ಚಿದಂಬರ್ ವಕೀಲರು – ಮತ್ತು ಈ ಗುಂಪಿನ ಧರ್ಮರಾಜನ ಹಾಂಗಿರುವ ಡಾಕ್ಟರ್ ಇಂದ್ರಗೇರಿಯವರು...."

" ಅಬ್ಬಬ್ಬಾ....ಎಂಥೆಂಥಾ ಹೆಸರುಗಳು....ಇವನ್ನೆಲ್ಲಾ ನೆನಪಿನಾಗಿಡೂದು ಹ್ಯಾಂಗ ಅಂತೀನಿ...."

" ಮೊದಮೊದಲು ಸ್ವಲ್ಪ ಕಷ್ಟವೇ. ಅವರದೆಲ್ಲಾ ಗುರುತು ಆದ ಹಾಂಗ ಬಳಕೆ ಬೆಳೆದಾಂಗ ತಂತಾನೇ ನೆನಪಿನಾಗುಳೀತಾವೆ."

" ಅಲ್ಲಾ, ನಿನ್ನ ಈ ಆರು ಮಂದಿ ವಕೀಲರಿಗೂ ಮದುವಿ ಆಗೈತಿ ಹೌದಲ್ಲೋ ?"

" ಮೂರು ಮಂದಿಗೆ ಇನ್ನೂ ಮಂಟಪದಾಗ ಮದುವಿಯಾಗಿಲ್ಲ."

" ನಂದೂ ನಿಂದೂ ಆದಾಂಗ ?"

" ಅಂಥಾದಕ್ಕೇನೂ ಕಡಿಮೆಯಿಲ್ಲ."

" ಅಲ್ಲಾ ಬಸಲಿಂಗ...."

" ಚೂ ಚೂ....ನೋಡಿದಿಯಾ, ಮತ್ತೆ ಬಸಲಿಂಗಾ ಅಂತೀ...." ಎಂದು ನೊಂದ ಧ್ವನಿಯಲ್ಲಿ ಆಕ್ಷೇಪಿಸಿದ ಬಸಲಿಂಗ.

" ಚೂ....ಚೂ....ಇನ್ನು ಮ್ಯಾಲ ಹಾಂಗನ್ನೂದಿಲ್ಲ. ಬಹಳ ದಿನದ ರೂಢಿ ಒಮ್ಮೆಲೇ ಹೋಗೂದು ಕಷ್ಟ ಅಲ್ಲೇನು ? ಹೂಂ. ಇನ್ನು ಮ್ಯಾಲ ನಿನ್ನ 'ರೀರೀ' ಅಂತ ಕರೀತೀನಿ." ಹೀಗೆ ಹೇಳಿ ಚೆನ್ನಿ ಪಿಸಪಿಸನೆ ನಕ್ಕು ಮುಂದುವರಿಸಿದಳು : " ಅಲ್ರೀ, ನಿಮ್ಮ ಈ ವಕೀಲರನ್ನೆಲ್ಲಾ ನಾ ನೋಡೂದಕ್ಕ ಮೊದಲು ಅವರು ಹ್ಯಾಂಗ ಹ್ಯಾಂಗ ಅದಾರನ್ನೂದನ್ನ ನೆಟ್ಟಗ ತಿಳಕೊಂಡಿದ್ದರ ಚಲೋ ಅಲ್ಲೇನು ? ಅವರ ರೀತಿ ನೀತಿ ನಡತೆ ಎಲ್ಲಾ ಎಲ್ಲಾ ಗೊತ್ತಿದ್ದರ ಚಲೋದು. ಅವರ ಹೆಂಡಿರ ಕಥೀ ಕೂಡಾ ಗೊತ್ತಿರಬೇಕು. ಆಂ, ಏನಂತೀರಿ ?"

"ಹೌದೌದು. ನೀನನ್ನೂದೂ ಖರೇ. ಅವರೂ ಯಾರೂ ಸಾಧಾರಣ ಇಸಮುಗಳಲ್ಲ. ಒಂದೊಂದೂ ಒಂದು ನಮೂನೆಯ ಇಸಮು."

"ಹಂಗಾದರ ಹೇಳಿರಲ್ಲ ಒಬ್ಬೊಬ್ಬರದೇ ಕಥೀನ್ನ."

"ಅಯ್ಯೊ! ಅವರ ಕಥೀ ಹೇಳುತಾ ಕೂತರ ಒಬ್ಬೊಬ್ಬರದೇ ಒಂದೊಂದು ಪುಸ್ತಕ ಆಗುತೈತಿ ಚೆನ್ನೀ. ರಾಮಾಯಣಾ ಭಾರತಾ ಎಲ್ಲಾ ಸಪ್ಪಗೆ ಕಾಣುತಾವ ಇವರ ಚರಿತ್ರಗಳ ಮುಂದೆ."

"ಹಾಂಗಿದ್ದರ ಈಗಲೇ ಹೇಳಿಬಿಡಿರಿ ಸ್ವಲ್ಪ ಸ್ವಲ್ಪದರಾಗ. ನಿದ್ದೆ ಬಂತೋ ಏನು?"

"ನಿನ್ನಂಥಾ ಹೆಣ್ಣು ಮಗ್ಗುಲಾಗಿರುವಾಗ ಈಗಲೇ ನಿದ್ದೆ ಬಂದೀತೇನೇ!"

"ಇರಲಿರಲಿ ಹೇಳ್ರಿ. ನನ್ನೇನು ಅಟ್ಟಕ್ಕೇರಿಸಬ್ಯಾಡ್ರಿ. ಹ್ಯಾಂಗೂ ನಿಮ್ಮ ಹಿಂದೇ ಬಂದೆನಲ್ಲ. ಇನ್ನ್ಯಾತಕ್ಕ ನೀವು ನನ್ನ ಅಪುಪ್ಪರ ಮಾಡೂದು! ಹೂಂ. ಮೊದಲು ಬಾಜೀರಾಯರ ಕಥೀನೇ ಸುರು ಆಗಲಿ....ಅವರೇ ರಾಜರಿದ್ದಾಂಗ ಹೌದಲ್ಲೋ ನಿಮ್ಮ ತಂಡದಾಗ?"

"ಹೌದು. ಮೊದಲು ಅವರದೇ ಹೇಳೂದು ಬರಾಬರಿ," ಎಂದು ನುಡಿದು ಬಸಲಿಂಗ ಮತ್ತೊಂದು ಬೀಡಿ ಹೊತ್ತಿಸಿದ, ಒಂದೆರಡು ಬಾರಿ ಜುರು ಜುರು ಎಂದು ಹೊಗೆ ಸೇವಿಸಿ ಗಂಟಲು ಸರಿಪಡಿಸಿಕೊಂಡು ಹೇಳತೊಡಗಿದ.

## ಮೂರು...                    ಬಾಜೀರಾವ್ ದೇಶಪಾಂಡೆ

"ಬಾಜೀರಾಯರ ಮೂಲ ಊರೇನೂ ಇದಲ್ಲ ಚೆನ್ನೀ. ಅವರು ಅಕ್ಕೂರಿನವರು. ಅಕ್ಕೂರಿನ ದೇಶಪಾಂಡೆಯವರು...." ಎಂದು ಆರಂಭಿಸಿದ ಬಸಲಿಂಗ.

× × × ×

ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಹಳ್ಳಿಗಳನ್ನು ಬಿಟ್ಟು ಪಟ್ಟಣಗಳಿಗೆ ಬಂದು ನೆಲಸಿದ ಅನೇಕ ಜನ ಜಮೀನುದಾರರಲ್ಲಿ ಅಕ್ಕೂರಿನ ದೇಶಪಾಂಡೆಯವರೂ ಒಬ್ಬರು.

ಮೂವತ್ನಾಲ್ಕು ಮೂವತ್ತೈದು ವರ್ಷಗಳ ಹಿಂದಿನ ಮಾತು. ಇಂದು ಬಾಜೀರಾಯರೆಂದು ಕರೆಯಲ್ಪಡುವ ರಂಗರಾಯರಿಗೆ ಆಗ ಇನ್ನೂ ಐದು ವರ್ಷ. ಅವರ ತಂದೆಯವರಾದ ನಾರಾಯಣರಾಯರು ಸಾವಿರಾರು ಎಕರೆ ಭೂಮಿಯ ಒಡೆಯರು. ವರುಷಕ್ಕೆ ಇಪ್ಪತ್ತು ಸಾವಿರದ ಉತ್ಪನ್ನ. ತಮ್ಮ ಏಕಮಾತ್ರ ಗಂಡುಮಗ ರಂಗರಾಯರಿಗೆ ಇಂಗ್ಲೀಷು ಕಲಿಸಿ ಬ್ಯಾರಿಸ್ಟರನನ್ನಾಗಿ ಮಾಡುವುದೆಂದು ಆಕಾಂಕ್ಷೆಯಿಟ್ಟುಕೊಂಡು ಅಕ್ಕೂರಿನಿಂದ ಮನೆಯನ್ನು ಸ್ಥಳಾಂತರಿಸಿ ಓರೆಕೋರೆ ನಗರದಲ್ಲಿಯೇ ಬೀಡು ಬಿಡುವ ಯೋಜನೆ ಹೂಡಿದರು ನಾರಾಯಣರಾಯರು.

ಅಂಥ ಸಿರಿವಂತರಾದ ಜಮೀನುದಾರರು ಅವರಿವರ ಮನೆಗಳಲ್ಲಿ ಬಾಡಿಗೆದಾರರಾಗಿ ಇರುವುದೆಂದರೆ ಅವರ ಘನತೆಗೆ ಕುಂದಲ್ಲವೆ? ಎಂತಲೇ ನಾರಾಯಣರಾಯರು ಮನೆ ಹೂಡುವ ಮೊದಲು ಮನೆ ಕಟ್ಟಿಸುವ ಯೋಜನೆಯನ್ನೇ ಹೂಡಿ ಅಲ್ಪ ಬೆಲೆಗೆ ಸಿಕ್ಕುವಂತಿದ್ದ ಪಡಭೂಮಿಯೊಂದನ್ನು ತೆಗೆದುಕೊಂಡು ನಾಲ್ಕೈದು ಸಾವಿರ ಖರ್ಚುಮಾಡಿ ಭವ್ಯವಾದ ಮನೆಯನ್ನು ಕಟ್ಟಿಸಿದರು.

ಇಂದು ಅದೇ ಮನೆಯೇ "ದೇಶಪಾಂಡೆ ಮಹಾಲ್" ಎಂದು ಹೆಸರಾಗಿದೆ. ಹೆಸರಿಗೆ ತಕ್ಕ ಹಾಗೆ ಅದೊಂದು ಮಹಾಲ್ ಇದ್ದ ಹಾಗೇ ಇದೆ. ಹತ್ತಿಪ್ಪತ್ತು ಕೊಟಡಿಗಳು, ಮೇಲೆ ಮಹಡಿ, ಚಂದ್ರಶಾಲೆ, ಗ್ಯಾರೇಜ್, ಎದುರಿಗೆ ಪುಟ್ಟ ಕೈದೋಟ, ಅಂಗಳದಲ್ಲಿಯೇ ಸಿಹಿನೀರಿನ ಬಾವಿ. ಜಮಿನಾನ್ದಾರರು ಸುಖವಾಗಿ ಬಾಳುವೆ ಮಾಡಲು ಇನ್ನೇನು ಬೇಕು?

ಹಣಕ್ಕಂತೂ ಎಂದೂ ಕೊರತೆಯಾಗುವಂತಿಲ್ಲ ಆ ಮನೆತನಕ್ಕೆ. ಅವರ ಹೊಲಗಳನ್ನು ಲಾವಣಿಗೆ ಹಿಡಿದಿದ್ದ ರೈತರೆಲ್ಲರೂ ಸಾಮಾನ್ಯವಾಗಿ ಒಳ್ಳೆಯ ಜನರೇ. ವರ್ಷ ವರ್ಷವೂ ಲಾವಣಿ ಕೊಡುವುದನ್ನು ಯಾರೂ ತಪ್ಪಿಸುತ್ತಿರಲಿಲ್ಲ. ಲಾವಣಿ ಹಣದ ವಸೂಲಿಗಾಗಿ ನಾರಾಯಣರಾಯರೇ ಅಕ್ಕೂರಿಗೆ ಎಡತಾಕಬೇಕಾದ ಅವಶ್ಯಕತೆಯೂ ಇರಲಿಲ್ಲ. ಅವರು ಬಿಟ್ಟು ಬಂದ ವಾಡೆಯಲ್ಲಿ ಕಾರಕೂನರೊಬ್ಬರು ಇದ್ದುಕೊಂಡು ಜಮೀನುಗಳ ಸಂಬಂಧವ ಸಕಲ ವ್ಯವಸ್ಥೆಯನ್ನೂ ನೋಡಿಕೊಳ್ಳುತ್ತಿದ್ದರು. ಕಾರಕೂನರ ಸಾಮರ್ಥ್ಯದ ವಿಚಾರವಾಗಿ ನಾರಾಯಣರಾಯರಿಗೂ ಪೂರ್ಣ ನಂಬುಗೆ. ಆದರೂ ಕೂಡ ಅವರು ಎಲ್ಲದಕ್ಕೂ ಕಾರಕೂನರನ್ನೇ ಅವಲಂಬಿಸದೆ ಆಗಾಗ ಅಕ್ಕೂರಿಗೆ ಹೋಗಿ ಒಂದೆರಡು ದಿನವಿದ್ದು ಜಮಿನಾನ್ದಾರಿಕೆಯ ಮೇಲ್ವಿಚಾರಣೆ ನಡಸಿಬರಲು ಮರೆಯುತ್ತಿರಲಿಲ್ಲ.

ಅವರು ಈ ಊರಿಗೆ ಬಂದು ನೆಲಸಿದ ಬಳಿಕ, ಅವರ ಪತ್ನಿ ಇಬ್ಬರು ಹೆಣ್ಣುಮಕ್ಕಳನ್ನು ಹೆತ್ತರು. ದೊಡ್ಡವಳ ಹೆಸರು ಲಕ್ಷ್ಮೀಬಾಯಿ. ಸಣ್ಣವಳ ಹೆಸರು ಸುಶೀಲಾಬಾಯಿ. ಸುಶೀಲಾ ಹುಟ್ಟಿದ ತರುವಾಯ ರಾಧಾಬಾಯಿಯವರು ರೋಗಗಳಿಗೆ ಬಲಿಯಾಗಿ ಹಾಸಿಗೆ ಹಿಡಿದವರು ಮತ್ತೆ ಮೇಲಕ್ಕೇಳದೆ ಒಂದೆರಡು ವರ್ಷಗಳಲ್ಲೇ ತೀರಿಕೊಂಡರು. ಆಗ ರಂಗರಾಯರಿಗೆ ಇಪ್ಪತ್ತೆರಡು ವರ್ಷ, ಲಕ್ಷ್ಮೀಬಾಯಿಗೆ ಹದಿನೈದು ವರ್ಷ.

ಅದೇ ವರ್ಷವೇ ರಂಗರಾಯರು ಬಿ.ಎ. ಮುಗಿಸಿ ಪದವೀಧರರಾಗಿದ್ದರು. ಮೊದಲೇ ಯೋಚಿಸಿಕೊಂಡಿದ್ದಂತೆ ಅವರನ್ನು ಬ್ಯಾರಿಸ್ಟರರನ್ನಾಗಿ ಮಾಡುವ ಸಂಕಲ್ಪ ನಾರಾಯಣರಾಯರದು. ಅದಕ್ಕೆ ಮೊದಲು ಎಲ್.ಎಲ್.ಬಿ. ಮುಗಿಯಲೆಂದುಕೊಂಡು ಮುಂಬಯಿಯಲ್ಲಿ ಅವರನ್ನಿಡುವುದು ನಿಶ್ಚಿತವಾಯಿತು. ಬ್ಯಾರಿಸ್ಟರರಾಗಬೇಕೆಂಬ ಆಕಾಂಕ್ಷೆ ರಂಗರಾಯರಿಗೇನೂ ಇರಲಿಲ್ಲ. ವಕೀಲಿ

ಪರೀಕ್ಷೆಯೊಂದು ಮುಗಿದರೆ ಸಾಕೆಂದು ಅವರು ಯೋಚಿಸಿಕೊಂಡಿದ್ದರು. ಒಬ್ಬನೇ ಒಬ್ಬನಾದ ಮಗನನ್ನು ಪರಸ್ಥಳದಲ್ಲಿ ಬಿಡುವುದಕ್ಕೆ ನಾರಾಯಣ ರಾಯರ ಮನಸ್ಸು ಹಿಂಜರಿಯುತ್ತಿದ್ದಿತಾದರೂ ಇಬ್ಬರು ಹೆಣ್ಣುಮಕ್ಕಳನ್ನು ಕಟ್ಟಿಕೊಂಡು ಮುಂಬಯಿಯಂಥ ಮಹಾನಗರದಲ್ಲಿ ಮನೆ ಹೂಡುವ ಹಾಗೂ ಇರಲಿಲ್ಲ. ಅಂತೆಯೆ, ಅಡುಗೆಯ ಭೀಮಾಚಾರಿಯನ್ನು ರಂಗರಾಯರ ಹತ್ತಿರ ಇಡುವುದೆಂದು ನಿಶ್ಚಯಿಸಿ ಮುಂಬಯಿಗೆ ಹೋಗಿ, ಮನೆ ಹಿಡಿದು, ಅವಶ್ಯಕ ಸಾಮಗ್ರಿಗಳೆಲ್ಲವನ್ನು ತುಂಬಿಸಿ ಮರಳಿ ಬಂದರು.

ಮೊದಲನೆಯ ತಿಂಗಳ ವೆಚ್ಚಕ್ಕೆಂದು ನಾರಾಯಣರಾಯರು ಕೊಟ್ಟಿದ್ದ ನೂರು ರೂಪಾಯಿಗಳನ್ನು ಖರ್ಚುಮಾಡಲು ಹದಿನೈದು ದಿನಗಳೂ ಬೇಕಾಗಲಿಲ್ಲ ರಂಗರಾಯರಿಗೆ. ಮತ್ತೆ ನೂರು ರೂಪಾಯಿ ಕಳಿಸಿಕೊಡ ಬೇಕೆಂದು ತಂದೆಗೆ ಕಾಗದ ಹಾಕಿದರು.

"ಇದ್ದರೂ ಇರಬಹುದು. ಮುಂಬಯಿಯಂಥ ಮಹಾನಗರದ ವಾಸ. ಹಣ ನೀರಿನಂತೆ ಖರ್ಚಾಗುತ್ತದೆ. ನಮ್ಮ ದೇಶಪಾಂಡೆ ಮನೆತನದಲ್ಲಿ ಮೋಡಿಯನ್ನೇನೋ ಮರಾಠಿಗಿಂತ ಚೆನ್ನಾಗಿ ಬರೆಯಬಲ್ಲೆವಾದರೂ ಇದುವರೆಗೆ ಇಂಗ್ಲೀಷನ್ನು ಮಾತ್ರ ಯಾರೂ ಓದಿಲ್ಲ. ನನ್ನ ಏಕಮಾತ್ರ ಪುತ್ರನಾದರೋ ಬಿ.ಎ. ಮುಗಿಸಿದಾನೆ. ವಕೀಲಿಗೆ ಹೋಗಿದಾನೆ. ಟಿಳಕ ಮತ್ತು ಗಂಗಾಧರ ರಾಯರು ಕಲಿತಷ್ಟು ಇವನೂ ಕಲಿತು ಅವರ ಹಾಗೇ ಪ್ರಸಿದ್ಧ ಪುರುಷನಾದರೆ ನಮ್ಮ ಮನೆತನಕ್ಕೆ ಕೀರ್ತಿಯಲ್ಲವೆ? ತಿಂಗಳಿಗೆ ನೂರು ಇನ್ನೂರು ಹೋಗಲಿ. ಎರಡು ವರ್ಷಕ್ಕೆ ಬಹಳವಾದರೆ ಐದು ಸಾವಿರ ಆದೀತು. ಅದಕ್ಕೂ ಹೆಚ್ಚೆಂದರೆ ಏಳು ಸಾವಿರ ಆದೀತು. ಅಕ್ಕೂರಿನ ದೇಶಪಾಂಡೆಯವರಿಗೆ ಯಾತರ ಲೆಕ್ಕ ಈ ಏಳು ಸಾವಿರದ್ದು!" ಎಂದು ವಿಚಾರಮಾಡಿ ನಾರಾಯಣರಾಯರು ಒಂದು ನೂರು ರೂಪಾಯಿ ಕಳಿಸಿದರು.

ಹೀಗೆ ಒಂದೇ ಬಾರಿಗೆ ನೂರು ರೂಪಾಯಿಗಳಷ್ಟು ಹಣ ರಂಗರಾಯರ ಕೈಗೆ ಬರುತ್ತಿದ್ದುದು ಇದೇ ಮೊದಲು. ಓರೆಕೋರೆ ನಗರದಲ್ಲಿದ್ದಷ್ಟು ದಿನವೂ ಅವರ ಕಿಸೆಯಲ್ಲಿ ಬಹಳವಾದರೆ ಎರಡು ಮೂರು ರೂಪಾಯಿಗಳಿರುತ್ತಿದ್ದುವು, ಅಷ್ಟೆ. ಭಾರತದ ಇನ್ನಿತರ ನಗರಗಳನ್ನು ತನಗಿಂತಲೂ ನೂರು ವರ್ಷ ಹಿಂದೆ ಬಿಟ್ಟು ಮುಂದುವರಿದಿದ್ದ ಮುಂಬಯಿಯಲ್ಲಿ ಕೂಡಾ ತಿಂಗಳಿಗೆ ಎರಡು ನೂರು

ರೂಪಾಯಿ ಖರ್ಚುಮಾಡುವುದು ಸ್ವಲ್ಪ ಕಠಿನವೆಂದೇ ತೋರಿತು ರಂಗ ರಾಯರಿಗೆ. ನೂರಾರು ರೂಪಾಯಿಗಳನ್ನು ಒಂದೇಟಿಗೇ ನುಂಗುವಂಥ ಚಟಗಳೂ ಅವರಿಗಿರಲಿಲ್ಲ. ಸರಿಯೆ. ಹಣವನ್ನಂತೂ ಖರ್ಚುಮಾಡಲೇ ಬೇಕಲ್ಲ. ರಂಗರಾಯರ ಟ್ರಂಕುಗಳು ಹೊಸ ಹೊಸ ಫ್ಯಾಶನ್ನಿನ ಬಟ್ಟೆ ಬರೆ ಗಳಿಂದ ತುಂಬತೊಡಗಿದುವು. ಸೂಟುಬೂಟು ಹ್ಯಾಟುಗಳೂ ಬಂದುವು. ಸಾಕು ಸಾಕೆನ್ನಿಸುವಷ್ಟು ಬಟ್ಟೆಗಳ ಸಂಗ್ರಹವಾಗುತ್ತಲೂ ರಂಗರಾಯರಿಗೆ ಅವುಗಳ ಬಗೆಗೂ ಬೇಸರವಾಯಿತು. ಕೊರತೆಯಿರುವಾಗ ಆಸೆ, ಸಮೃದ್ಧಿ ಯಿದ್ದಾಗ ಬೇಸರು ಸ್ವಾಭಾವಿಕವೇ. ಅವರ ಸಹಪಾಠಿಗಳಲ್ಲಾರಿಗೂ ಅವರಷ್ಟು ಬಟ್ಟೆಗಳಿರಲಿಲ್ಲ. ರಂಗರಾಯರ ವೈಭವವನ್ನು ಕಂಡು ಎಲ್ಲರೂ ಚಕಿತರಾಗುವವರೇ. ಅವರ ದುಂದುಗಾರಿಕೆಯನ್ನು ಕಂಡು ನಗುತ್ತಿದ್ದವರಿಗೂ ಕೊರತೆಯಿರಲಿಲ್ಲ.

ರಂಗರಾಯರ ಸಹಪಾಠಿಗಳಲ್ಲಿ ಇವರಿಗಿಂತ ಸಿರಿವಂತರಾದವರಾರೂ ಇರಲಿಲ್ಲವೆಂದೇನೂ ಅಲ್ಲ. ದೊಡ್ಡ ದೊಡ್ಡ ದೇಸಾಯಿಗಳ ಮಕ್ಕಳೂ ಇದ್ದರು. ಆದರೆ ಅವರ ಇರುವಿಕೆಯೇ ಬೇರೆ ರೀತಿಯದು. ಬೆಲೆ ಬಾಳುವ ಬಟ್ಟೆಗಳನ್ನು ಅವರೂ ಧರಿಸುತ್ತಿದ್ದರಾದರೂ ಹತ್ತು ಬಟ್ಟೆಗಳಲ್ಲಿ ಉತ್ತಮವಾದುದನ್ನಾರಿಸಿ ಹೊಲಿಸುವ ಕೌಶಲ್ಯ ಅವರಲ್ಲಿತ್ತು. ರಂಗರಾಯರಾದರೋ ಚೆಂದಾಗಿ ಕಾಣಿಸಿ ದುದನ್ನೆಲ್ಲ ಕೊಂಡುಬಿಡುವವರು. ಒಮ್ಮೆ ಅಗಸನಲ್ಲಿಗೆ ಹೋಗಿ ಬಂದ ಬಟ್ಟೆ ಗಳನ್ನು ಮತ್ತೆ ತೊಡುವುದೂ ವಿರಳವೇ.

ಅಡುಗೆ ಮಾಡುವುದಕ್ಕಂತೂ ಪಾಕಶಾಸ್ತ್ರ ನಿಪುಣನಾದ ಭೀಮಾ ಚಾರಿಯೇ ಇದ್ದ. ಸಿರಿವಂತರ ಮನೆಯಲ್ಲಿಯೆ ಮೊದಲಿನಿಂದಲೂ ಅಡುಗೆ ಮಾಡಿ ಪಳಗಿದ ಕೈ ಅವನದು. ಅವನು ತಯಾರಿಸುವ ಶಿರಾ, ಪೂರಿ, ಉಪ್ಪಿಟ್ಟು ದೋಸೆಗಳ ಸವಿಯನ್ನನುಭವಿಸಿದ ರಂಗರಾಯರಿಗೆ ಯಾವ ಹೋಟಲಿನ ಪದಾರ್ಥಗಳೂ ರುಚಿಸುತ್ತಿರಲಿಲ್ಲ. ವಾರಕ್ಕೊಂದು ಬಾರಿ ಓರೆ ಕೋರೆ ನಗರದಿಂದ ಬೆಣ್ಣೆಯ ಪಾರ್ಸಲು ಬರುವುದು ತಪ್ಪುತ್ತಿರಲಿಲ್ಲ. "ಇಂಥಾ ಬೆಣ್ಣೀ ತುಪ್ಪ ತಿನ್ನಲಿಕ್ಕೆ ಮುಂಬಯಿ ಮಂದಿ ತಪಸ್ಸು ಮಾಡಬೇಕು ತಪಸ್ಸು!" ಎನ್ನುವನು ಭೀಮಾಚಾರಿ.

ಮುಂಬಯಿಗೆ ಬಂದಂದಿನಿಂದ ಭೀಮಾಚಾರಿಯೂ ಬೆಣ್ಣೆ ತಿನ್ನುವ

ತಪಶ್ಚರ್ಯೆಯನ್ನೇ ಸಾಗಿಸಿದ್ದ. ಓರೆಕೋರೆಯಲ್ಲಿದ್ದಷ್ಟು ದಿನವೂ ನಾರಾಯಣ ರಾಯರಿಗೆ ಹೆದರಿಕೊಂಡೇ ಇರಬೇಕಾಗಿದ್ದಿತಾದುದರಿಂದ ಅನಿರ್ಬಂಧವಾಗಿ ತಪಶ್ಚರ್ಯೆಮಾಡುವ ಸಂಧಿ ಅವನಿಗೆ ಲಭಿಸಿರಲಿಲ್ಲ. ಅಂತೆಯೇ, ನಲವತ್ತು ವರ್ಷಗಳ ಆಚಾರಿ ಅರವತ್ತು ವರ್ಷಗಳ ವೃದ್ಧನಂತೆ ಕೃಶವಾಗಿ ಹೋಗಿದ್ದ. ಮುಂಬಯಿಗೆ ಬಂದುದೇ ತಡ, ಅವನಿಗೆ ಕಾಯಕಲ್ಪ ಚಿಕಿತ್ಸೆ ನಡೆದಂತಾಯಿತು. ಕೋಲಿನಂತೆ ತೆಳ್ಳಗಿದ್ದ ಭೀಮಾಚಾರಿ ನಾಲ್ಕೈದು ತಿಂಗಳುಗಳಲ್ಲಿ ಪಠಾಣನ ದೊಣ್ಣೆಯಂತೆ ಬಲಿತುಕೊಂಡ. ಅದೇನೇ ಇದ್ದರೂ ಭೀಮಾಚಾರಿಯದು ಒಟ್ಟಿನಲ್ಲಿ ಹಿಡಿತದ ವ್ಯವಹಾರವೆಂದೇ ಹೇಳಬೇಕು. ಅಡುಗೆಯ ಖರ್ಚು ಐವತ್ತು ರೂಪಾಯಿಗಳಿಗೆ ಮಿಕ್ಕದಂತೆ ದಕ್ಷತೆ ವಹಿಸುತ್ತಿದ್ದ. ಕಸಮುಸುರೆ ಗಳಿಗಾಗಿ ಕಾಶಿಯೆಂಬ ಒಕ್ಕಲುಗಿತ್ತಿಯನ್ನಿಟ್ಟುಕೊಂಡು ಅವಳಿಗೆ ಹತ್ತು ರೂಪಾಯಿಗಳ ವೇತನ ಗೊತ್ತುಮಾಡಿದ್ದ.

ಕಾಶಿಗೆ ಇನ್ನೂ ತರುಣ ವಯಸ್ಸು. ಅವಳ ಪೂರ್ವಾಪರ ವೃತ್ತಾಂತ ಯಾರಿಗೂ ಗೊತ್ತಿರಲಿಲ್ಲ. ಭೀಮಾಚಾರಿ ಒಂದೆರಡು ಬಾರಿ ಕೆಣಕಿ ಕೇಳಿ ದಾಗಲೂ ಕಾಶಿಯಿಂದ ಉತ್ತರ ದೊರಕಿರಲಿಲ್ಲ. ಆತ ಆ ವಿಚಾರವನ್ನು ತಲೆಗೆ ಹಾಕಿಕೊಳ್ಳದೆ ತಿಂಡಿ ತಿನಿಸುಗಳನ್ನು ಕೊಟ್ಟು ಅವಳನ್ನು ಬಲೆಗೆ ಹಾಕಿಕೊಳ್ಳಲು ಯತ್ನಿಸಿ ವಿಜಯಿಯಾಗಿದ್ದ. ಹತ್ತು ವರ್ಷಗಳ ಹಿಂದೆ ಹೆಂಡತಿಯನ್ನು ಕಳೆದು ಕೊಂಡು ರಾಯರ ಮನೆಗೆ ಅಡುಗೆಯವನಾಗಿ ಸೇರಿಕೊಂಡ ಅನಂತರ ಅವನಿಗೆ ಹೆಣ್ಣಿನ ಸಹವಾಸ ಸುಖ ಲಭಿಸುವ ಯೋಗ ಬಂದಿರಲಿಲ್ಲ. ಓರೆಕೋರೆ ಯಲ್ಲಿರುವಷ್ಟು ದಿನ ಅವನ ಮೈಯಲ್ಲಿ ಉತ್ಸಾಹವೂ ಇರಲಿಲ್ಲ. ಮುಂಬಯಿಗೆ ಬಂದ ಬಳಿಕ ರಂಗರಾಯರ ಪುಣ್ಯದಿಂದ ಆಚಾರಿಯ ಮೈಯಲ್ಲಿ ಮತ್ತೆ ಹೊಸ ಉತ್ಸಾಹ ಸಂಚರಿಸಿತ್ತು. ರಂಗರಾಯರು ಒಮ್ಮೆ ತೊಟ್ಟು ಬಿಸುಟು ತ್ತಿದ್ದ ಶರ್ಟು ಕೋಟು ಪ್ಯಾಂಟುಗಳೆಲ್ಲ ಆಚಾರಿಯ ಸೊತ್ತಾಗಿ ಅವನೂ "ಶೋಕು" ಮಾಡುವಂತಾಗಿತ್ತು.

ಭೀಮಾಚಾರಿಗೂ ಕಾಶಿಗೂ ಬೆಳೆದುಬಂದಿದ್ದ ರಹಸ್ಯ ಪ್ರಣಯವನ್ನು ರಂಗರಾಯರೂ ಎಂದೋ ಕಂಡುಹಿಡಿದಿದ್ದರು; "ಪಾಪ, ಬಹಳ ಕಷ್ಟ ಪಟ್ಟಿದಾನೆ ಇಷ್ಟುದಿನ. ಈಗಲಾದರೂ ಸ್ವಲ್ಪ ಸುಖವಾಗಿರಲಿ," ಎಂದು ಹೇಳಿಕೊಂಡು ಅವರು ಸುಮ್ಮನಿದ್ದುಬಿಟ್ಟಿದ್ದರು.

"ನಮ್ಮ ಕಡೆಯ ಮಂದಿ ಮುಂಬಯಿಗೆ ಬಂದರೆ ಇಲ್ಲಿಯ ಹವಾ ಒಗ್ಗುವದಿಲ್ಲ, ಪ್ರಕೃತಿ ಕೆಡುತದೆ ಅಂತ ಬಡುಕೋತಾರೆ. ನಾನೂ ನಮ್ಮ ಬಾಜೀರಾಯರೂ ಎಷ್ಟು ಝೋಕಾಗಿದ್ದೀವಿ!" ಎಂದು ಭೀಮಾಚಾರಿ ಆಗಾಗ ಹೇಳುವುದಿತ್ತು.

"ನಿನ್ನ ಹಾಗೆ ಎಲ್ಲರಿಗೂ ತಿನ್ನಲು ಸಿಕ್ಕರೆ ಅವರೂ ಝೋಕಾಗೇ ಇರ್ರಾರೆ," ಎನ್ನುವಳು ಕಾಶಿ.

"ಅದೂ ಖರೇನೇ. ಅದಕ್ಕೂ ಪುಣ್ಯಾ ಮಾಡಿರಬೇಕು ಪುಣ್ಯಾ!" ಎನ್ನುವನು ಭೀಮಾಚಾರಿ. "ನಮ್ಮ ಬಾಜೀರಾಯರ ಪುಣ್ಯಾ ಏನು ಹೇಳಲಿ!"

ಅವನದು ಅತಿಶಯೋಕ್ತಿಯೆನ್ನುವ ಹಾಗೂ ಇರಲಿಲ್ಲ. ಇಪ್ಪತ್ತೆರಡರ ಪ್ರಾಯದ ಬಾಜೀರಾಯರು. ಅಷ್ಟೈಶ್ವರ್ಯಗಳಿದ್ದ ಮನೆತನದಲ್ಲಿ ಸುಂದರರಾದ ತಂದೆ ತಾಯಿಗಳ ಹೊಟ್ಟೆಯಲ್ಲಿ ಹುಟ್ಟಿ ಬಂದ ಸುಂದರ ಯುವಕ. ಗೌರವರ್ಣ. ಮೋಹಕವಾದ ನಿಲುವು. ಓರೆಕೋರೆಯಲ್ಲಿ ಹೆಚ್ಚು ಸ್ವಾತಂತ್ರ್ಯವಿಲ್ಲದೆ ಬಡಕಲಾಗಿದ್ದ ದೇಹ ಮುಂಬಯಿಗೆ ಬಂದಂದಿನಿಂದ ತುಂಬಿಕೊಂಡು ಬೆಳೆದು ಮುಖದ ಮೇಲೆ ರಾಜಸ ಕಳೆಯನ್ನು ಮೂಡಿಸಿತ್ತು. ಸೂಟು ಧರಿಸಿ ರಂಗರಾಯರು ಬೀದಿಯಲ್ಲಿ ಹೊರಟರೆಂದರೆ ಅನೇಕ ಕಣ್ಣುಗಳು ಅವರನ್ನು ಹಿಂಬಾಲಿಸುತ್ತಿದ್ದುವು. ತಮಗಿಂತಲೂ ಸಿರಿವಂತರಾದ ಲಕ್ಷಾಧೀಶ್ವರರ ಮಕ್ಕಳೊಡನೆ ಗೆಳೆತನ ಬೆಳಸಲು ಅವರಿಗೆ ಸಂಕೋಚವೆನ್ನಿಸಿದರೆ ದರಿದ್ರರೊಡನೆ ಬೆರೆಯಲು ಅಸಹ್ಯವಾಗುತ್ತಿತ್ತು. ಸಮಾನಯೋಗ್ಯತೆಯ ಸ್ನೇಹಿತರನ್ನು ಗುರುತಿಸುವುದು ಕಷ್ಟವಾಗಿ ಅವರು ತನ್ನಷ್ಟಕ್ಕೆ ತಾನೇ ಸುಖವಾಗಿರಲು ಯತ್ನಿಸುತ್ತಿದ್ದರು. ಅವರು ಎದೆ ತೆರೆದು ಮಾತನಾಡುತ್ತಿದ್ದುದು ಒಬ್ಬ ಭೀಮಾಚಾರಿಯ ಹತ್ತಿರ ಅಷ್ಟೆ.

ಭೀಮಾಚಾರಿಯ ಪ್ರಣಯ ವ್ಯವಹಾರವನ್ನು ನಿರೀಕ್ಷಿಸಿದ್ದ ಬಾಜೀರಾಯರಿಗೂ ಪ್ರಣಯ ವಿಚಾರಗಳತ್ತ ಮನಸ್ಸು ಹೊರಳಲು ಬಹಳ ದಿನ ಬೇಕಾಗಲಿಲ್ಲ. ಅವರಿಗೆ ತಿಳಿಯದಂತೆಯೇ ಅವರ ದೃಷ್ಟಿಯೂ ಹೆಣ್ಣಿನ ಬೇಟೆಗಾರಂಭಿಸಿತು. ಕಿಸೆಯಲ್ಲಿ ಹಣಕ್ಕೆ ಕೊರತೆಯಿರಲಿಲ್ಲ. ಹಿರಿಯರ ಹೆದರಿಕೆಯಿರಲಿಲ್ಲ. ಬಾಜೀರಾಯರ ಆಸೆ ಬ್ರೇಕಿಲ್ಲದ ಕಾರಿನಂತೆ ಓಡತೊಡಗಿತು.

ಒಂದು ಸಾಯಂಕಾಲ ಅವರು ತಮ್ಮ ಕೊಟಡಿಯ ಕಿಟಕಿಯ ಹತ್ತಿರ

ನಿಂತು ಸಹಜವಾಗಿ ಅತ್ತಿತ್ತ ದೃಷ್ಟಿಸುತ್ತಿದ್ದಾಗ ಎದುರುಮನೆಯ ಬಾಗಿಲಲ್ಲಿ ನಿಂತಿದ್ದ ಇಪ್ಪತ್ತರ ಪ್ರಾಯದ ಯುವತಿಯೊಬ್ಬಳನ್ನು ಕಂಡರು. ಥಳಥಳ ವೆನ್ನುವ ಜಾರ್ಜೆಟ್ ಸೀರೆ, ತೋಳುಗಳನ್ನು ತೆರೆದು ತೋರಿಸುತ್ತಿದ್ದ ರೇಶಿಮೆಯ ರವಕೆ. ತಮ್ಮ ಮನೆಯೆದುರಿಗಿದ್ದ ಹೂವಿನಗಿಡದಿಂದ ಹೂವು ಕೀಳುತ್ತಾ ನಿಂತಿದ್ದ ಆ ಯುವತಿ ಸ್ವಲ್ಪ ಬಾಗಿದ್ದುದರಿಂದ ಅವಳ ಸೆರಗು ಜಾರಿ ರವಕೆಯ ಒಂದು ಬದಿಯಿಂದ ಸುಪುಷ್ಟ ಸ್ತನಗಳು ಹೊರಬಂದು ಬಾಜೀರಾಯರ ಎದೆಯನ್ನು ಪುಲಕಗೊಳಿಸಿದುವು. ಅವುಗಳ ಮೇಲೆ ನೆಟ್ಟ ದೃಷ್ಟಿಯನ್ನು ಕಿತ್ತುಕೊಳ್ಳಲಾರದೆ ಅವರು ಹಾಗೇ ಎಷ್ಟೋ ಹೊತ್ತು ಕಿಟಕಿಯಲ್ಲೇ ನಿಂತು ಕೊಂಡಿದ್ದರು. ಅವರು ತನ್ನನ್ನು ದೃಷ್ಟಿಸುತ್ತಿದ್ದುದನ್ನು ಗಮನಿಸಿಯೇ ಅವಳು ಆ ಭಂಗಿಯಲ್ಲಿ ನಿಂತುಕೊಂಡಿದ್ದಳೋ ಏನೊ. ಬಾಜೀರಾಯರ ಹೃದಯದಲ್ಲಿ ವಿದ್ಯುತ್ಸಂಚಾರವಾದಂತಾಯಿತು. ತನ್ನನ್ನು ಯಾರಾದರೂ ನೋಡಿದರೇನೋ ಎಂಬ ಶಂಕೆಯಿಂದ ಒಮ್ಮೆ ಅತ್ತಿತ್ತ ಹೊರಳಿ ನೋಡಿದರು. ಯಾರೂ ನೋಡಲಿಲ್ಲವೆಂದು ಮನವರಿಕೆಯಾಗುತ್ತಲೂ ಮತ್ತೆ ಆ ಚೆಲುವೆಯತ್ತ ದೃಷ್ಟಿ ತಿರುಗಿಸಿದರು. ಅವಳು ಹಠಾತ್ತಾಗಿ ಕತ್ತೆತ್ತಿ ಅವರನ್ನೊಮ್ಮೆ ನೋಡಿದವಳೇ ಮಿಂಚಿನ ವೇಗದಿಂದ ನಡೆದು ಸೆರಗನ್ನು ಹಾರಿಸುತ್ತಾ ಮನೆಯಲ್ಲಿ ಪ್ರವೇಶಿಸಿದಳು. ಬಾಜೀರಾಯರ ಮನಸ್ಸು ಅವಳನ್ನು ಹಿಂಬಾಲಿಸಿಕೊಂಡು ಹೊರಟಿತು.

ಮತ್ತೆ ಅವಳು ಹೊರಗಡೆ ಬರುವುದನ್ನೇ ಎದುರುನೋಡುತ್ತ ಅವರು ಎಷ್ಟೋ ಹೊತ್ತು ಕಿಟಕಿಯಲ್ಲಿಯೇ ನಿಂತುಕೊಂಡರು. ಅವರ ಉದ್ವೇಗವನ್ನು ಹೆಚ್ಚಿಸುವುದೇ ಅವಳ ಉದ್ದೇಶವಾಗಿದ್ದಿತೇನೋ. ಆ ದಿನ ಅವಳು ಮತ್ತೆ ಹೊರಗಡೆ ಅಡಿಯಿಡಲಿಲ್ಲ. ಅಂದು ಬಾಜೀರಾಯರಿಗೆ ಊಟ ರುಚಿಸಲಿಲ್ಲ. ಭೀಮಾಚಾರಿಯ ಬಲವಂತದಿಂದಾಗಿ ನಾಲ್ಕು ತುತ್ತು ನುಂಗಿ, ಹಾಲು ಸೇವಿಸಿ ಹಾಸಿಗೆಯ ಮೇಲೆ ಬಿದ್ದುಕೊಂಡರು. ಅವರ ಕಣ್ಣುಗಳೆದುರಿಗೆ ಆ ಅಪರಿಚಿತ ಯುವತಿಯ ಮಾಟವಾದ ದೇಹ ಮತ್ತೆ ಮತ್ತೆ ಕಾಣಿಸಿಕೊಳ್ಳತೊಡಗಿತು. ಬಾಜೀರಾಯರಿಗೆ ಇಂಥ ಅನುಭವವಾಗುತ್ತಿದ್ದುದು ಅವರ ಜೀವನದಲ್ಲಿ ಅದೇ ಮೊದಲು ಬಾರಿ. ಒಂದು ಕಡೆ ಆ ಯುವತಿ ಅವರನ್ನು ಸೆಳೆಯುತ್ತಿದ್ದರೆ ಇನ್ನೊಂದು ಕಡೆ ಸಂಸ್ಕಾರ ಬಲದಿಂದ ಶುದ್ಧವಾಗಿದ್ದ ವಿವೇಕ ಅವರನ್ನು

ತಡೆಯುತ್ತಿತ್ತು. ಶೀಲ ಮತ್ತು ಸಚ್ಚಾರಿತ್ರ್ಯಗಳ ಮೂರ್ತಿಯಂತಿದ್ದ ತಂದೆಯ ಮುಖ ಕಣ್ಣುಗಳೆದುರಿಗೆ ಕಾಣಿಸಿಕೊಂಡು 'ಇದು ಸರಿಯಲ್ಲ, ಇದು ಸರಿಯಲ್ಲ, ಕಾಲು ಜಾರಬೇಡ' ಎಂದು ಹಿತೋಪದೇಶ ಮಾಡುತ್ತಿತ್ತು.

"ಛಿ. ಛಿ....ಎಂಥಾ ಅಧಃಪತನ ನನ್ನದು! ನಾನು ಯಾರು! ಅವಳು ಯಾರು! ಅಕ್ಕೂರು ಗ್ರಾಮದ ಇತಿಹಾಸಪ್ರಸಿದ್ಧ ದೇಶಪಾಂಡೆ ಮನೆತನದಲ್ಲಿ ಜನಿಸಿ ಬಂದವನು ನಾನು. ಸುಶಿಕ್ಷಿತ, ಪದವೀಧರ. ಅವಳು ಯಾವ ಕೀಳು ಕುಲದವಳೋ, ಯಾವ ಜಾತಿಯವಳೋ, ಎಂಥ ಶೀಲದವಳೋ ಯಾರು ಬಲ್ಲರು. ಅಶಿಕ್ಷಿತೆಯೋ ಸುಶಿಕ್ಷಿತೆಯೋ ಜ್ಞಾನಿಯೋ ಅಜ್ಞಾನಿಯೋ ಯಾರಿಗೆ ಗೊತ್ತು. ಆ ಮಾಟವಾದ ದೇಹವನ್ನಷ್ಟೇ ನೋಡಿ ಮಂಗನಂತೆ ಆಚರಿಸುವುದು ಎಂಥ ಮೂರ್ಖತನ. ಅವಳ ಚಿಂತೆಯಲ್ಲಿ ಊಟವನ್ನು ಬಿಟ್ಟು ಬಿದ್ದುಕೊಳ್ಳುವುದೆಂದರೆ ಶುದ್ಧ ಅವಿವೇಕವೇ ಸರಿ. ನನ್ನ ಗೌರವ, ನನ್ನ ತಾಯಿ ತಂದೆಗಳ ಗೌರವ, ನಮ್ಮ ಮನೆತನದ ಗೌರವಗಳಿಗೆಲ್ಲ ಕಲಂಕ ಸವರುವಂಥ ಕೃತಿಯನ್ನು ನಾನು ಕೈಗೊಳ್ಳಲಾಗದು...."

ಹಾಗೆ ಯೋಚಿಸಿ ರಂಗರಾಯರು ಹಾಸಿಗೆಯಿಂದೆದ್ದು ಓದುವ ಕೊಟಡಿಗೆ ಹೊರಟರು – ಯುವತಿಯತ್ತ ಓಡುತ್ತಿದ್ದ ಮನಸ್ಸನ್ನು ಬಿಗಿಹಿಡಿದು ವ್ಯಾಸಂಗದಲ್ಲಿ ಅದನ್ನು ತೊಡಗಿಸುವುದೆಂದು ನಿರ್ಧರಿಸಿ.

"ಕಾಶೀ, ಮೇರೀ ಕಾಶೀ, ಮೇರೀ ಸಜನೀ,"

ರಂಗರಾಯರು ತಬ್ಬಿಬ್ಬಾಗಿ ತಡೆದು ನಿಂತರು. ಅಡುಗೆಯ ಕೊಟಡಿಯಲ್ಲಿ ಭೀಮಾಚಾರಿ – ಕಾಶಿಯರ ಸರಸಸಲ್ಲಾಪ ಬಲು ಸ್ವಾರಸ್ಯಕರವಾಗಿ ಸಾಗಿತ್ತು. ರಂಗರಾಯರು ನಿದ್ರಿಸುತ್ತಿರುವರೆಂದೇ ನಂಬಿದ್ದ ಭೀಮಾಚಾರಿ ಅಡುಗೆಯ ಕೊಟಡಿಯ ಬಾಗಿಲನ್ನು ಮುಚ್ಚಿಕೊಳ್ಳದೆ, ಕಾಶಿಯನ್ನು ತನ್ನ ತೋಳುಗಳಲ್ಲಿ ತಬ್ಬಿ ಹಿಡಿದಿದ್ದ. ಆ ಬಾಗಿಲಿನೆದುರಿನಿಂದ ಹಾದು ಹೋಗುತ್ತಿದ್ದ ಹಾಗೇ ರಂಗರಾಯರು ಸಹಜವಾಗಿಯೇ ಆ ದೃಶ್ಯವನ್ನು ಕಂಡರು. ಅವರ ಮನಸ್ಸನ್ನು ತಡೆಹಿಡಿದಿದ್ದ ವಿವೇಕದ ಕೈ ಸಡಿಲುಗೊಂಡು, ಹೂವಿನ ಗಿಡದ ಬಳಿ ಬಾಗಿ ನಿಂತು ಸ್ತನಗಳನ್ನು ಪ್ರದರ್ಶಿಸುತ್ತಿದ್ದ ಯುವತಿಯ ರೂಪು ಮತ್ತೆ ಅವರ

ಬಗೆಗಣ್ಣಿನೆದುರು ಬಂದು ನಿಂತುಕೊಂಡಿತು. ಆ ಕೇಶರಾಶಿ, ಆ ಹಾರುವ ಸೆರಗು, ಆ ಕರೆಯುವ ಕಣ್ಣು....

ರಂಗರಾಯರು ಮತ್ತೆ ಹಿಂತಿರುಗಿ ಹೋಗಿ ಹಾಸಿಗೆಯ ಮೇಲೆ ದೇಹ ಚೆಲ್ಲಿದರು.

—ಎಂಥ ಹೆಣ್ಣು ಅದು! ನನ್ನನ್ನು ಒಂದೇ ಒಂದು ಸಲ ನೋಡಿ ಅವಳೇಕೆ ಹಾಗೆ ಓಡಿಬಿಟ್ಟಳು? ಅವಳ ದರ್ಶನದಿಂದ ನನ್ನ ಎದೆಯಲ್ಲಿ ವಿದ್ಯುತ್ಸಂಚಾರವಾದ ಹಾಗೇ ನನ್ನ ದರ್ಶನದಿಂದ ಅವಳಿಗೂ ಆಗಿರಬಹುದೇ? ನನ್ನನ್ನು ಕಂಡು ಅವಳ ಮನಸ್ಸಿನಲ್ಲೂ ಬಯಕೆಯ ಬಳ್ಳಿ ಮೊಳೆತಿರಬಹುದೇ? ಅಥವಾ ಹೆಣ್ಣಿಗೆ ಸ್ವಾಭಾವಿಕವಾದ ಲಜ್ಜೆಯೇ ಅವಳನ್ನು ಹಾಗೆ ಓಡಿಸಿರಬಹುದೇ? ನಾನು ಕಿಟಕಿಯಲ್ಲಿ ನಿಂತು ಅವಳನ್ನೇ ದಿಟ್ಟಿಸುತ್ತಿದ್ದುದನ್ನು ಯಾರಾದರೂ ನೋಡಬಹುದೆಂದು ಅವಳಿಗೆ ಅಂಜಿಕೆಯಾಗಿರಲೂ ಸಾಕು. ಹೌದು. ಅದೇ ಕಾರಣವಿರಬೇಕು ಅವಳು ಮನೆಯೊಳಗಡೆ ಮಾಯವಾಗಲು....

ತಂದೆಯ ಬಿದರಿಕೆಯಲ್ಲಿ ಬೆಳೆದು ಬಂದಿದ್ದ ರಂಗರಾಯರು ಓರೆಕೋರೆಯಲ್ಲಿಷ್ಟಷ್ಟು ದಿನ ಯಾವ ಹೆಣ್ಣನ್ನೂ ಆಸೆಯ ಕಣ್ಣುಗಳಿಂದ ನೋಡಿರಲಿಲ್ಲ. ಅಂತೆಯೇ ಯಾರನ್ನು ಕಂಡಾಗಲೂ ಅವರಿಗೆ ಈ ಬಗೆಯ ಅನುಭವವಾಗಿರಲಿಲ್ಲ. ಹೌದು. ಅವರ ಕಾಲೇಜಿನಲ್ಲಿ ಹುಡುಗಿಯರೂ ಇದ್ದರು. ಅವರೊಡನೆ ಮಾತನಾಡುವ ಸಂದರ್ಭಗಳೂ ಬಂದು ಹೋಗಿದ್ದುವು. ಇವರ ಸಿರಿವಂತಿಕೆಯನ್ನು ಕಂಡು ಮರುಳಾಗಿದ್ದ ಯುವತಿಯರನೇಕರು ಇವರೊಡನೆ ಸಲುಗೆ ಬೆಳಸಲು ಯತ್ನಿಸಿದ್ದುದೂ ಇತ್ತು. ರಂಗರಾಯರು ಮಾತ್ರ ಅವರ ಸಲುಗೆಯ ಜಾಲಕ್ಕೆ ತೊಡಕಿಕೊಂಡಿರಲಿಲ್ಲ. ಈಚೆಗೆ, ಮುಂಬಯಿಗೆ ಬಂದು ನೆಲಸಿದ ತರುವಾಯ ಬೆಡಗಿನ ಬಟ್ಟೆ ಧರಿಸಿ ಠೀವಿಯಿಂದ ಹೊರಡುವ ತನ್ನನ್ನು ನೋಡಿ ಮುಗುಳ್ನಗುವ ಸ್ತ್ರೀಯರನ್ನೂ ಅವರು ಕಂಡಿದ್ದರು. ಆದರೆ, ಯಾರೊಬ್ಬರೂ ಅವರ ಹೃದಯವನ್ನು ಹೀಗೆ ಅಲುಗಾಡಿಸಿರಲಿಲ್ಲ. ಎದುರು ಮನೆಯ ಈ ಬಿನ್ನಾಣಗಿತ್ತಿ....

"ಅವಳನ್ನು ನೋಡಲೇಬೇಕು. ಅವಳ ಪರಿಚಯ ಮಾಡಿಕೊಳ್ಳಬೇಕು. ಮಾತನಾಡಬೇಕು. ಸಾಧ್ಯವಾದರೆ...."

ಹಾಗೆ ಯೋಚಿಸುತ್ತ ಅವರು ಮತ್ತೆ ಕಿಟಕಿಯ ಬಳಿ ಬಂದು ನಿಂತು

ಕೊಂಡರು. ಅವರಿಗರಿಯದಂತೆಯೇ ಎದುರು ಮನೆಯ ಬಾಗಿಲಿನತ್ತ ನುಗ್ಗಿತು ಅವರ ದೃಷ್ಟಿ. ಆಗಲೂ ಆಕೆ ಅದೇ ಭಂಗಿಯಲ್ಲಿ ಅಲ್ಲಿಯೇ ನಿಂತ ಹಾಗೆ ಭಾಸವಾಯಿತು. ರಂಗರಾಯರು ಕಣ್ಣುಗಳನ್ನುಜ್ಜಿಕೊಂಡು ಅತ್ತಿತ್ತ ದೃಷ್ಟಿ ಯೋಡಿಸಿದಾಗ ಅವಳ ಮನೆಯ ಕಿಟಕಿಯೊಂದರ ಬಳಿ ಕುಳಿತು ತಲೆ ಬಾಚಿ ಕೊಳ್ಳುತ್ತಿದ್ದ ಅವಳ ಮೂರ್ತಿ ಗೋಚರವಾಯಿತು.

"ಇದೇನು, ಈಗ ಅಲಂಕಾರ ಮಾಡಿಕೊಳ್ಳುತ್ತಿದ್ದಾಳೆ? ವಾಕಿಂಗ್ ಹೋಗುವ ವಿಚಾರವೋ ಏನೋ."

ಅವಳು ತಲೆ ಬಾಚಿಕೊಂಡು, ಹೂ ಮುಡಿದುಕೊಂಡು ಮೇಲಕ್ಕೆದ್ದಳು. ರಂಗರಾಯರಿಗೆ ಇನ್ನು ಸಂಶಯವುಳಿಯಲಿಲ್ಲ. ಅವಳು ಸಾಯಂಕಾಲದ ವಾಯುವಿಹಾರಕ್ಕೆ ಹೊರಟಿರುವುದೇ ಖಂಡಿತ. ಬಹಳಮಾಡಿ ಚೌಪಾಟಿಯ ಕಡೆಗೇ ಹೋಗಬಹುದು. ತಾನೂ ಅವಳನ್ನು ಹಿಂಬಾಲಿಸಿಕೊಂಡು ಹೋಗ ಬೇಕು. ಇಂದೇ ಅವಳನ್ನು ಸಂಧಿಸಿ ಮಾತನಾಡಬೇಕು....

ಯೋಚನೆಯನ್ನು ಕೃತಿಗಿಳಿಸಲು ಯಾರ ಆತಂಕವೂ ಇರಲಿಲ್ಲ. ರಂಗ ರಾಯರೂ ಸೂಟು ಧರಿಸಿ ತಲೆ ಬಾಚಿಕೊಂಡು ಹೊರಹೊರಟರು. ಅವರು ಬೀದಿಗಿಳಿದ ಹಾಗೇ ಆ ಯುವತಿಯೂ ತನ್ನ ಮನೆಯಿಂದ ಹೊರಬಿದ್ದಳು. ರಂಗರಾಯರು ಒಮ್ಮೆ ಹಿಂತಿರುಗಿ ಅವಳನ್ನು ಅರ್ಥಪೂರ್ಣವಾಗಿ ನೋಡಿದರು. ಅರ್ಥವಾಯಿತೆನ್ನುವ ದೃಷ್ಟಿಯಿಂದ ಅವಳೂ ಅವರನ್ನು ನೋಡಿದಳು. ರಂಗ ರಾಯರೊಮ್ಮೆ ನಕ್ಕರು. ಅವಳೂ ಪ್ರತಿಯಾಗಿ ನಕ್ಕಳು. "ಗೆದ್ದೆ" ಎಂದು ಕೊಳ್ಳುತ್ತಾ ರಂಗರಾಯರು ಮುಂದೆ ಸಾಗಿದರು. ಅವಳೂ ಅವರನ್ನು ಅನುಸರಿಸಿದಳು.

ಚೌಪಾಟಿಗೆ ಬರುವವರೆಗೂ ಇಬ್ಬರೂ ಮೌನವಾಗಿಯೇ ಇದ್ದರು. ಕಡಲತೀರದ ಜನಜಂಗುಳಿಯಲ್ಲಿ ಬೆರೆತ ಬಳಿಕ ಮಾತ್ರ ಮಾತನಾಡಲು ಯಾವ ಆತಂಕವೂ ಉಳಿಯಲಿಲ್ಲ. ಆದರೂ ಒಮ್ಮೆಲೆ ಮಾತನಾಡಿಸಲು ಅವರಿಗೆ ಅಧೈರ್ಯ. ಅವಳಾದರೋ ನಗುನಗುತ್ತಾ ಅವರ ಪಕ್ಕದಲ್ಲಿಯೇ ನಡೆದು ಬರುತ್ತಿದ್ದಳು. ರಂಗರಾಯರಿಗೆ ಎಂದಿಲ್ಲದ ಸಂಕೋಚ. ಅವರ ಮೈಯೆಲ್ಲವೂ ಬೆವತುಕೊಂಡಿತ್ತು – ಕರವಸ್ತ್ರ ತೆಗೆದು ಮುಖವನ್ನೊರೆಸಿಕೊಂಡರು, ಉಗುಳು ನುಂಗಿ ಗಂಟಲು ಸರಿಪಡಿಸಿಕೊಂಡರು. ಮಾತನಾಡಿಸಬೇಕು, ಅವಳನ್ನು

ಮಾತನಾಡಿಸಬೇಕು. ಆದರೆ ಇದೇನು ಸೋಜಿಗ! ಮಾತೇ ಹೊರಡದಾಗಿದೆ ಯಲ್ಲ. ಏನಾಯಿತು ತನಗೆ? ಆದೇಕೆ ಇಂಥ ಅಧೈರ್ಯ ಮುತ್ತಿಕೊಂಡಿತು?

"ಐ....ಐ....ಯೂ....ಯೂ...." ಎಂದರು ರಂಗರಾಯರು. ಮುಂದೆ ಒಂದು ಶಬ್ದವೂ ಹೊರಡದಾಯಿತು.

ಇವರ ಅವಸ್ಥೆಯನ್ನು ಗುರುತಿಸಿಕೊಂಡ ಆ ಯುವತಿಯೇ ಮಾತ ನಾಡಿದಳು: ಅರ್ಥಾತ್ ಇಂಗ್ಲೀಷಿನಲ್ಲಿ.

"ಸಂಕೋಚವಾಗುತ್ತಿದೆಯೇನು?"

"ಅಬ್ಬ! ಎಂಥ ಧೀರೆ ಇವಳು! ನಿಜವಾಗಿ ಇವಳಿಗೇ ಸಂಕೋಚವಾಗ ಬೇಕು. ಎಂಥ ದಿಟ್ಟೆ! ನನ್ನ ಸಂಕೋಚವನ್ನು ನೋಡಿ ನನ್ನನ್ನೇ ಮೂದಲಿಸು ತ್ತಿದ್ದಾಳೆ!" ಎಂದು ತನ್ನಷ್ಟಕ್ಕೇ ಹೇಳಿಕೊಂಡು ರಂಗರಾಯರೆಂದರು:

"ಸಂಕೋಚವೇನೂ ಇಲ್ಲ. ಹೊಸ ಪರಿಚಯ....ಆದಕ್ಕೇ...."

"ಹೊಸ ಪರಿಚಯ? ಅಂದರೆ, ನೀವು ನನ್ನನ್ನು ಇವೊತ್ತೇ ನೋಡಿದಿರಾ?" ಎಂದು ಕೇಳಿದಳಾಕೆ, ಬೆರಗುಗೊಂಡ ಧ್ವನಿಯಲ್ಲಿ.

ಮತ್ತೆ ಗೊಂದಲಕ್ಕೊಳಗಾದರು ರಂಗರಾಯರು. ಅವಳಿಗೆ ಏನು ಉತ್ತರ ಹೇಳುವುದೆಂದು ತೋಚಲಿಲ್ಲ. ತಾನು ಅವಳನ್ನು ಇಂದೇ ನೋಡಿದುದೇನೋ ನಿಜವೇ ಆದರೂ ಹಾಗೆ ಹೇಳಿದಲ್ಲಿ ಅವಳು ನೊಂದುಕೊಳ್ಳಬಹುದೋ ಏನೋ. ಸ್ತ್ರೀಯರ ಮನಸ್ಸು–ಅದರಲ್ಲೂ ಯುವತಿಯರ ಮನಸ್ಸು–ಬಲು ವಿಚಿತ್ರ ವೆಂದು ಅನೇಕ ಕವಿಗಳು ಹೇಳಿಲ್ಲವೇ? ಯುವತಿಯರ ಹತ್ತಿರ ಮಾತನಾಡು ವಾಗ ಬಹಳ ಎಚ್ಚರದಿಂದಿರುವುದು ಅವಶ್ಯಕ....

"ಇವೊತ್ತೇ ಅಂದರೇನು, ಬಹಳ ದಿನಗಳಿಂದ ನೋಡುತ್ತಿದೀನಿ," ಎಂದು ಸುಳ್ಳು ಹೇಳಿದರು ರಂಗರಾಯರು.

ಅದು ಸುಳ್ಳೆಂಬುದನ್ನು ಅವಳೂ ತಿಳಿದುಕೊಂಡಳೇನೋ. ಒಂದು ರೀತಿಯ ನಗು ನಕ್ಕು ಹೇಳಿದಳು:

"ಎಂದು ನೋಡಿದಿರಿ ಎನ್ನುವದೇನು ಅಂಥ ಮಹತ್ವದ ಸಂಗತಿಯಲ್ಲ. ಹಾ? ಅಲ್ಲವೆ?" ಎನ್ನುತ್ತಾ ಅವಳು ಮೋಹಕವಾದ ರೀತಿಯಲ್ಲಿ ಕೊರಳು ಹೊರಳಿಸಿದಳು.

"ಹಾ! ಹೌದು. ಹೌದು," ಎಂದು ಹಲ್ಲು ಕಿರಿದರು ರಂಗರಾಯರು.

ಇಬ್ಬರೂ ತುಸುದೂರ ನಡೆದು ಜನವ ಗದ್ದಲ ಕಡಮೆಯಾಗಿದ್ದ ತಾಣ ವೊಂದರಲ್ಲಿ ಕುಳಿತುಕೊಂಡರು. ಅಸ್ತಮಿಸುತ್ತಿದ್ದ ಸೂರ್ಯನ ಮಂದಪ್ರಕಾಶ ದಲ್ಲಿ ಸ್ವೇಚ್ಛೆಯಿಂದ ನರ್ತಿಸುತ್ತಿದ್ದ ಅಲೆಗಳನ್ನು ದಿಟ್ಟಿಸುತ್ತಿದ್ದ ಹಾಗೆ ರಂಗರಾಯರ ಹೃದಯದಲ್ಲಿಯೂ ಬಗೆಬಗೆಯ ಭಾವನೆಗಳೆದ್ದು ಕುಣಿಯ ತೊಡಗಿದುವು. ಅರ್ಧಗಂಟೆಗೆ ಮೊದಲು ಯೋಚಿಸಿದುದೆಲ್ಲವೂ ಕೈಗೂಡುವ ಸಮಯ ಇಷ್ಟು ಬೇಗ ಬರಬಹುದೆಂದು ತಾನು ಭಾವಿಸಿರಲಿಲ್ಲ. ತಾನು ನಿಜವಾಗಿಯೂ ಸುದೈವಿಯಾಗಿರಬೇಕು. ಅಂತೆಯೇ ತಾನು ಬಯಸಿದುದೆಲ್ಲವೂ ನಿರಾಯಾಸವಾಗಿ ಲಭಿಸುತ್ತಿದೆ....

ಅವರಿಂದ ಒಂದು ಅಡಿಯಷ್ಟು ದೂರದಲ್ಲಿ ಅವಳು ಕುಳಿತಿದ್ದಳು, ಎಡಗೈ ಯನ್ನು ನೆಲಕ್ಕೂರಿ. ಕಡಲಿನ ಮೇಲಿನಿಂದ ಹಾರಿಬರುತ್ತಿದ್ದ ಗಾಳಿ ಅವಳ ಮುಂಗುರುಳುಗಳನ್ನೂ ಸೀರೆಯನ್ನೂ ಹಿಡಿದು ಸೆಳೆಯುತ್ತಿತ್ತು. ಸೆರಗನ್ನು ತಲೆಯ ಮೇಲೆ ಸುತ್ತಿಕೊಳ್ಳುತ್ತಾ ಅವಳು ರಂಗರಾಯರನ್ನೇ ದಿಟ್ಟಿಸು ತ್ತಿದ್ದಳು. ಅವಳ ಕಣ್ಣುಗಳಲ್ಲಿ ತುಂಟನಗು ಮಿಂಚುತ್ತಿತ್ತು. ಇಂಥ ಎಷ್ಟೋ ಯುವಕರನ್ನು ಅವಳು ಕಂಡವಳಲ್ಲವೆ!

"ನಿಮ್ಮ ಹೆಸರು ಹೇಳಲೇ ಇಲ್ಲವಲ್ಲ?" ಎಂದಳಾಕೆ ಒಯ್ಯಾರದಿಂದ ಮೈಯನ್ನು ಕುಲುಕುತ್ತ.

ರಂಗರಾಯರು ತಮ್ಮ ಹೆಸರು, ಊರು, ಆಸ್ತಿಪಾಸ್ತಿಗಳ ವಿಚಾರ ಹೇಳಿದರು.

"ನಿಮ್ಮ ಪರಿಚಯವಾದದ್ದು ಸಂತೋಷದ ಸಂಗತಿ. ನಮ್ಮ ಮನೆ ಯವರೂ ನಿಮ್ಮನ್ನು ನೋಡಿ ಸಂತೋಷಪಡುವರು. ನನ್ನ ಹೆಸರು ಮೇರಿ."

"ಮೇರಿ....ಮೇರಿ....ಅಂದರೆ...."

"ಹೌದು. ನಾವು ಕ್ರಿಸ್ತೀಯರು. ನೀವು ಬ್ರಾಹ್ಮಣರಲ್ಲವೆ? ಆದರೇನು, ನನ್ನ ನಿಮ್ಮ ಸ್ನೇಹಕ್ಕೆ ಈ ಜಾತಿಗಳೇನೂ ಅಡ್ಡಿಯಾಗಲಾರವು. ಅಲ್ಲವೇ?"

"ಹೌದು. ಹೌದು. ಜಾತಿಯದೇನು ಸಂಬಂಧ ಇದರಲ್ಲಿ? ನಾನೇನು ಅಂಥ ಸನಾತನಿಯಲ್ಲ."

"ಬಿ.ಎ. ಪಾಸಾಗಿದ್ದೀರಿ; ಲಾ ಓದುತ್ತಿದ್ದೀರಿ. ನಿಮ್ಮಂಥವರು ಸನಾತನಿಯಾಗಿರುವುದೂ ಸಾಧ್ಯವೇ?" ಎಂದಳು ಮೇರಿ.

ಮತ್ತೆ ಅವಳೇ ಹೇಳಿದಳು:

"ನೀವು ಆಧುನಿಕ ವಿಚಾರದವರೆಂದು ಆಗಲೇ ಗೊತ್ತಾಯಿತಲ್ಲ ನನಗೆ. ಹುಡುಗಿಯರು ಹೂವು ಕುಯ್ಯುತ್ತ ಮೈಮರೆತು ನಿಂತಾಗ ಅವರನ್ನು ಕದ್ದು ನೋಡುವುದುಂಟೇ ಸನಾತನಿಗಳು!"

ಅದು ತಮಾಷೆಯ ಮಾತೋ, ಟೀಕೆಯ ಮಾತೋ? ರಂಗರಾಯರಿಗೆ ಯಾವುದೂ ತಿಳಿಯಲಿಲ್ಲ.

ಮೇರಿಯೇ ಅವರ ಸಹಾಯಕ್ಕೆ ಬಂದಳು.

"ಪರವಾಯಿಲ್ಲ ಬಿಡಿರಿ. ನಾನೇನು ನಿಮ್ಮನ್ನು ಟೀಕೆ ಮಾಡುತ್ತಿಲ್ಲ. ನಿಮ್ಮಂಥ ಯುವಕರಾರಾದರೂ ನನ್ನನ್ನು ನೋಡುತ್ತಿರಬಹುದೆಂಬುದರ ಧ್ಯಾನವೂ ಇಲ್ಲದೆ ನಾನು ಹಾಗೆ ವರ್ತಿಸಿದ್ದು ನನ್ನದೇ ತಪ್ಪು, ಇರಲಿ. ಹ್ಯಾಗಿದೆ ಚೌಪಾಟಿಯ ಸೌಂದರ್ಯ?"

"ಕ್ಷಮಿಸಿರಿ ಮೇರಿ. ನಾನು ಹಾಗೆ ನಿಮ್ಮನ್ನು ನೋಡಬಾರದಾಗಿತ್ತು. ನನ್ನದು ತಪ್ಪಾಯಿತು. ಕ್ಷಮಿಸುವಿರಾ?" ಎಂದು ಎರಡೂ ಕೈ ಜೋಡಿಸಿ ಬೇಡಿಕೊಂಡರು ರಂಗರಾಯರು. ಮೇರಿ ಅವರ ಕೈ ಹಿಡಿದು ಅವುಗಳನ್ನು ವಿಂಗಡಿಸುತ್ತಾ ಹೇಳಿದಳು:

"ಕ್ಷಮೆ ಕೇಳುವಂಥದೇನನ್ನು ಮಾಡಿದ್ದೀರಿ ನೀವು? ಈ ಸಮುದ್ರ ತೀರದ ಸೊಬಗನ್ನು ಸವಿಯಲು ನಾವೆಲ್ಲಾ ಇಲ್ಲಿ ಸೇರಿಲ್ಲವೆ? ಸ್ವರ್ಗದಲ್ಲಿರುವ ಆ ತಂದೆ ಈ ಸೌಂದರ್ಯವನ್ನೆಲ್ಲಾ ಯಾಕೆ ಸೃಷ್ಟಿಸಿದ? ನಮ್ಮೆಲ್ಲರ ಆನಂದಕ್ಕಾಗಿಯೇ ಅಲ್ಲವೆ? ಪುರುಷರಿಗೆ ಆನಂದವನ್ನುಂಟುಮಾಡಲೆಂದೇ ಅವನು ಸ್ತ್ರೀಯರನ್ನು ನಿರ್ಮಿಸಿದ್ದು. ಅಲ್ಲವೆ? ನೀವೇನು ಹೇಳುತ್ತೀರಿ?"

"ಹಾ! ಎಸ್. ಎಸ್. ಕ್ವೈಟ್‌ರೈಟ್," ಎಂದರು ರಂಗರಾಯರು. ಅವರ ಸಂಕೋಚ ನಿಧಾನವಾಗಿ ಕರಗತೊಡಗಿತ್ತು.

"ಸ್ತ್ರೀಯರನ್ನು ಪುರುಷರು ನೋಡುವದು, ಪುರುಷರನ್ನು ಸ್ತ್ರೀಯರು ನೋಡುವದು ಎಲ್ಲಾ ಸಹಜವೇ. ನಾನೂ ಸುಂದರಿಯೇ ಸರಿ. ನನ್ನನ್ನು ನೋಡಿ ನೀವು ಆನಂದಪಟ್ಟುಕೊಂಡರೆ ನನಗೂ ಆನಂದವೇ. ನಿಮ್ಮ ಮನಸಿನಲ್ಲಿರುವದನ್ನು ನಾನು ಯಾವಾಗಲೋ ತಿಳಿದುಕೊಂಡಿದೇನೆ."

"ಹಾ?"

"ಹೌದು. ನಾನು ತಿಳಿದುಕೊಂಡಿದೇನೆ. ನನ್ನ ಬಗ್ಗೆ ನೀವು ಯಾವ ಯಾವ ವಿಚಾರ ಮಾಡಿರುವಿರೆಂಬುದನ್ನೂ ತಿಳಿದುಕೊಂಡಿದೇನೆ."

"ಹಾಗಾದರೆ ನಿಮ್ಮ ವಿಚಾರ?" ರಂಗರಾಯರು ಧೈರ್ಯ ತಂದು ಕೊಂಡು ಕೇಳಿದರು.

"ನನ್ನ ವಿಚಾರ? ನಾನೀಗಲೇ ಹೇಳಲಾರೆ," ಎನ್ನುತ್ತಾ ಮುಖವನ್ನು ಅತ್ತ ತಿರುಗಿಸಿದಳು ಮೇರಿ. ಅವಳ ಕೈಹಿಡಿದು ಸಮೀಪಕ್ಕೆಳೆದುಕೊಂಡು ತಬ್ಬಿಕೊಳ್ಳಬೇಕೆನ್ನಿಸಿದರೂ ಹಾಗೆ ಮಾಡಲು ಧೈರ್ಯ ಸಾಲಲಿಲ್ಲ ರಂಗ ರಾಯರಿಗೆ. ಅವಳ ವಿಚಾರಗಳೇನಿವೆಯೊ ಯಾರಿಗೆ ಗೊತ್ತು. ಕ್ರಿಶ್ಚಿಯನ್ ಹುಡುಗಿಯರು ಗಂಡಸರ ಜೊತೆಗೆ ಸರಳತನದಿಂದಲೂ ಸಲುಗೆಯಿಂದಲೂ ವರ್ತಿಸುವುದು ವಾಡಿಕೆಯ ಮಾತು. ಅವರ ಸಲುಗೆಯನ್ನು ಅಪಾರ್ಥ ಮಾಡಿ ಕೊಳ್ಳುವುದು ತಪ್ಪಾಗಬಹುದು....

ಹಾಗೆ ಯೋಚಿಸುತ್ತ ರಂಗರಾಯರು ಸುಮ್ಮನೆ ಕುಳಿತುಕೊಂಡರು. ಮತ್ತೆ ಅವಳೇ ಮಾತನಾಡಿದಳು :

"ನನ್ನ ತಮ್ಮ ಜಾರ್ಜ್ ಫಸ್ಟ್ ಇಯರ್‌ನಲ್ಲಿ ಓದುತ್ತಿದ್ದಾನೆ. ಅವನ ಅಭ್ಯಾಸದಲ್ಲಿ ನೀವು ಸ್ವಲ್ಪ ಸಹಾಯಮಾಡಿದರೆ ಬಹಳ ಉಪಕಾರವಾಗುವದು. ನನಗೂ ಪುರಸತ್ತಿರುವದಿಲ್ಲ. ವೇಳೆಯೆಲ್ಲಾ ಸ್ಕೂಲಿನಲ್ಲೇ ಕಳೆದುಹೋಗುತ್ತದೆ. ನೀವು ಲಾ ಓದುವವರು. ಸಾಕಷ್ಟು ಸಮಯವಿರುತ್ತದೆ. ಅಲ್ಲವೇ?"

"ಹೌದು. ಸಂತೋಷದಿಂದ ಸಹಾಯಮಾಡುವೆ. ನಿಮ್ಮ ಸ್ಕೂಲು ಅಂದಿರಲ್ಲ, ಯಾವುದು?"

"ನಮ್ಮ ಮನೆಯ ಹತ್ತರವೇ ಇದೆಯಲ್ಲ–ಹೈಸ್ಕೂಲು, ಅಲ್ಲಿ ನಾನು ಶಿಕ್ಷಿಕೆಯಾಗಿದೇನೆ. ಜಾರ್ಜನನ್ನು ಬಿ.ಎ. ವರೆಗೂ ಓದಿಸಿದ ಬಳಿಕವೇ ನನ್ನ ಮದುವೆಯ ವಿಚಾರ. ಹಾಗೆಂದಮಾತ್ರಕ್ಕೆ ನನ್ನ ಮದುವೆ ನಿಶ್ಚಯವಾಗಿದೆ ಯೆಂದು ತಿಳಿಯಬೇಡಿರಿ. ನನಗೂ ಅಂಥ ಅವಸರವೇನು ಇಲ್ಲ. ಇನ್ನೂ ನಾಲ್ಕು ವರ್ಷ ಹೋದರೂ ನನ್ನಂಥವಳನ್ನು ಮದುವೆಯಾಗಲು ಒಬ್ಬರಾದರೂ ಸಿದ್ಧರಾಗಬಹುದು. ಯಾಕೆ ರಂಗರಾವ್, ನಿಮಗೇನೆನ್ನಿಸುತ್ತದೆ?" ಎಂದು ಕೇಳುತ್ತಾ ಅವಳು ನಕ್ಕಳು.

"ಓಹ್ಹೋ. ಯಾಕೆ ಸಿದ್ಧರಾಗಲಾರರು? ನಿಮ್ಮಂಥ....?"

"ಏನು? ನಾನು ಸುಂದರಿ ಎಂದಲ್ಲವೇ ನೀವು ಹೇಳುವದು. ಸಾಗಲಿ ನಿಮ್ಮ ವರ್ಣನೆ. ನಾನೇನು ಬೇಡ ಅನ್ನುವದಿಲ್ಲ. ಮನಸ್ಸಿನಲ್ಲಿ ಬಂದದ್ದನ್ನೆಲ್ಲ ಸ್ಪಷ್ಟವಾಗಿ ಆಡುವವರೆಂದರೆ ನನಗೂ ಪ್ರೀತಿ. ನನ್ನ ಸ್ವಭಾವವೂ ಹಾಗೇ. ವೇಳೆಯಾಗುತ್ತಾ ಬಂತು. ಹೋಗೋಣವೇ?" ಅವಳು ಎದ್ದು ನಿಂತಳು. ಸರ್ಕಸ್ಸಿನಲ್ಲಿನ ರಿಂಗ್‌ಮಾಸ್ತರನ ಚಾಟಿಯನ್ನು ದೃಷ್ಟಿಸಿ ಕೆಲಸಮಾಡುವ ಕುದುರೆಯಂತೆ ರಂಗರಾಯರೂ ಎದ್ದು ಅವಳನ್ನನುಸರಿಸಿ ನಡೆದರು.

"ಓಹೊ. ಮರೆತೇ ಬಿಟ್ಟಿದ್ದೆ. ನೀವೂ ಕೂಡಾ ನನ್ನ ಹಾಗೇ ಇನ್ನೂ ಅವಿವಾಹಿತರೇ ಅಲ್ಲವೇ? ಅಥವಾ...." ಎಂದಳು ಮೇರಿ. "ನಿಮ್ಮ ಜನರಲ್ಲಿ ತೊಟ್ಟಿಲಲ್ಲೇ ಮದುವೆಮಾಡುವ ರೂಢಿ. ಅದಕ್ಕೆ ಕೇಳಿದೆ."

"ಅಂಥ ರೂಢಿಯಿರುವದೇನೋ ನಿಜ. ಆದರೆ ನಮ್ಮ ತಂದೆಯವರು ಅಂಥ ಗೊಡ್ಡು ಸನಾತನಿಗಳಲ್ಲ. ನಾನು ಬ್ಯಾರಿಸ್ಟರಾಗಿ ಬಂದ ಬಳಿಕವೇ ಮದುವೆ ಮಾಡುವದೆಂದು ಗೊತ್ತುಮಾಡಿದಾರೆ."

"ಬ್ಯಾರಿಸ್ಟರ್! ಹಾಗಾದರೆ ನೀವು ಇಂಗ್ಲೆಂಡಿಗೆ ಹೋಗಿ ಬರುವವರು ಅನ್ನಿರಿ. ಎಷ್ಟು ಅದ್ಭುತ! ನೀವೇ ಭಾಗ್ಯವಂತರಪ್ಪ. ನಮ್ಮಂಥವರಿಗೆಲ್ಲಾ ಎಲ್ಲಿಯ ಪುಣ್ಯ ಇಂಗ್ಲೆಂಡನ್ನು ನೋಡಲು!"

"ಅದ್ಯಾಕೆ? ನಾನು ಹೋದರೆ ನಿಮ್ಮನ್ನು ಕರೆದೊಯ್ಯುವೆನಂತೆ!"

"ಹಾ? ರಿಯಲೀ? (ನಿಜವಾಗಿಯೂ)" ಎಂದಳು ಮೇರಿ.

"ನೀವು ಬರಲೊಪ್ಪಿದರೆ...." ಎಂದು ನುಡಿದು ಆ ಮಾತನ್ನು ಅಷ್ಟಕ್ಕೇ ಬಿಟ್ಟುಬಿಟ್ಟರು ರಂಗರಾಯರು. ತಮ್ಮ ತಂದೆಯ ಗಂಭೀರ ಮುಖಮುದ್ರೆ ಅವರ ಬಗೆಗಣ್ಣುಗಳ ಮುಂದೆ ಮೂಡಿದಂತಾಯಿತು. ತಾನು ಯಾರು, ಮೇರಿ ಯಾರು, ಅವಳನ್ನು ತಾನು ತನ್ನ ಜೊತೆಯಲ್ಲಿ ವಿದೇಶಕ್ಕೆ ಕರೆದೊಯ್ಯುವು ದೆಂದರೇನು! ಎಲ್ಲಾ ಅಸಾಧ್ಯದ ಮಾತು. ತನ್ನ ಈ ಹುಚ್ಚಾಟವನ್ನು ನಡೆಯ ಗೊಟ್ಟಾರೇ ತನ್ನ ತಂದೆ?

ಮನೆ ಬರುವತನಕ ಮತ್ತೆ ಯಾರೂ ಮಾತನಾಡಲಿಲ್ಲ. ಮೇರಿಯ ಮನೆ ಬರುತ್ತಲೂ ರಂಗರಾಯರು ಅವಳನ್ನು ಬೀಳ್ಕೊಳ್ಳುತ್ತಾ,

"ಗುಡ್‌ನೈಟ್ ಮಿಸ್ ಮೇರಿ," ಎನ್ನುತ್ತಿದ್ದ ಹಾಗೆ ಅವಳು ಅವರ ಕೈಹಿಡಿದು,

"ಬನ್ನಿರಲ್ಲಾ ಒಳಕ್ಕೆ. ಬನ್ನಿ. ಬನ್ನಿ. ಸ್ವಲ್ಪ ಚಹಾ ತೆಗೆದುಕೊಂಡು ಹೋಗುವಿರಂತೆ," ಎಂದಳು.

ಮಂತ್ರಮುಗ್ಧರಾದವರ ಹಾಗೆ ರಂಗರಾಯರು ಅವಳನ್ನು ಹಿಂಬಾಲಿಸಿದರು.

ಮಧ್ಯಮವರ್ಗದವರು ವಾಸಿಸುವ ಸಣ್ಣಮನೆ. ಒಂದು ಕೊಟಡಿ, ಒಂದು ಅಡುಗೆಯ ಮನೆ, ಒಂದು ನಡುಮನೆ. ಮನೆಯಲ್ಲಿ ಬೇರೆ ಯಾರೂ ಇದ್ದಹಾಗೆ ಕಾಣುತ್ತಿರಲಿಲ್ಲ. ಮೇರಿ ಮತ್ತು ಅವಳ ತಮ್ಮ ಇಬ್ಬರೇ ಇರುವರೇನೋ ಎಂದುಕೊಳ್ಳುತ್ತಾ ನಡುಮನೆಯಲ್ಲಿದ್ದ ಕುರ್ಚಿಯೊಂದರಲ್ಲಿ ಕುಳಿತುಕೊಂಡರು ರಂಗರಾಯರು. ಮೇರಿ ಲಗುಬಗೆಯಿಂದ ಅಡುಗೆಯ ಮನೆಗೆ ಹೋಗಿ ಸ್ಟವ್ ಹೊತ್ತಿಸಿ ಚಹಕ್ಕೆ ನೀರಿಟ್ಟಳು. ಚಹ ಸಿದ್ಧವಾಗುತ್ತಿದ್ದ ಹಾಗೇ ಜಾರ್ಜ್ ಒಳಸೇರಿದ. ಹಸನ್ಮುಖದ ಹದಿನೆಂಟರ ಯುವಕ ಜಾರ್ಜ್. ಅಕ್ಕ ರಂಗರಾಯರ ಪರಿಚಯ ಮಾಡಿಕೊಡುತ್ತಲೂ ಸಂತೋಷವನ್ನು ಪ್ರದರ್ಶಿಸುತ್ತ ಅವರ ಕೈ ಕುಲುಕಿ, ತಾನೂ ಅವರೊಡನೆ ಕುಳಿತು ಚಹ ಸೇವಿಸಿದ. ಅವನು ಒಳ್ಳೆಯ ಮಾತುಗಾರ. ರಂಗರಾಯರ ಪರಿಚಯವಾದುದೇ ತಡ, ಹರಟೆಗಾರಂಭಿಸಿ. ಇಂಗ್ಲೆಂಡಿನ ರಾಜರ ವಿಚಾರ ಮೊದಲು ಮಾಡಿಕೊಂಡು ಹಾಗೇ ಜಗತ್ತಿನ ಪ್ರದಕ್ಷಿಣೆ ಹಾಕಿ ಮುಂಬಯಿನಗರದ ಆರೋಗ್ಯಶಾಖೆಗೆ ಬಂದು ಮುಟ್ಟಿ ಸಿನಿಮಾ ಪ್ರಪಂಚಕ್ಕೆ ತಲಪಿದೊಡನೆ ಮೇರಿಯೆಂದಳು :

"ಓಹ್ಹೊ. ಗೊತ್ತಾಯಿತು, ಗೊತ್ತಾಯಿತು. ಜಾರ್ಜೀಗೆ ಸಿನಿಮಾ ನೋಡುವ ಮನಸ್ಸಾಗಿದೆಯೆಂಬುದಂತೂ ಸ್ಪಷ್ಟ. ಯಾವುದಾದರೂ ಒಳ್ಳೆಯ ಚಿತ್ರವಿದೆಯೋ ?"

"ಮುಂಬಯಿಯಲ್ಲಿ ಒಳ್ಳೆಯ ಚಿತ್ರಗಳಿಗೇನು ಕ್ಷಾಮ ಮೇರಿ? ಗ್ಯಾರಿ ಕೂಪರ್ ಅಭಿನಯವಿರುವ....ಚಿತ್ರವಿದೆ. ಹೋಗೋಣವೇ ?"

ಗ್ಯಾರಿಕೂಪರ್ ಎಂದರೆ ಜಾರ್ಜಿನ ಮೆಚ್ಚುಗೆಯ ನಟ. ಅವನ ವಿಚಾರ ಮೇರಿಗೂ ಹುಚ್ಚೇ ಎನ್ನಬೇಕು.

"ಓಹ್ಹೊ. ನಾನಂತೂ ತಯಾರಿ. ನೀವೂ ಬರುತ್ತೀರಾ ರಂಗರಾವ್ ?"

ಮೇರಿಯ ಬಾಯಿಂದ ಅಂಥ ಆಹ್ವಾನ ಬಂದಾಗ ಇಲ್ಲವೆನ್ನಲು ಸಾಧ್ಯವೇ ರಂಗರಾಯರು ?

"ಯಾಕಾಗಲೊಲ್ಲದು. ನಡೆಯಿರಿ. ಎರಡು ತಾಸು ಸಂತೋಷವಾಗಿ ಕಳೆಯಬಹುದು."

ಮೇರಿ ಸೀರೆ ಬದಲಿಸಿ ಚಿಫಾನ್ ಸೀರೆಯೊಂದನ್ನುಟ್ಟು ಮುಖಕ್ಕೆ ಪೌಡರು ತೊಡೆದುಕೊಂಡು ಸಿಂಗಾರಾಗಿ ಬಂದಳು. ಬೀದಿಗಿಳಿಯುತ್ತಲೂ ರಂಗರಾಯರು ಟ್ಯಾಕ್ಸಿಯೊಂದನ್ನು ಕೂಗಿದರು.

"ಟ್ಯಾಕ್ಸಿ ಯಾತಕ್ಕೆ ಬಿಡಿ. ಬಸ್ಸಿನಲ್ಲಿ ಹೋದರಾಯಿತು," ಎಂದ ಜಾರ್ಜ್.

"ಬಸ್ಸಿನಲ್ಲಿ ಹೋಗುವದೇ ಆದರೆ ಸಿನಿಮಾಕ್ಕೇ ಹೋಗಬೇಕೇಕೆ?" ಎಂದು ಬಾಯಿಗೆ ಬಂದ ಮಾತು ಆಡಿ ಜಾರ್ಜನನ್ನು ಸಮಾಧಾನಗೊಳಿಸಿ, "ಮೇರಿಯ ಜೊತೆಗೆ ಸಿನಿಮಾಕ್ಕೆ ಹೋಗಲು ಟ್ಯಾಕ್ಸಿ ಅವಶ್ಯವಾಗಿ ಬೇಕು," ಎಂದು ಮನಸ್ಸಿನಲ್ಲಿಯೆ ಹೇಳಿಕೊಂಡರು ರಂಗರಾಯರು.

ಮೇರಿ ಜಾರ್ಜಿನ ಕಡೆ ನೋಡಿ ಅರ್ಥಗರ್ಭಿತ ನಗು ಬೀರಿದಳು. ರಂಗ ರಾಯರಿಗೆ ಗೊತ್ತಾಗದಂತೆ ಅವನೂ ತುಂಟನಗು ಬೀರಿ ಕಣ್ಣು ಕುಣಿಸಿದ. ಅಕ್ಕ ತಮ್ಮಂದಿರಿಬ್ಬರೂ ಆ ಮೂಕ ಭಾಷೆಯಲ್ಲಿ ಏನೇನನೋ ಮಾತನಾಡಿ ಕೊಂಡರು.

ಟ್ಯಾಕ್ಸಿ ಬಂದು ನಿಂತುಕೊಂಡಿತು. ಜಾರ್ಜ್ ತಾನೇ ಮೊದಲು ಹತ್ತಿ ಹೋಗಿ ಕಿಟಕಿಯ ಬಳಿ ಕುಳಿತುಕೊಂಡ. ಅವನ ಹಿಂದೆಯೇ ಮೇರಿ. ಅವಳ ತರುವಾಯ ರಂಗರಾಯರು. ಅರ್ಥಾತ್ ಮೇರಿಯ ದೇಹಕ್ಕೆ ಅಂಟಿಕೊಂಡೇ ಕುಳಿತಿರಬೇಕಾದ ಪ್ರಸಂಗ ಬಂದಿತು. ಅದೂ ಅವರಿಗೆ ಇಷ್ಟವಾದುದೇ. ಜಾರ್ಜ್ ಏನೆಂದುಕೊಳ್ಳುವನೋ ಎಂದುಕೊಳ್ಳುತ್ತ ಅವರು ಸ್ವಲ್ಪ ಮುದುಡಿ ಕೊಂಡೇ ಕುಳಿತರು.

ಜಾರ್ಜ್ ಏನೆಂದುಕೊಂಡನೋ. ಅವನ ಲಕ್ಷ್ಯವೇ ಇವರತ್ತ ಇದ್ದ ಹಾಗಿರಲಿಲ್ಲ.

ಮುಂಬಯಿಯ ವಾಹನಾದಿಗಳ ನಡುವೆ ಹಾದಿ ಮಾಡಿಕೊಳ್ಳುತ್ತ ಟ್ಯಾಕ್ಸಿ ಓಡತೊಡಗಿದ ಹಾಗೆ ಮೇರಿಯ ಎಡಗೈ ರಂಗರಾಯರ ತೊಡೆಗಳ ಮೇಲಾಡ ತೊಡಗಿತು. ಬಹಳ ಧೈರ್ಯಮಾಡಿ ರಾಯರು ಅದನ್ನು ತಮ್ಮ ಕೈಯಲ್ಲಿ ಹಿಡಿದು ಅದುಮಿದರು. ಮೇರಿ ಥಟ್ಟನೆ ಅವರತ್ತ ತಿರುಗಿ ಕುಲುಕುಲು ನಕ್ಕಳು.

ಯಾವುದೂ ಕಾಣದವರ ಹಾಗೆ ಕೇಳದವರ ಹಾಗೆ ಅತ್ತ ಮುಖ ಹೊರಳಿಸಿ ಕುಳಿತಿದ್ದ ಜಾರ್ಜ್. ಈತ ಮೇರಿಯ ತಮ್ಮನೆಂಬ ಮಾತನ್ನಾದರೂ ನಂಬುವುದು ಹೇಗೆ ಎಂದು ತನ್ನನ್ನು ತಾನೇ ಕೇಳಿಕೊಂಡರು ರಂಗರಾಯರು. ತನ್ನ ಹಾಗೇ ಅವನೂ ಒಬ್ಬ ಗೆಳೆಯನಾಗಿರಬಹುದು. ಅಥವಾ ದೂರದ ಸಂಬಂಧಿಕನಾಗಿದ್ದು ಅವಳ ಆಶ್ರಯದಲ್ಲಿ ಓದುತ್ತಿರಬಹುದು. ಅಥವಾ....ಇವಳ ಇಂಥ ಕೃತಿಗಳಲ್ಲಿ ಸಹಾಯಕನಾಗಿ ಕೆಲಸ ಮಾಡುವವನೂ ಆಗಿರಬಹುದು.

ಈ ಕೊನೆಯ ವಿಚಾರ ಹೊಳೆಯುತ್ತಲೂ ರಂಗರಾಯರ ಎದೆಯಲ್ಲಿ ಕಂಪನ ಹುಟ್ಟಿಕೊಂಡಿತು. ಮೇರಿ ನಿಜಕ್ಕೂ ಯಾರಾಗಿರಬಹುದು? ಹೈಸ್ಕೂಲಿನಲ್ಲಿ ಅವಳು ಶಿಕ್ಷಿಕೆಯಾಗಿದ್ದ ಮಾತನ್ನಾದರೂ ಹೇಗೆ ನಂಬುವುದು? ಮುಂಬಯಿಯ ಮವಾಲಿಗಳ ವಿಚಾರವಾಗಿ ರಂಗರಾಯರು ಕೇಳಿ ತಿಳಿದಿದ್ದ ಸಂಗತಿಗಳೆಲ್ಲ ಈ ಗಳಿಗೆಯಲ್ಲಿ ಅವರ ನೆನಪಿಗೆ ಬಂದವು. ಸಭ್ಯಸಂತೆ ವೇಷ ಹಾಕಿದ ಈ ಜಾರ್ಜ್ ಮವಾಲಿಗಳ ತಂಡವೊಂದರ ಸದಸ್ಯನಾಗಿರಬಹುದೇ? ಇವರಿಬ್ಬರೂ ಸೇರಿ ತನ್ನನ್ನು ಮರುಳುಗೊಳಿಸಿ ತನ್ನನ್ನು ಸುಲಿಯಲು ಹೊಂಚು ಹಾಕಿರಬಹುದೇ? ಈ ಹೆಣ್ಣಿನ ದೇಹಕ್ಕೆ ಆಸೆಮಾಡಿ ತಾನು ಇವರ ಮೋಸದ ಬಲೆಗೆ ಬೀಳುತ್ತಿಲ್ಲವಷ್ಟೆ?

ರಂಗರಾಯರ ವಿಚಾರಗಳು ಈ ರೀತಿ ರೂಪುಗೊಳ್ಳುತ್ತಿದ್ದ ಹಾಗೆ ಮೇರಿ ಅವರನ್ನು ಬಲೆಗೆ ಹಾಕಿಕೊಳ್ಳುವ ಸುಲಭ ಉಪಾಯಗಳನ್ನು ಕುರಿತು ಯೋಚಿಸುತ್ತಿದ್ದಳು. ರಂಗರಾಯರು ತನಗೆ ಮರುಳಾಗಿದ್ದುದಂತೂ ಸ್ಪಷ್ಟವಾಗಿಯೇ ಇತ್ತು. ಇನ್ನೂ ಮರುಳುಗೊಳಿಸಬೇಕು ಅವರನ್ನು, ಇದೇ ದಿನವೇ ಅವರು ತನ್ನ ಕೈಗೆ ಸಿಗುವಂತೆ ಮಾಡಬೇಕು ಎಂದು ಅವಳು ಎಣಿಕೆ ಹಾಕುತ್ತಿದ್ದಳು. ಅವರನ್ನು ಪೂರ್ಣವಾಗಿ ವಶಪಡಿಸಿಕೊಳ್ಳಲು ಅತ್ಯಂತ ಸುಲಭವಾದ ಸಾಧನವೆಂದರೆ ಸೆರೆ. ಆದರೆ, ಅವರು ಸೆರೆ ಕುಡಿಯುವರೋ ಇಲ್ಲವೋ....

ಸಿನಿಮಾ ಥಿಯೆಟರಿನ ಸಮೀಪದಲ್ಲಿಯೆ ಇದ್ದ ಒಂದು ಹೋಟೆಲಿನ ಹತ್ತಿರ ಟ್ಯಾಕ್ಸಿಯನ್ನು ನಿಲ್ಲಿಸಲು ಹೇಳಿ ಮೇರಿಯೆಂದಳು:

"ಬಾಯಾರಿ ಹೋಗಿದೆ. ಏನಾದರೂ ಡ್ರಿಂಕ್ಸ್ ತೆಗೆದುಕೊಂಡು ಹೋಗೋಣವೇ?"

ಅವಳ ನಿಕಟ ಸಾಮೀಪ್ಯದಿಂದಾಗಿ ರಂಗರಾಯರಿಗೂ ಬಾಯಿಯೊಣಗಿ

ದಂತಾಗಿತ್ತು. "ಯಾಕಾಗಲೊಲ್ಲದು. ಬನ್ನಿ," ಎಂದು ಅವರು ತಕ್ಷಣ ಕೆಳಗಿಳಿದು ಹೋಗಿ ಟ್ಯಾಕ್ಸಿಯವನಿಗೆ ಹಣ ಕೊಟ್ಟು ಅವನನ್ನು ಕಳಿಸಿದರು.

"ಏನು ತೆಗೆದುಕೊಳ್ಳೋಣ ಮೇರಿ ?"

"ನೀನು ಜಾರ್ಜ್ ?" ಎಂದಳು ಮೇರಿ.

"ನಾನು ಲೇಮನ್ ತೆಗೆದುಕೊಳ್ಳುತೇನೆ."

"ಸರಿ. ನನಗೂ ಅದೇ ಇರಲಿ."

"ನಿಮಗೆ ರಂಗರಾವ್ ?"

"ನನಗೂ ಅದೇ ಇರಲಿ."

ಸೇವಕ ಲೇಮನ್ ತರಲು ಹೋಗುತ್ತಿದ್ದ ಹಾಗೆ ಮೇರಿ ಅವನನ್ನು ತಡೆದು ಪಿಸುದನಿಯಲ್ಲಿ ಏನನೋ ಹೇಳಿದಳು. ಆತ ತಲೆ ಕೊಡಹಿ ಹೊರಟುಹೋದ.

ಐದು ನಿಮಿಷಗಳಲ್ಲಿ ಲೇಮನ್ ಬಂತು. ಮೂವರೂ ಗ್ಲಾಸುಗಳನ್ನು ಬಾಯಿಗೆ ಹಚ್ಚಿದರು. ಆ ಪಾನೀಯದ ವಾಸನೆ ಕೊಂಚ ವಿಲಕ್ಷಣವಾದ್ದ ದೆನ್ನಿಸದಿರಲಿಲ್ಲ ರಂಗರಾಯರಿಗೆ. ರುಚಿಯೂ ಕೂಡಾ ಲೇಮನ್ ಇದು ಹಾಗಿರಲಿಲ್ಲ. ಏನೋ ಒಂದು ಬಗೆಯ ಕಹಿಯಿತ್ತು, ಬಿಸಿಯೂ ಇತ್ತು.

"ಇದ್ಯಾಕೆ ಹೀಗಿದೆಯೋ ಲೇಮನ್ !" ಎಂದು ರಂಗರಾಯರು ಉದ್ಗಾರ ತೆಗೆಯುತ್ತಲೂ ಜಾರ್ಜ್ ಪಿಸಪಿಸನೆ ನಕ್ಕ. ಮೇರಿಯೂ ನಗುತ್ತಲೇ ನುಡಿದಳು :

"ಇದು ಲೇಮನ್ ಅಲ್ಲ – ಸುಪರ್‌ಮನ್."

"ಅಂದರೆ ?"

"ಹದಿನೈದು ನಿಮಿಷಗಳಲ್ಲಿ ನಿಮಗೇ ತಿಳಿಯುತ್ತದೆ," ಎನ್ನುತ್ತಾ ಅವಳು ಎದ್ದುಬಿಟ್ಟಳು.

ಅವಳೆಂದ ಹಾಗೇ ಹದಿನೈದು ನಿಮಿಷಗಳೊಳಗಾಗಿ ಅವರಿಗೇ ತಿಳಿಯಿತು ಅದೇನೆಂಬುದು. ತನ್ನ ಎದೆಯಲ್ಲಿ ಎಂದೂ ಇಲ್ಲದಿದ್ದ ಬಲ, ಉತ್ಸಾಹ, ಕಾವು ಕಾಣಿಸಿಕೊಳ್ಳುತ್ತಲೂ ಲೇಮನ್ ಜತೆಗೆ ತಾವು ಸೇವಿಸಿದ್ದುದು ವ್ಹಿಸ್ಕಿಯೇ ಇರಬೇಕೆಂದು ಅವರಿಗೆ ಮನವರಿಕೆಯಾಗದಿರಲಿಲ್ಲ. ರಂಗರಾಯರು ಮತ್ತೆ ಆ ವಿಚಾರ ಪ್ರಸ್ತಾಪಿಸುವ ಗೊಡವೆಗೆ ಹೋಗದೆ ಅದೊಂದು ದಿನದ ಮಟ್ಟಿಗೆ ತಾವೂ 'ಸುಪರ್‌ಮನ್' ಆಗುವುದೆಂದು ನಿರ್ಧರಿಸಿ, ಥಿಯೇಟರಿನ ಕತ್ತಲಲ್ಲಿ

ಮೇರಿಯ ಕೊರಳಿನ ಸುತ್ತ ಕೈಸೇರಿಸಿ, ಕೆನ್ನೆಗೆ ಕೆನ್ನೆಯಿರಿಸಿ "ಮೈಡಿಯರ್, ಮೈ ಡಾರ್ಲಿಂಗ್, ಐ ಲವ್‌ಯೂ," ಎಂದೆಲ್ಲ ಗುಣುಗುಣಿಸತೊಡಗಿದರು.

ಸೆರೆ ಕುಡಿದ ಮಂಗನಂತೆಯೆ ಅಂದು ರಂಗರಾಯರ ಸ್ಥಿತಿಯಾಯಿತು. ಸಿನಿಮಾ ಮುಗಿಯುತ್ತಲೂ ಜಾರ್ಜ್ ತಾನು ಮತ್ತೊಂದು ಸಿನಿಮಾ ನೋಡಿ ಬರುವುದಾಗಿ ಹೇಳಿ ಹೊರಟುಹೋದ. ರಂಗರಾಯರು ಮೇರಿ ಇಬ್ಬರೇ ಮನೆಗೆ ಹೊರಟರು. ತನ್ನ ಮನೆ ಸಮೀಪಿಸುತ್ತಲೂ ಮೇರಿ,

"ನೋಡಿ. ಇಷ್ಟು ಹೊತ್ತು ನಿಮ್ಮ ಜತೆ ಸಂತೋಷದಿಂದ ಕಳೆಯಿತು. ಇನ್ನು ನಾನೊಬ್ಬಳೇ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಳ್ಳಬೇಕಲ್ಲ!" ಎಂದಳು.

"ಅದ್ಯಾಕೆ ಒಬ್ಬಳೇ ಬೀಳಬೇಕು? ನಾನೂ ಬರಲೇ?" ಎಂದು ಕೇಳಿಯೇಬಿಟ್ಟರು ರಂಗರಾಯರು.

"ಬನ್ನಿರಲ್ಲ. ಸ್ವಲ್ಪ ಪಾನೀಯ ತೆಗೆದುಕೊಂಡು ಹೋಗುವಿರಂತೆ."

ಮೇರಿ ಅವರನ್ನು ನೇರವಾಗಿ ಕೊಟಡಿಗೆ ಕರೆದುತಂದಳು. ಕಿಟಕಿಗೆ ಹೊಂದಿಕೊಂಡಿದ್ದ ಹಾಸುಗೆ ಕೈಮಾಡಿ ಕರೆಯುವಂತಿತ್ತು. ಚಿಫಾನ್ ಸೀರೆಯನ್ನು ತೆಗೆದು ತೆಳ್ಳನೆಯ ಬಿಳಿ ಸೀರೆಯುಟ್ಟು ಮುಖ ತೊಳೆದುಕೊಂಡು ಬಂದಳು ಮೇರಿ. ಅವಳ ಎಡಗೈಯಲ್ಲೊಂದು ಬಾಟಲು. ಬಲಗೈಯಲ್ಲಿ ಬಟ್ಟಲುಗಳು.

"ಡ್ರೆಸ್ ತೆಗೆಯಲೇ ಇಲ್ಲವಲ್ಲ? ಹೀಗೇಕೆ ಕುಳಿತಿದ್ದೀರಿ?" ಎನ್ನುತ್ತಾ ಅವಳು ಬಟ್ಟಲುಗಳಲ್ಲಿ ಸೆರೆ ತುಂಬಿದಳು.

ನಿಜವಾಗಿ ರಂಗರಾಯರಿಗೆ ಆಗ ಸೆರೆ ಬೇಡವಾಗಿದ್ದಿತಾದರೂ ಮೇರಿಯ ಮನಸ್ಸು ನೋಯಿಸಬಾರದೆಂದು ಎರಡು ಬಟ್ಟಲುಗಳಷ್ಟು ಕುಡಿಯಲೇ ಬೇಕಾಯಿತು. ಆಗ ಇನ್ನೂ ಪಾನಪ್ರತಿಬಂಧಕ ಕಾನೂನು ಬಂದಿರಲಿಲ್ಲ ವಾದುದರಿಂದ ಕುಡಿಯುವುದಕ್ಕೆ ಅಂಥ ಆತಂಕವೂ ಇರಲಿಲ್ಲ. ಒಂದೇ ಒಂದು ಬಾರಿ ರಂಗರಾಯರಿಗೆ ತಮ್ಮ ತಂದೆಯ ನೆನಪಾಯಿತಾದರೂ ತೆಳ್ಳನೆಯ ಸೀರೆ ಯೊಳಗಿನಿಂದ ಎದ್ದು ಕಾಣುತ್ತಿದ್ದ ಮೇರಿಯ ತರುಣ ದೇಹದ ಮುಂದೆ ಅವರ ಬುದ್ಧಿ ಮಂಕಾಯಿತು.

"ಇಷ್ಟು ಮದ್ಯ ಬೇಡ ಮೇರಿ. ನನಗೆ ಅಮಲೇರಿತು!" ಎಂದರು ರಂಗರಾಯರು.

" ಚಿಂತಿಸಬೇಡಿ. ನಿಮ್ಮ ಅಮಲು ಇಳಿಸಲು ನಾನು ಸಮರ್ಥಳಿದ್ದೇನೆ," ಎನ್ನುತ್ತ ಅವಳು ಹಾಸಿಗೆಯ ಮೇಲುರುಳಿದಳು....

ಮರುದಿನದ ಬೆಳಗಿನಲ್ಲೆದ್ದು ಮನೆಗೆ ಹೋಗುತ್ತಲೂ ಭೀಮಾಚಾರಿಗೆ ಮುಖ ತೋರಿಸುವ ಧೈರ್ಯ ಬರಲಿಲ್ಲ ರಂಗರಾಯರಿಗೆ. ಆಚಾರಿ ತನ್ನ ಸೇವಕ, ತಾನು ಅವನ ಯಜಮಾನ. ಆದರೂ ತನಗೆ ಹಾಗೇಕೆ ಅಧೈರ್ಯ ವಾಗುತ್ತಿದೆಯೆಂಬುದು ಅವರಿಗೆ ಅರ್ಥವಾಗಲಿಲ್ಲ.

ಅವರು ಮನೆಯಲ್ಲಿ ಅಡಿಯಿರಿಸುತ್ತಲೂ ಭೀಮಾಚಾರಿಯ ಪ್ರಶ್ನೆ ಬಂದೇ ಬಿಟ್ಟಿತು :

" ರಾತ್ರಿ ಮನೆಗೇ ಬರಲಿಲ್ಲಲ್ಲರೀ ಬಾಜೀರಾಯರೆ? ನಾ ಬಹಳ ಗಾಬರಿ ಯಾಗಿ ಹೋಗಿದ್ದಿನಿ ?"

ರಂಗರಾಯರು ಹುಸಿನಗು ನಕ್ಕು ಸ್ನಾನಕ್ಕಿಳಿದರು. ಮುನ್ನಾದಿನದ ಸಾಯಂಕಾಲದಿಂದ ನಡೆದ ಘಟನೆಗಳೆಲ್ಲವೂ ಅವರ ಮನಸ್ಸಿನ ಕಣ್ಣುಗಳೆದುರಿಗೆ ಮೂಡಿ ಅವರನ್ನು ಮೂದಲಿಸತೊಡಗಿದುವು. ಕ್ರಿಶ್ಚಿಯನ್ ಹುಡುಗಿಯೊಬ್ಬಳ ತೆಕ್ಕೆಯಲ್ಲೊರಗಿ ರಾತ್ರಿಯನ್ನು ಕಳೆದುದಲ್ಲದೆ ಸೆರೆಯನ್ನು ಕುಡಿದುದಾಗಿತ್ತು. ಈ ವಿಚಾರ ತನ್ನ ತಂದೆಯವರಿಗೆ ಗೊತ್ತಾದರೆ ಅವರೆಷ್ಟು ನೊಂದುಕೊಳ್ಳ ಬಹುದು....ಛೆ. ಛೆ. ನಿನ್ನೆ ಆದದ್ದು ಆಗಿಹೋಯಿತು. ಇನ್ನು ಮುಂದೆ ಮಾತ್ರ ಮತ್ತೆ ಆ ಹೆಣ್ಣಿನ ಕಣ್ಣಿಗೆ ಸೋಲಬಾರದು, ಅವಳ ಮನೆಯಲ್ಲಿ ಕಾಲಿಡ ಬಾರದು....

ಆದರೆ ಆ ವಿಚಾರಗಳು ಬಹಳ ಕಾಲ ಬಾಳಲಿಲ್ಲ. ಸ್ನಾನ ಮುಗಿಸಿ ಅವರು ಕೊಟಡಿಗೆ ಬರುತ್ತಲೂ ಎದುರು ಮನೆಯ ಕಿಟಕಿಯತ್ತ ಹೊರಳದಿರಲಿಲ್ಲ ಅವರ ದೃಷ್ಟಿ. ' ಬೇಡ ಬೇಡ. ಅತ್ತ ನೋಡುವುದು ಬೇಡ ' ಎಂದು ಅವರೆಷ್ಟು ಹೇಳಿದರೂ ಮನಸ್ಸು ತಡೆಯಲಿಲ್ಲ.

ಮೇರಿಯೂ ಅದೇ ತಾನೆ ಸ್ನಾನ ತೀರಿಸಿ ಶುಭ್ರ ಬಟ್ಟೆ ಧರಿಸಿ ತನ್ನ ಪುಟ್ಟ ಹೂದೋಟದಲ್ಲಿ ತಿರುಗುತ್ತಿದ್ದಳು. ಕಿಟಕಿಯಲ್ಲಿ ರಂಗರಾಯರ ಮುಖ ಕಾಣಿಸುತ್ತಲೂ ಅವಳು ತನ್ನ ಬಲಗೈಯನ್ನೆತ್ತಿ ಬಾಯಿಗೆ ಮುಟ್ಟಿಸಿ ಚುಂಬಿಸಿದ ಹಾಗೆಮಾಡಿ ಆ ಚುಂಬನವನ್ನು ರಾಯರತ್ತ ನೀಡಿದಳು. ಕಿಟಕಿಯ ಸರಳು ಗಳಲ್ಲೇ ತೂರಿಕೊಂಡು ಜಿಗಿದು ಹೋಗಿ ಅವಳನ್ನು ಮುತ್ತಿಟ್ಟುಕೊಳ್ಳಬೇ

ಕೆನ್ನಿಸಿತು ರಂಗರಾಯರಿಗೆ. ಆ ಸಂದರ್ಭದಲ್ಲಿ ಅವರಿಗೆ ಬೇರಾವುದರ ಅರಿವೂ ಉಳಿಯಲಿಲ್ಲ.

ಅಂದಿನಿಂದ ಮೇರಿಯೊಡನೆ ಯಾವ ಅಡೆತಡೆಯೂ ಇಲ್ಲದೆ ಸರಾಗವಾಗಿ ಸಾಗಿತು ರಂಗರಾಯರ ಪ್ರಣಯಲೀಲೆ. ಅವರು ಮೇರಿಯ ದಾಸನಾದ ಹಾಗೆ ಸುರಾದೇವಿಯ ಪರಮಭಕ್ತರೂ ಆದರು. ರಾತ್ರಿ ಸೆರೆ ಕುಡಿಯದಿದ್ದರೆ ನಿದ್ದೆಯೇ ಬರದಂತಾಯಿತು. ಮೇರಿಯ ಜೊತೆಯಿಲ್ಲದಿದ್ದರೂ ಫರವಿಲ್ಲ, ಮದ್ಯ ಮಾತ್ರ ಅವಶ್ಯವಾಗಿ ಬೇಕೆನ್ನಿಸುವಷ್ಟೇ ಆ ದುರಭ್ಯಾಸ ಬೆಳೆಯಿತು. ಪ್ರತಿ ತಿಂಗಳೂ ಐವತ್ತು ರೂಪಾಯಿಗಳನ್ನು ಮೇರಿಗೆ ಸಲ್ಲಿಸಬೇಕಾಗುತ್ತಿತ್ತು. ಇನ್ನು ಮದ್ಯ, ಅದಕ್ಕೆಂದು ನೂರು ರೂಪಾಯಿ. ತಂದೆಯಿಂದ ಬರುತ್ತಿದ್ದ ಎರಡು ನೂರು ಏತಕ್ಕಾಗಬೇಕು? ಏನೇನೋ ಕಾರಣಗಳನ್ನು ಮುಂದೆಮಾಡಿ ಎರಡು ನೂರರ ಬದಲು ಮೂರು ನೂರು ಕಳಿಸಬೇಕೆಂದು ತಂದೆಗೆ ಬರೆದುಕೊಂಡರು. ಉದಾರ ಮನಸ್ಸಿನ ನಾರಾಯಣರಾಯರೂ ಆ ಬೇಡಿಕೆಯನ್ನು ನಿರಾಕರಿಸಲಿಲ್ಲ.

ಮೊದಲನೆಯ ವರುಷದ ಪರೀಕ್ಷೆಯೇನೋ ಸುಸೂತ್ರವಾಗಿ ಮುಗಿಯಿತು. ಎರಡನೆಯ ವರುಷ ಪುಸ್ತಕಗಳನ್ನು ಕೈಗೆತ್ತಿಕೊಳ್ಳುವುದಕ್ಕು ಕೂಡ ಅವರಿಗೆ ಬಿಡುವು ದೊರೆಯಲಿಲ್ಲ. ಮೇರಿಯಮ್ಮ ಮದ್ಯದಮ್ಮ ಇಬ್ಬರೂ ಅವರಿಗೆ ಜಿಗಳೆ ಗಳಂತೆ ಅಂಟಿಕೊಂಡಿದ್ದರು. ಸಹಜವಾಗಿಯೆ ಆ ವರುಷ ರಂಗರಾಯರು ಪರೀಕ್ಷೆ ಯಲ್ಲಿ ಲಾಗ ಹೊಡೆದರು.

"ಇನ್ನೊಂದು ವರ್ಷ ಕಲಿತು ಪಾಸಾಗಿ ಬರುತ್ತೇನೆ. ನಾನು ಕರ್ನಾಟಕ ದವನಾದ್ದರಿಂದ ಈ ಮುಂಬಯಿಯ ಗುಜರಾತಿಗಳು ನನ್ನನ್ನು ಬೇಕೆಂತಲೇ ನಾಪಾಸು ಮಾಡಿದ್ದಾರೆ. ನಾನಂತೂ ಶಕ್ತಿ ಮೀರಿ ಅಭ್ಯಾಸಮಾಡಿದ್ದೆ. ಆದರೂ ಹೀಗಾಯಿತು. ಏನು ಮಾಡುವುದು. ಉಪಾಯವಿಲ್ಲ," ಎಂದು ತಂದೆಗೆ ಕಾಗದ ಹಾಕಿದರು.

ಮುಂಬಯಿಯಲ್ಲಿ ತಮ್ಮ ಚಿರಂಜೀವಿ ನಡಸಿದ ಅಭ್ಯಾಸವೆಂಥದೆಂಬುದು ಓರೆಕೋರೆಯಲ್ಲಿದ್ದ ನಾರಾಯಣರಾಯರಿಗೆ ತಿಳಿಯುವುದಾದರೂ ಹೇಗೆ? ರಂಗರಾಯರ ದುಶ್ಚಟಗಳ ವಿಚಾರ ಭೀಮಾಚಾರಿಗೆ ಎಂದೋ ಗೊತ್ತಾಗಿದ್ದಿ ತಾದರೂ ಒಡೆಯನ ವಿಷಯಕವಾದ ಮೋಹದಿಂದ ಅವನೂ ಸುಮ್ಮನಿದ್ದು ಬಿಟ್ಟಿದ್ದ.

ನಾರಾಯಣರಾಯರು ಮಾತ್ರ ಓರೆಕೋರೆಯಲ್ಲಿಯೇ ಕುಳಿತುಕೊಳ್ಳದೆ ಒಂದು ಬಾರಿ ಮುಂಬಯಿಗೆ ಬಂದುಹೋದರು. ಅವರು ಅಲ್ಲಿದ್ದಷ್ಟು ದಿನ ರಂಗರಾಯರು ಮೇರಿಯ ಮನೆಯ ಕಡೆ ಕಣ್ಣು ಹೊರಳಿಸಲಿಲ್ಲ. ಅವಳ ಮನೆಯ ಮಗ್ಗುಲಿನ ಕಿಟಕಿಯನ್ನೇ ಮುಚ್ಚಿ ಅಲ್ಲಿ ಪುಸ್ತಕಗಳನ್ನಿಟ್ಟರು. ಬೆಳಗಿನ ನಾಲ್ಕು ಗಂಟೆಗೆ 'ಅಲಾರ್ಮ್' ಇಟ್ಟು, ಎದ್ದು ದೊಡ್ಡ ದೊಡ್ಡ ಪುಸ್ತಕಗಳನ್ನೋದುವ ನಟನೆ ಮಾಡಿದರು. ಆ ಪುಸ್ತಕಗಳ ತೂಕವನ್ನು ಗಮನಿಸಿಯೇ ನಾರಾಯಣರಾಯರಿಗೆ ದಿಗಿಲಾಯಿತು. ಅಂಥ ಭಾರಿ ಭಾರಿ ಪುಸ್ತಕಗಳನ್ನು ತಮ್ಮ ಏಕಮಾತ್ರ ಪುತ್ರ ಓದಿ ಜೀರ್ಣಿಸಿಕೊಳ್ಳಬೇಕಾದರೆ ಎಷ್ಟು ತೊಂದರೆಯಾಗುತ್ತಿರಬಹುದೊ! ಕನ್ನಡ ನಾಲ್ಕನೆಯ ವರ್ಗವನ್ನು ದಾಟುವುದಕ್ಕಾಗಿರಲಿಲ್ಲ ತಮ್ಮಿಂದ, ತಮ್ಮ ಮಗ ಮಾತ್ರ ಇಂಥ ಹೆಬ್ಬೊತ್ತಗೆಗಳನ್ನು ಓದಿ ಜಾಣನಾಗುತ್ತಿದಾನೆ, ಒಂದು ವರ್ಷ ಪಾಸಾಗದಿದ್ದರೇನಾಯಿತು, ಇನ್ನೂ ಒಂದು ವರ್ಷ ನಾಪಾಸಾದರೂ ಚಿಂತೆಯಿಲ್ಲ, ಅಂತೂ ಪರೀಕ್ಷೆ ಮುಗಿಸಿಕೊಂಡೇ ಊರಿಗೆ ಬರಲಿ, ತಿಂಗಳಿಗೆ ಐದುನೂರು ರೂಪಾಯಿ ಖರ್ಚು ಬಂದರೂ ಅಡ್ಡಿಯಿಲ್ಲ – ಎಂದುಕೊಂಡರು ನಾರಾಯಣರಾಯರು.

ಮುಂಬಯಿಯನ್ನು ಬಿಟ್ಟು ಊರಿಗೆ ಹೊರಡಲು ಭೀಮಾಚಾರಿಗೂ ಇಷ್ಟವಿರಲಿಲ್ಲ. ತನ್ನ ಕಿರಿಯ ಒಡೆಯರು ಪಡುತ್ತಿದ್ದ ಕಷ್ಟ, ಪರಭಾಷೆಯ ಶಿಕ್ಷಕರಿಂದಾಗುತ್ತಿದ್ದ ಕಾಲ್ಪನಿಕ ಉಪಟಳಗಳನ್ನು ಕುರಿತು ಆತ ವಿವರಿಸಿ ಹೇಳಿ ನಾರಾಯಣರಾಯರ ಕಣ್ಣುಗಳಲ್ಲಿ ನೀರೂರುವಂತೆ ಮಾಡಿದ.

"ಇನ್ನೊಂದು ವರ್ಷ ಸಹಿಸಬೇಕಪ್ಪಾ. ಅವನನ್ನು ಚೆನ್ನಾಗಿ ನೋಡಿಕೋ. ಅವನನ್ನ ಬಿಟ್ಟರೆ ನನಗೆ ಬೇರೆ ಯಾರಿದ್ದಾರೆ? ಹಣದ ಚಿಂತೆ ಮಾಡಬೇಡಿರಿ," ಎಂದು ಹೇಳಿ ನಾರಾಯಣರಾಯರು ಊರಿಗೆ ಹೊರಟರು.

ಆ ತಿಂಗಳಿನಿಂದ ರಂಗರಾಯರಿಗೆ ನಾಲ್ಕು ನೂರು ರೂಪಾಯಿಗಳ ಮನಿಆರ್ಡರು ಬರತೊಡಗಿತು. ಮೇರಿಗೂ ಇಪ್ಪತ್ತೈದು ರೂಪಾಯಿ "ಬಡ್ತಿ" ದೊರಕಿತು.

ಆ ವರ್ಷ ಹೇಗೋ ಅಷ್ಟಿಷ್ಟು ಓದಿಕೊಂಡು ರಂಗರಾಯರು ವಕೀಲಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಆ ವಾರ್ತೆಯನ್ನೊಳಗೊಂಡ ತಂತೀಕಾಗದ ನಾರಾಯಣರಾಯರ ಕೈಸೇರಿದಾಗ ಅವರಿಗುಂಟಾದ ಆನಂದ ಅವರ್ಣನೀಯ.

ಮತ್ತೊಂದು ವಾರ ಮುಂಬಯಿಯಲ್ಲಿದ್ದು, ಮೇರಿಯೊಡನೆ ಅದ್ಭುತವಾದ ರೀತಿಯಲ್ಲಿ "ಚೈನೀ ಹೊಡೆದು" ರಂಗರಾಯರು ಭೀಮಾಚಾರಿಯ ಸಮೇತ ಓರೆಕೋರೆಗೆ ಮರಳಿ ಬಂದರು.

ವಕೀಲಿಯ ಪದವಿಯೊಡನೆ ರಂಗರಾಯರು ಕುಡಿತದ ಚಟವನ್ನು ಹೊತ್ತು ತಂದರು.

'ದೇಶಪಾಂಡೆ ಮಹಾಲ್'ನ ಎದುರಿಗೆ–"ಆರ್. ಎನ್. ದೇಶಪಾಂಡೆ, ಬಿ.ಎ.ಎಲೆಲ್.ಬಿ.' ಎಂಬ ದೊಡ್ಡ ಹಲಗೆ ತೂಗಾಡತೊಡಗಿತು. ಮಹಲಿನ ಅಟ್ಟದ ಮೇಲೆ ಅವರ ವಕೀಲಿ ಕಚೇರಿಯೂ ಸ್ಥಾಪಿತವಾಯಿತು. ಕುರ್ಚಿಗಳು ಬಂದುವು, ಸೋಫಗಳು ಬಂದುವು, ದೊಡ್ಡದೊಂದು ಮೇಜೂ ಬಂತು.

ಮಗನು ವಕೀಲನಾಗುತ್ತಲೂ ಮೋಟಾರು ಕಾರು ತೆಗೆದುಕೊಳ್ಳಬೇಕೆಂದು ಬಹಳ ದಿನಗಳ ಹಿಂದೆಯೆ ನಾರಾಯಣರಾಯರು ಯೋಚಿಸಿಕೊಂಡಿದ್ದರು. ಈಗ ಅವರ ಆ ಆಸೆಯೂ ಕೃತಿಗಿಳಿದು ಮನೆಯೆದುರಿಗೆ ಕಾರು ನಿಂತುಕೊಂಡಿತು. ದಿನಗಳುರುಳಿದ ಹಾಗೆ ರಂಗರಾಯರು ಬಾಜೀರಾಯರೆಂಬ ಹೆಸರಿನಿಂದ ಜನಪ್ರಿಯರಾಗಿ ನಗರದ ಪ್ರತಿಷ್ಠಿತ ವ್ಯಕ್ತಿಗಳು ಸೇರಿ ಸ್ಥಾಪಿಸಿದ 'ಸರದಾರ್ಸ್ ಕ್ಲಬ್'ನ ಮಾನ್ಯ ಸದಸ್ಯರಲ್ಲೊಬ್ಬರಾದರು. ತಮ್ಮ ಮಗ ಆ ಕ್ಲಬ್ಬಿನ ಸದಸ್ಯನಾದುದೂ ಒಂದು ಗೌರವದ ವಿಷಯವೆಂದೇ ನಾರಾಯಣರಾಯರು ಭಾವಿಸಿದರು. ಕಾರಿನಲ್ಲಿ ಕುಳಿತು ಕ್ಲಬ್ಬಿಗೆ ಹೊರಟ ಮಗನನ್ನು ಕಂಡಾಗಲೆಲ್ಲ ಅವರ ಎದೆ ಹೆಮ್ಮೆಯಿಂದ ಅಗಲವಾಗುತ್ತಿತ್ತು.

"ಅಯ್ಯೋ, ಇವನ ತಾಯಿ ಈಗ ಬದುಕಿದ್ದರೆ ತನ್ನ ಮಗನ ವೈಭವ ನೋಡಿ ಎಷ್ಟು ಆನಂದಪಡುತ್ತಿದ್ದಳೋ. ಅವಳ ಹಣೆಯಲ್ಲೇ ಅದು ಬರೆದಿರಲಿಲ್ಲ," ಎಂದು ತಮ್ಮಷ್ಟಕ್ಕೇ ಹೇಳಿಕೊಂಡು ನಾರಾಯಣರಾಯರು ನಿಟ್ಟುಸಿರು ಹಾಕಿದುದೂ ಇತ್ತು.

ಬಾಜೀರಾಯರು ಬ್ಯಾರಿಸ್ಟರಾಗಿ ಬಂದರೆ ನಾರಾಯಣರಾಯರಿಗೆ ಸ್ವರ್ಗವೇ ಕೈಗೆ ಬಂದಂತಾಗುತ್ತಿತ್ತು. ಒಂದೆರಡು ಬಾರಿ ಅವರು ಆ ವಿಚಾರ ನೆತ್ತಿದಾಗ ಬಾಜೀರಾಯರು ಲಕ್ಷ್ಯ ಕೊಡದೆ ಮೌನ ತಳೆದುಬಿಟ್ಟರು. ಬೆಳೆದು ನಿಂತ ಮಗನನ್ನು ವಿಲಾಯತಿಗೆ ಕಳಿಸುವ ಯೋಚನೆಯೇ ಸರಿಯಾದುದಲ್ಲ

ವೆಂದುಕೊಂಡು ನಾರಾಯಣರಾಯರೂ ಆ ವಿಚಾರವನ್ನು ಅಷ್ಟಕ್ಕೇ ಬಿಟ್ಟು ಬಿಟ್ಟರು. ಹಿರಿಯ ಮಗಳು ಬೇರೆ ಬೆಳೆದು ನಿಂತಿದ್ದಳು. ಅವಳಿಗೊಂದು ಮದುವೆಯಾಗಬೇಕಾಗಿತ್ತು. ಬಾಜೀರಾಯರಿಗೂ ಮದುವೆಯ ವಯಸ್ಸಾಗಿತ್ತು. ಅವರಿಗೂ ವಿವಾಹವಾಗಬೇಕು. ಅಂದಿನಿಂದ ನಾರಾಯಣರಾಯರಿಗೆ ಆ ಮದುವೆಗಳದೇ ಒಂದು ಉದ್ಯೋಗವಾಯಿತು.

ದೊಡ್ಡ ಮಗಳು ಲಕ್ಷ್ಮೀಬಾಯಿಗೆ ಸರಿಯಾದ ಕಡೆಗೇ ವರ ದೊರಕಿತು. ಬಾಜೀರಾಯರು ವಕೀಲರಾಗಿ ಬಂದ ವರ್ಷವೇ ಲಕ್ಷ್ಮೀಬಾಯಿಯ ಮದುವೆಯೂ ನಡೆದು ಅವಳು ಗಂಡನ ಮನೆಗೆ ಹೊರಟುಹೋದಳು. ಬಾಜೀರಾಯರಿಗೆ ಮಾತ್ರ ಮದುವೆಯ ಬಗೆಗೆ ಅಂಥ ಆತುರವೇನೂ ಇರಲಿಲ್ಲ. ತಂದೆಯ ಬಲವಂತದಿಂದಾಗಿ ಅಲ್ಲಿ ಇಲ್ಲಿ ಹೋಗಿ ಹೆಣ್ಣು ನೋಡಿ ಬಂದರಾದರೂ ಯಾವ ಹುಡುಗಿಯೂ ಅವರ ಹೃದಯವನ್ನು ಸೆಳೆಯಲಿಲ್ಲ. "ಮೇರಿಯಂಥ ಹೆಣ್ಣು ಎಲ್ಲಿ ಸಿಕ್ಕಬೇಕು ಬ್ರಾಹ್ಮಣರಲ್ಲಿ!" ಎಂದೂ ಆಗಾಗ ಅನ್ನಿಸುವುದು ಬಾಜೀರಾಯರಿಗೆ. ನಾರಾಯಣರಾಯರಿಗೆ ಮಾತ್ರ ಮಗನ ವರ್ತನೆ ಅರ್ಥವಾಗುವಂತಿರಲಿಲ್ಲ.

ಮೇರಿಯ ವಿರಹವೇದನೆಯನ್ನು ಮರೆಸಲೆಂದು ಬಾಜೀರಾಯರು ಮೊದಲಿನಕಿಂತಲೂ ಹೆಚ್ಚಾಗಿಯೆ ಬಾಟಲೀ ಬಾಯಿಗೆ ಮೊರೆಹೋಗುತ್ತಿದ್ದರು. 'ಸರದಾರ್ಸ್ ಕ್ಲಬ್'ನಲ್ಲಿ ಕೂಡುತ್ತಿದ್ದವರೆಲ್ಲರೂ ಸಾಮಾನ್ಯವಾಗಿ ಕುಡುಕರೇ ಎನ್ನಬೇಕು. ಇಪ್ಪತ್ನಾಲ್ಕು ಗಂಟೆಗಳ ಕಾಲವೂ ಆ ಕ್ಲಬ್ಬಿನಲ್ಲಿ ಇಸ್ಪೀಟು ಆಟದ ಜೊತೆ ಜೊತೆಗೇ ಬಾಟಲುಗಳ ಹಾರಾಟವೂ ನಡೆಯುತ್ತಿತ್ತು. ಬಾಜೀರಾಯರಿಗೆ ಹಣದ ಕೊರತೆಯೂ ಇರಲಿಲ್ಲ. ಚಿಲ್ಲರೆ ಖರ್ಚಿಗೆಂದು ಮಗನಿಗೆ ಪ್ರತಿ ತಿಂಗಳೂ ಎರಡು ನೂರು ರೂಪಾಯಿ ಕೊಡುತ್ತಿದ್ದರು ನಾರಾಯಣರಾಯರು. ಈ ಹಣವನ್ನೆಲ್ಲ ಬಾಜೀರಾಯರು ಗೋವಾದೇವಿಯ ಪಾದಕ್ಕೆ ಅರ್ಪಿಸುತ್ತಿದ್ದರೆಂದೇನೂ ಇಲ್ಲ. ಕ್ಲಬ್ಬಿಗೆ ಸೇರಿದ ಕೆಲದಿನಗಳಲ್ಲಿಯೇ ಅವರು ಇಸ್ಪೀಟು ಆಟದಲ್ಲಿ ಪ್ರಭುತ್ವ ಪಡೆದು ದಿನವೂ ಹತ್ತಿಪ್ಪತ್ತು ರೂಪಾಯಿ ಸಂಪಾದಿಸತೊಡಗಿದ್ದರು. ಇಸ್ಪೀಟಿನಿಂದ ಬಂದದ್ದು ಗೊವಾದೇವಿಗಾಗಿ ಅಲ್ಲಿಂದಲ್ಲಿಯೇ ವ್ಯಯವಾಗಿ ಹೋಗುತ್ತಿತ್ತು. ತಂದೆಯಿಂದ ಸಿಕ್ಕುವ ಹಣದಲ್ಲಿ ಸ್ವಲ್ಪ ಭಾಗ ಬಟ್ಟೆ ಬರೆಗಳಿಗಾಗಿ ವೆಚ್ಚವಾಗಿ ಅರ್ಧದಷ್ಟು ಹಣವಾದರೂ ಉಳಿತಾಯವಾಗುತ್ತಿತ್ತು. ಅದನ್ನೂ

ನುಂಗಿಬಿಡಲು ಇಲ್ಲಿ ಯಾವ ಮೇರಿಯೂ ಇರಲಿಲ್ಲವಲ್ಲ! ಬಾಜೀರಾಯರು ಅತ್ತಿತ್ತ ದೃಷ್ಟಿ ಹೊರಳಿಸಿದ್ದಲ್ಲಿ ಅಂಥ ಮೇರಿಯರು ಸಿಕ್ಕುವುದು ಕಠಿನವಾಗುತ್ತಿರಲಿಲ್ಲವಾದರೂ ವಾಸ್ತವವಾಗಿ ಬಾಜೀರಾಯರಿಗೇ ಅತ್ತ ಮನಸ್ಸಿರಲಿಲ್ಲ. ತಿಂಗಳುಗಳು ಕಳೆದ ಹಾಗೆ ಮೇರಿಯ ಮೂರ್ತಿಯೂ ಅವರ ಮನಃಪಟಲದಿಂದ ಮರೆಯಾಗುತ್ತ ಬಂದಿತ್ತು. ಇಸ್ಪೀಟು ಮತ್ತು ಸೆರೆ ಎರಡು ಇದ್ದರಾಯಿತು, ಕೆಲವರಿಗೆ ಜಗತ್ತೇ ಮರೆತುಹೋಗುತ್ತದೆ.



ಮಗನಿಗುಂಟಿಕೊಂಡ ಮದ್ಯದ ವ್ಯಸನದ ಬಗೆಗೆ ನಾರಾಯಣರಾಯರಿಗೆ ಆರೇಳು ತಿಂಗಳುಗಳವರೆಗೂ ಕೊಂಚವೂ ತಿಳಿದಿರಲಿಲ್ಲ. ಮುಂಬಯಿಯಿಂದ ಬಂದ ಹೊಸದರಲ್ಲಿ ಕೆಳಗಿನ ಕೊಟಡಿಯಲ್ಲಿಯೆ ನಿದ್ರಿಸುತ್ತಿದ್ದ ಬಾಜೀರಾಯರು ಒಂದೆರಡು ತಿಂಗಳುಗಳ ತರುವಾಯ ತಮ್ಮ ಮಂಚವನ್ನೂ ಮಹಡಿಗೇ ಸಾಗಿಸಿದ್ದರು. ಅವರು ಕ್ಲಬ್ಬಿನಿಂದ ಮನೆಗೆ ಬರುವುದರೊಳಗಾಗಿ ನಾರಾಯಣರಾಯರು ಉಂಡು ನಿದ್ರೆ ಹೋಗಿರುತ್ತಿದ್ದರು. ಕಾರನ್ನು ಗ್ಯಾರೇಜಿನಲ್ಲಿ ಬಿಟ್ಟು ಬಾಜೀರಾಯರು ನೇರವಾಗಿ ಮಹಡಿಯನ್ನೇರಿ ಬರುತ್ತಿದ್ದರು. ಊಟದ ತಟ್ಟೆಯನ್ನೂ ಅಲ್ಲಿಗೇ ತಂದುಕೊಡುತ್ತಿದ್ದ ಭೀಮಾಚಾರಿ. ಹಸಿವಿದ್ದರೆ ಊಟ. ಇಲ್ಲವಾದರಿಲ್ಲ. ತಂದೆಯ ಮುಖದರ್ಶನವಾಗುತ್ತಿದ್ದುದು ಸಾಮಾನ್ಯವಾಗಿ ಬೆಳಗಿನ ಉಪಾಹಾರದ ಸಮಯದಲ್ಲಿ. ಅಷ್ಟರೊಳಗಾಗಿ ಬಾಜೀರಾಯರು ಸ್ನಾನ ತೀರಿಸಿ ಮಡಿಬಟ್ಟೆ ಧರಿಸುತ್ತಿದ್ದುದರಿಂದ ನಾರಾಯಣರಾಯರಿಗೆ ಮದ್ಯದ ಗಂಧವೂ ಹತ್ತುತ್ತಿರಲಿಲ್ಲ. ಬಾಜೀರಾಯರು ಕ್ಲಬ್ಬಿನಲ್ಲಿ ಕುಡಿಯುತ್ತಿದ್ದುದನ್ನು ನಾರಾಯಣರಾಯರಿಗೆ ಹೇಳುವವರಾದರೂ ಯಾರು?

ಹೀಗೇ ಕೆಲವು ವರ್ಷ ಕಳೆದುವು. ಯೂರೋಪಿನಲ್ಲಿ ಯುದ್ಧ ಬಿರುಸಾಗಿ ಸಾಗಿತ್ತು. ಅದರ ಪರಿಣಾಮವಾಗಿ ಇಲ್ಲಿ ರೇಶನ್ ಕಾಲಕ್ಕಾರಂಭವಾಯಿತು. ಆಹಾರ ಶಾಖೆಯಲ್ಲಿ ಹೊಸ ಹೊಸ ನೌಕರರ ಭರತಿಯಾಗುತ್ತಲೂ ನಗರದಲ್ಲಿ ವಾಸದ ಮನೆಗಳ ಬೇಡಿಕೆ ಬಲವಾಯಿತು. ಮುಂಧೋರಣೆಯ ನಾರಾಯಣರಾಯರು ಅಂದಿನಿಂದಲೇ ಚಾಳಗಳನ್ನು ಕಟ್ಟಿಸಲಾರಂಭಿಸಿದರು. ‘ದೇಶಪಾಂಡೆ ಮಹಾಲ್’ ಅಲ್ಲಿ ಇಲ್ಲಿ ವಿಭಾಗಗಳಾಗಿ ‘ದೇಶಪಾಂಡೆ ಚಾಳ್’ ಆಯಿತು. ಮಹಲಿನ ಎದುರಿಗಿದ್ದ ಬಯಲುಸ್ಥಳದಲ್ಲೂ ಚಿಕ್ಕ ಚಿಕ್ಕ ಮನೆಗಳನ್ನೊಳಗೊಂಡ

ಒಂದು ಸಾಲು ಎದ್ದಿತು. ಅವುಗಳನ್ನೆಲ್ಲ ಬಾಡಿಗೆಗೆ ಕೊಟ್ಟು ನಾರಾಯಣ ರಾಯರು "ಚಾಳ್ ಮಾಲೀಕ" ಎಂಬ ಹೊಸ ಅಭಿದಾನ ಗಳಿಸಿದರು.

ಬಾಜೀರಾಯರ ಮಹಡಿಗೆ ಮಾತ್ರ ಯಾರೂ ಕೈ ಹಚ್ಚಲಿಲ್ಲ. ಅದು ಕೊನೆಯವರೆಗೂ ಅವರ ಖಾಸಗೀ ಬಿಡಾರವಾಗಿಯೇ ಉಳಿಯಿತು.

ಅದೇ ವರ್ಷ ಮದುವೆ ಮಾಡಿಕೊಂಡಿದ್ದ ಮೋಜಣ್ಣವರ ವಕೀಲರೂ ಸಂಸಾರ ಹೂಡಲು ಮನೆಯೊಂದನ್ನು ಹುಡುಕುತ್ತಿದ್ದರು. ದೇಶಪಾಂಡೆ ಚಾಳದಲ್ಲಿ ಹೊಸದಾಗಿ ರೂಪುಗೊಂಡ ನಾಲ್ಕು ಕೊಟಡಿಗಳ ಮನೆಯೊಂದಕ್ಕೆ ಅವರು ಬಾಡಿಗೆದಾರರಾಗಿ ಬಂದುದೂ ಆಯಿತು.

ಮೋಜಣ್ಣವರ ವಕೀಲರು ಮತ್ತು ಅವರ ಹೆಂಡತಿ ಗೌರಾದೇವಿ....

## ನಾಲ್ಕು....                                                    ತಾರಾಬಾಯಿ

"ಚೂ....ಚೂ....ನಿಲ್ಲೋ," ಎಂದಳು ಚೆನ್ನಿ – ಬಸಲಿಂಗನ ಎಡ ದೋಳನ್ನು ಚಿವುಟುತ್ತ.

"ಅಯ್ಯಯ್ಯೊ, ಯಾಕ ಚಿವುಟುತೀಯೇ?" ಎನ್ನುತ್ತಾ ಆತ ಎದ್ದು ಕುಳಿತ, ಬೀಡಿಯೊಂದನ್ನು ಹೊತ್ತಿಸಿ ತುಟಿಗಳ ಮಧ್ಯೆ ಇಟ್ಟುಕೊಂಡು,

"ಏನೇ, ಏನಾತು?" ಎಂದು ಕೇಳಿದ.

"ಅಗಸರ ಕತ್ತೆ ಸಿಕ್ಕತ್ತ ಓಡಿದಾಂಗ ಒಂದರಿಂದ ಇನ್ನೊಂದಕ್ಕ ಜಗೀತೀಯಲ್ಲ! ಬಾಜೀರಾಯರ ಹೆಂಡತೀ ಸುದ್ದೀ ಕೂಡಾ ತೆಗೀದೇ ಮೋಜಣ್ಣವರ ಹೆಂಡತಿಯ ಕತೀ ಸುರೂ ಮಾಡಿದಿಯಲ್ಲ!"

"ಹೌದೌದು. ಮರತುಬಿಟ್ಟೆನಿ ನೋಡು. ನನ್ನಂಥಾ ಕತ್ತೆಗೆ ನಿನ್ನಂಥಾ ಅಗಸಗಿತ್ತಿ ಇದ್ದರೇನೇ ಪಾಡು ನೋಡು ಚೆನ್ನೀ!" ಬಸಲಿಂಗ ಜುರು ಜುರು ಹೊಗೆಯೆಳೆದ, ಒಂದೆರಡು ಬಾರಿ ಕೆಮ್ಮಿದ, ಮತ್ತೆ ಹೇಳಿದ:

"ಮೊದಲು ಬಾಜೀರಾಯರದು ಪೂರಾ ಹೇಳಿಬಿಡು ಅಂತೀಯಾ?"

"ಒಬ್ಬೊಬ್ಬರದೇ ಎಲ್ಲಾ ಎಲ್ಲಾ ಹೇಳಿದರೇ ಚೆಂದ. ಬಾಜೀರಾಯರಿಗೆ ಮದುವೆ ಯಾವಾಗ ಆತು?"

"ಆತು ಆಗಲೇ. ಎಷ್ಟು ದಿವಸ ಅಂತ ಒಬ್ಬರೇ ಇದ್ದಾರು ಹೇಳು ಅವರಾದರೂ? ನಾರಾಯಣರಾಯರಾದರೂ ಎಷ್ಟು ದಿವಸ ಅಂತ ಹಾಂಗೇ ಬಿಟ್ಟಾರು? ಕಡೀಗೆ ಒಂದು ಕಡೆ ಮದುವೆ ನಿಶ್ಚಯ ಆಗಿಹೋತು. ತಾರಾಬಾಯಿಯವರೇನು ಹೆಚ್ಚು ಕಲಿತವರಲ್ಲ. ಕನ್ನಡ ಓದೂದು ಬರಿಯೂದು ಬರುತ್ತಿತ್ತು. ರೂಪ ಗುಣಾ ಸ್ವಭಾವ ಮಾತ್ರ ಚೊಕ್ಕ ಬಂಗಾರ ಇದ್ದಂಗ. ಮೇರಿಯಂಥಾ ಪ್ಯಾಟೀ ಹೆಣ್ಣಿನ ರುಚಿ ನೋಡಿದ್ದ ಬಾಜೀರಾಯರು ಇವರನ್ನ ಹ್ಯಾಂಗಾದರೂ

ಒಪ್ಪಿಕೊಂಡರೋ ಅಂತ ಈಗಲೂ ನನಗೆ ಆಶ್ಚರ್ಯ ಆಗುತ್ತೈತಿ ನೋಡು ಚೆನ್ನಿ. ಅಂತೂ ಬಾಜೀರಾಯರ ಪೂರ್ವಜನ್ಮದ ಪುಣ್ಯಾ ಅಂತಲೇ ಹೇಳಬೇಕು–ತಾರಾಬಾಯಿಯುವರಂಥ ಶೀಲವಂತಿ, ಧರ್ಮಿಷ್ಠೆ, ಪತಿವ್ರತೆ ಹೆಂಡತಿಯಾಗಿ ಸಿಕ್ಕರು. ಸೊಸೆಯ ಗುಣಗಳನ್ನ ನೋಡಿ ನಾರಾಯಣರಾಯರಿಗೆ ಹಿಗ್ಗೋ ಹಿಗ್ಗು...."

× × × ×

ಮನೆಯ ಮಂಗಲಮೂರ್ತಿಯಾಗಿ ಬಂದ ಆ ಸೊಸೆಯನ್ನು ಕಂಡು ರಾಯರಿಗೆ ಪರಮಸಂತೋಷವಾಯಿತಾದರೂ ಮಗನ ದುರ್ವ್ಯಸನಗಳ ವಿಚಾರ ತಿಳಿಯುತ್ತಲೂ ಅವರು ನೆಲಕ್ಕಿಳಿದುಹೋದರು. ಹೆಂಡತಿ ಮನೆಗೆ ಬಂದ ತರುವಾಯ ಬಾಜೀರಾಯರು ರಾತ್ರೆ ತಡವಾಗಿ ಬರುವುದನ್ನು ನಿಲ್ಲಿಸಲೇಬೇಕಾಗಿ ಬಂತು. ಅವರು ಕುಡಿಯುತ್ತಿದ್ದುದನ್ನು ತಾರಾಬಾಯಿ ಕಂಡುಕೊಳ್ಳಲು ಬಹಳ ದಿನ ಹಿಡಿಯಲಿಲ್ಲ. ತನ್ನ ಗಂಡನಿಗೆ ಅಂಥ ವ್ಯಸನ ಅಂಟಿಕೊಂಡಿರ ಬಹುದೆಂದು ಕನಸುಮನಸಿನಲ್ಲಿಯೂ ಭಾವಿಸದಿದ್ದ ಆ ಸಾಧ್ವಿಗೆ ಆ ವಿಚಾರ ತಿಳಿದಾಗ ಸಹಿಸಲಾಗದಷ್ಟು ವ್ಯಥೆಯುಂಟಾಗುವುದು ಸಹಜವೇ ಆಗಿತ್ತು. ಆ ದುಶ್ಚಟವನ್ನು ಹೇಗೆ ಬಿಡಿಸುವುದೆಂದು ಯೋಚಿಸುವುದೇ ಅವಳ ನಿತ್ಯಕಾರ್ಯಕ ವಾಯಿತು. ಹೊಸದಾಗಿ ಮನೆಗೆ ಬಂದವಳಾದುದರಿಂದ ಆಗಲೇ ಅವಳು ರಂಬಾಟ ಮಾಡುವಂತೆಯೂ ಇರಲಿಲ್ಲ.

"ಮಾವನವರಿಗೆ ಇದು ಗೊತ್ತಿಲ್ಲೇನು?" ಎಂದು ನಾದಿನಿ ಸುಶೀಲಾ ಬಾಯಿಯನ್ನು ಕೇಳಿದಳು.

"ಅವರಿಗೆ ಗೊತ್ತಾಗದ ಹಾಗೆ ಮಾಡುತಾನೆ ಅಣ್ಣ. ಅವ್ವ ಇದ್ದಿದ್ದರೆ...." ಎನ್ನುತ್ತಾ ಕಣ್ಣಲ್ಲಿ ನೀರು ತಂದಳು ಸುಶೀಲಾಬಾಯಿ.

ಆ ವಿಷಯ ಒಂದೆರಡು ತಿಂಗಳುಗಳಲ್ಲಿಯೆ ನಾರಾಯಣರಾಯರಿಗೂ ಗೊತ್ತಾಗಿಹೋಯಿತು. ಎರಡು ಮೂರು ದಿನಗಳ ಕಾಲ ಅವರು ಊಟ–ನಿದ್ರೆ ಗಳನ್ನು ಮರೆತು ತಲೆಗೆ ಕೈ ಹೊತ್ತು ಕುಳಿತುಕೊಂಡಿದ್ದರು. ತಮ್ಮಂಥ ಸದ್ಬ್ರಾಹ್ಮಣರ ಮನೆತನದಲ್ಲಿ ಹುಟ್ಟಿ ಹೆಂಡ ಕುಡಿಯುವುದೆಂದರೆ ಎಂಥ ಕಲಂಕ....

ಮಗನನ್ನು ಬಯ್ದು ದಾರಿಗೆ ತರುವುದೆಂದೂ ಅವರೊಮ್ಮೆ ಯೋಚಿಸಿದರು.

ಆದರೆ, ಅದಕ್ಕೂ ಅವರಿಗೆ ಮನಸ್ಸೊಪ್ಪಲಿಲ್ಲ. ವಕೀಲನಾಗಿ, ನಗರದ ಪ್ರತಿಷ್ಠಿತ ವ್ಯಕ್ತಿಗಳಲ್ಲಿ ಸ್ಥಾನ ಪಡೆದಿರುವ ಮಗನನ್ನು ಬಯ್ಯುವುದಾದರೂ ಹೇಗೆ?

ಮತ್ತೆ ಅವರು ತಮಗೆ ತಾವೇ ಸಮಾಧಾನ ಹೇಳಿಕೊಂಡರು: ಚಹಾ ಕುಡಿಯುವುದು, ಸಿಗರೇಟು ಸೇದುವುದು, ಕ್ರಾಪು ಬಿಡುವುದು, ಸೂಟು ಹ್ಯಾಟು ಹಾಕುವುದು ಕಲಿತವರ ಲಕ್ಷಣಗಳೆನ್ನಿಸಿಕೊಂಡ ಹಾಗೇ ಸೆರೆ ಕುಡಿಯುವುದೂ ಆಗಿರಲು ಸಾಕು. ಎಲ್ಲದರಲ್ಲೂ ಇಂಗ್ಲೀಷರಂತಿರಬೇಕೆಂದು ಯತ್ನಿಸುವವರು ಅವರ ಮದ್ಯದ ಅಭ್ಯಾಸವನ್ನು ಅಂಟಿಸಿಕೊಳ್ಳುವುದು ಸಹಜವಷ್ಟೇ ಅಲ್ಲ–ಅವಶ್ಯವೂ ಆಗಿರಬಹುದು.

ಆ ವಿಚಾರವಾಗಿ ಅವರು ಮಗನ ಹತ್ತಿರ ಮಾತನಾಡಲಿಲ್ಲವಾದರೂ ಯಾರ ಹತ್ತಿರವಾದರೂ ಮಾತನಾಡದಿದ್ದರೆ ಅವರ ಎದೆಭಾರ ಇಳಿಯುವಂತಿರಲಿಲ್ಲ ವಾದುದರಿಂದ ಒಂದು ದಿನ ಭೀಮಾಚಾರಿಯನ್ನು ತಮ್ಮ ಕೊಟಡಿಗೆ ಬರಮಾಡಿ ಕೊಂಡು ಮಾತು ತೆಗೆದರು;

"ಬಾಜೀರಾವ್ ಎಷ್ಟು ದಿನದಿಂದ ಈ ಚಟಕ್ಕೆ ಬಿದ್ದಿದಾನೆ ಭೀಮಾಚಾರೀ?"

ಭೀಮಾಚಾರಿ ಒಳಗೊಳಗೇ ನಡುಗಿದನಾದರೂ ಅದನ್ನು ಹೊರಗೆ ತೋರಿಸದೆ ಬಲು ಎಚ್ಚರಿಕೆಯಿಂದ,

"ಯಾವ ಚಟ ಅಂತೀರಿ ಯಜಮಾನರೆ?" ಎಂದ.

"ನಿನಗಿನ್ನೂ ಗೊತ್ತಾಗಿಲ್ಲ ಅಂತ ನಾಟಕ ಮಾಡುತೀಯಾ ಬೋ.... ಮಗನೇ!" ನಾರಾಯಣರಾಯರು ಬೇಕೆಂತಲೇ ಕಣ್ಣು ಕೆರಳಿಸಿ ಹೇಳಿದರು: "ಮುಂಬಯಿಯಲ್ಲೇ ಕಲಿತುಕೊಂಡಿರಬೇಕು ಅವ ಇದನ್ನೆಲ್ಲಾ. ಇಷ್ಟು ದಿನ ನನಗ್ಯಾಕೆ ಹೇಳಲಿಲ್ಲ?"

"ನನಗೂ ಗೊತ್ತಿರಲಿಲ್ಲ ದೇವ್ರು. ನಿಮ್ಮ ಪಾದಸಾಕ್ಷಿಯಾಗಿ ಹೇಳ್ತೀನಿ. ನನಗೂ ಗೊತ್ತಿರಲಿಲ್ಲ," ಎನ್ನುತ್ತಾ ರಾಯರ ಕಾಲು ಹಿಡಿದುಕೊಂಡ ಭೀಮಾಚಾರಿ.

ಒಂದು ಗಳಿಗೆ ಸುಮ್ಮನಿದ್ದು ನಾರಾಯಣರಾಯರು ಶಾಂತಸ್ವರದಲ್ಲಿ ಕೇಳಿದರು:

"ಮುಂಬಯಿಯಲ್ಲಿ ಬಾಜೀರಾವ್ ಎಂಥೆಂಥವರ ದೋಸ್ತಿ ಮಾಡಿದ್ದ?"

“ಅವರಿಗೆ ಗೆಳೆಯರೆನ್ನುವವರೇ ಇರಲಿಲ್ಲರೀ. ಮನೆಗಂತೂ ಯಾರೂ ಬರ್ತ್ತಿರಲಿಲ್ಲ.”

ಮತ್ತೆ ರಾಯರು ಯಾರೆದುರಿಗೂ ಆ ವಿಷಯವೆತ್ತಲಿಲ್ಲ. “ಅವನು ಏನಾದರೂ ಮಾಡಿಕೊಳ್ಳಲೊಲ್ಲನೇಕೆ? ನನ್ನ ಕಾಲವೂ ಮುಗೀತಾ ಬಂತು. ಅವನ ಚಟದಿಂದ ಸಂಸಾರ ಹಾಳಾಗದಂತೆ ವ್ಯವಸ್ಥೆ ಮಾಡಿಬಿಟ್ಟರಾಯಿತು,” ಎಂದು ಹೇಳಿಕೊಂಡು ಅಂದಿನಿಂದ ಬಹಳ ಬಿಗುವಿನಿಂದ ವರ್ತಿಸತೊಡಗಿದರು. ಹೊಲಗಳಿಂದಲೂ ಮನೆಗಳಿಂದಲೂ ಬರುತ್ತಿದ್ದ ಉತ್ಪನ್ನವನ್ನೆಲ್ಲ ತಮ್ಮ ಹೆಸರಿನಲ್ಲೂ ಸೊಸೆಯ ಹೆಸರಿನಲ್ಲೂ ಬ್ಯಾಂಕಿನಲ್ಲಿ ಶೇಖರಿಸತೊಡಗಿದರು. ಸುಶೀಲಾಬಾಯಿಯ ಹೆಸರಿನಲ್ಲಿ ಐದು ಸಾವಿರ ರೂಪಾಯಿಗಳನ್ನು ಪ್ರತ್ಯೇಕ ವಾಗಿ ತೆಗೆದಿರಿಸಿದರು. ಹೊಲ ಮನೆಗಳನ್ನೆಲ್ಲ ಸೊಸೆಯ ಹೆಸರಿಗೆ ಬರೆಸಿಬಿಟ್ಟರೆ ಎಲ್ಲವೂ ಭದ್ರವಾಗುವುದೆಂದು ಯೋಚಿಸಿ ಆ ಸಂದರ್ಭಕ್ಕಾಗಿ ಕಾದುಕುಳಿತರು.

ಬಾಜೀರಾಯರಿಗೆ ಪ್ರತಿ ತಿಂಗಳೂ ಸಲ್ಲುತ್ತಿದ್ದ ಹಣಕ್ಕೆ ಮಾತ್ರ ಪೆಟ್ಟು ಬೀಳಲಿಲ್ಲ. ಬಾಜೀರಾಯರಿಗೇನು, ಅಷ್ಟು ಹಣ ಸಿಕ್ಕಿದರೆ ಸಾಕಾಗಿತ್ತು. ಬೇರಾವುದರ ಗೊಡವೆಗೂ ಅವರು ಹೋಗುತ್ತಿರಲಿಲ್ಲ. ತನ್ನ ದುರಭ್ಯಾಸದ ಸಮಾಚಾರ ತಂದೆಗೂ ಗೊತ್ತಾದುದು ಅವರಿಗೆ ತಿಳಿಯುತ್ತಲೂ ಅವರು ಇನ್ನೊಂದು ಹೆಜ್ಜೆ ಮುಂದಿರಿಸಿ ಬಾಟಲುಗಳನ್ನು ಮನೆಗೂ ತೆಗೆದುಕೊಂಡು ಬರುವುದಕ್ಕಾರಂಭಿಸಿದರು.

ಇಷ್ಟು ದಿನ ಮೌನವಾಗಿದ್ದ ನಾರಾಯಣರಾಯರಿಗೆ ಈಗ ಮಾತ್ರ ಸುಮ್ಮನಿರಲಾಗಲಿಲ್ಲ. ಒಂದು ದಿನ ಮಗನಿಗೂ ಅವರಿಗೂ ಚಕಮಕಿ ನಡೆದು ದೊಡ್ಡ ರಂಪವೇ ಆಗಿಹೋಯಿತು.

“ಹೊರಗಡೆ ನೀನು ಏನು ಹಾಳಾದರೂ ಚಿಂತೆಯಿಲ್ಲ. ಮನೆಯೊಳಗೆ ಮಾತ್ರ ಹೊಲಗೇರಿ ಮಾಡಬೇಡ,” ಎಂದು ನಾರಾಯಣರಾಯರು ಹೇಳಿದರೆ,

“ನಿಮಗೆ ಬೇಡವಾದರೆ ನಾನು ಈ ಮನೆಯನ್ನೇ ಬಿಟ್ಟು ಬೇರೆ ಕಡೆ ಹೋಗಿ ಇದ್ದುಬಿಡುತೀನಿ,” ಎಂದು ಬಾಜೀರಾಯರು ಹೆದರಿಸಿದರು.

ಇದ್ದೊಬ್ಬ ಮಗನನ್ನು ಮನೆ ಬಿಡಿಸಲು ರಾಯರಿಗೆ ಮನಸೊಪ್ಪುವು ದಾದರೂ ಹೇಗೆ ಸಾಧ್ಯ?

“ಹಾಳಾಗಿ ಹೋಗಲಿ. ಅವನು ಏನಾದರೂ ಮಾಡಿಕೊಳ್ಳಲಿ.

ನನ್ನಷ್ಟಕ್ಕೆ ನಾಸಿದ್ದುಬಿಟ್ಟರಾಯಿತು ರಾಮಾ ಕೃಷ್ಣಾ ಅಂಬುಕೊಂಡು," ಎಂದು ತಮ್ಮನ್ನು ತಾವೇ ಸಂತೈಸಿಕೊಂಡು ನಾರಾಯಣರಾಯರು ಶಾಂತರಾದರು.

ಹಾಗೇ ವರ್ಷಗಳು ಉರುಳಿದುವು. ಬಾಜೀರಾಯರ ಗೆಳೆಯರ ಬಳಗ ಬೆಳೆಯುತ್ತಿತ್ತು. ಆಸ್ತಿಯ ಉಸ್ತುವಾರಿ ಮಾತ್ರ ನಾರಾಯಣರಾಯರ ಕೈಯಲ್ಲೇ ಇತ್ತು. ವರ್ಷಕ್ಕೊಂಪರಂತೆ ಅವರ 'ಚಾಳ'ಗಳು ಏಳುತ್ತಿದ್ದುವು. ತಿಂಗಳಿಗೆ ಸಾವಿರಾರು ರೂಪಾಯಿ ಬಾಡಿಗೆ ಬರತೊಡಗಿತ್ತು. ಇಂಥ ಸಿರಿವಂತರು ವಕೀಲಿ ವ್ಯವಸಾಯ ಮಾಡುವ ಅಗತ್ಯವಾದರೂ ಏನು? ಆದರೂ ವರ್ಷದಲ್ಲಿ ಒಂದೆರಡು ಕೇಸುಗಳು ಬಾಜೀರಾಯರ ಬಳಿ ಬರುತ್ತಿದ್ದುವು. ಸಾಮಾನ್ಯವಾಗಿ ಅವುಗಳೆಲ್ಲಾ ಅವರ ರೈತರವೇ. ತಮ್ಮ ರೈತರೆಂಬ ಅಭಿಮಾನಕ್ಕೊಳಗಾಗಿ ಬಾಜೀರಾಯರೂ ಆ ಕೇಸುಗಳನ್ನು ತೆಗೆದುಕೊಳ್ಳುತ್ತಿದ್ದರು. ಅವರಿಂದ ಫೀ ಮಾತ್ರ ಸ್ವೀಕರಿಸು ತ್ತಿರಲಿಲ್ಲ. ಈ ರೈತರನ್ನು ಹೊರತುಪಡಿಸಿದರೆ ಅವರ ಹತ್ತಿರ ಬೇರಾವ ಕಕ್ಷಿಗಾರರೂ ಸುಳಿಯುತ್ತಿರಲಿಲ್ಲ. ಅಂತೆಯೇ ಬಾಜೀರಾಯರು ಕೋರ್ಟಿನ ಅಂಗಳದಲ್ಲಿ ಅಡಿಯಿಡುವ ಪ್ರಸಂಗಗಳು ಬಹಳ ವಿರಳವಾಗಿದ್ದುವು. ಮಧ್ಯಾಹ್ನದ ಸಮಯದಲ್ಲಿ ಕೂಡಾ ಅವರು ತಮ್ಮಂಥವರೇ ಆದ 'ಸಂಡೇ ಪ್ಲೀಡರು'ಗಳದೊಂದು ಗುಂಪು ಕಟ್ಟಿಕೊಂಡು ಕ್ಲಬ್ಬಿನಲ್ಲಿ ಸೇರಿಬಿಡುತ್ತಿದ್ದರು. ಇಸ್ಪೀಟು ಆಡುತ್ತಾ ಕುಳಿತರೆಂದರೆ ರಾತ್ರಿ ಒಂಭತ್ತರವರೆಗೂ ಮೇಲಕ್ಕೇಳುವಂತಿರಲಿಲ್ಲ.

ಅವರ ಹೆಂಡತಿ ತಾರಾಬಾಯಿಯವರಿಗಾದರೂ ಯಾವ ಕೊರತೆಯೂ ಇರಲಿಲ್ಲ. ಹಗಲೆಲ್ಲ ಪೂಜೆ ಪುನಸ್ಕಾರ, ಮನೆಗೆಲಸ, ಊಟ ಉಡಿಗೆ; ಮಾವನವ ರೆದುರಿಗೆ ಪುರಾಣ ಪುಣ್ಯಕಥೆಗಳ ವಾಚನ. ಸಾಯಂಕಾಲ ಒಂದರ್ಧ ಗಂಟೆ ಮಾವನವರು ಮತ್ತು ಸುಶೀಲೆಯೊಡನೆ ಊರ ಹೊರಗೆ ಹೋಗಿ ಹವಾ ತಿಂದು ಬರುವುದು. ಅನಂತರ ರಾತ್ರಿಯ ಅಡುಗೆ, ಊಟ, ನಿದ್ದೆ. ಬಾಜೀರಾಯರು ಕುಡುಕರಾಗಿದ್ದರಾದರೂ ರಾತ್ರಿಯ ಸಮಯವನ್ನು ಮಾತ್ರ ತಮ್ಮ ಮನೆ ಯಲ್ಲಿಯೇ ಕಳೆಯಲು ಎಂದೂ ತಪ್ಪುತ್ತಿರಲಿಲ್ಲ. ಗಂಡ ಹೆಂಡಿರು ಪ್ರೀತಿ ಯಿಂದಲೇ ಸಂಸಾರ ಸಾಗಿಸಿದ್ದರು. ಅರಿವು ತಪ್ಪಿಹೋಗುವಷ್ಟುಮಟ್ಟಿಗೆ ಕುಡಿಯುತ್ತಲೂ ಇರಲಿಲ್ಲ ಬಾಜೀರಾಯರು. ಆ ದುರ್ವಾಸನೆಯಿಂದಾಗಿ ತಾರಾಬಾಯಿಗೆ ವಾಂತಿಯಾಗುವ ಹಾಗಾಗುತ್ತಿದ್ದಿತಾದರೂ ಗಂಡನ ಬಗೆಗಿದ್ದ ಭಕ್ತಿಯಿಂದಾಗಿ ಅದನ್ನೂ ಆಕೆ ಸಹಿಸಿಕೊಂಡಳು.

"ಸಹಿಸಿಕೋಬೇಕು ಅತ್ತಿಗೇ. ಸ ಹಿ ಸಿ ಕೋ ೀ ಬೇ ೀ ಕು," ಎಂದು ಸುಶೀಲೆಯೂ ಆಗಾಗ ಹೇಳುತ್ತಿದ್ದಳು.

"ಸಹಿಸಿಕೊಳ್ಳಲೇಬೇಕಲ್ಲ ಸುಶೀಲಾ. ಅವರು ನನಗೆ ದೇವರಿದ್ದಂತೆ. ದೇವರಲ್ಲಿಯ ದೋಷಗಳನ್ನು ಎಣಿಸಲು ನನಗೇನ್ ಅಧಿಕಾರ? ಅದೂ ಅಲ್ಲದೆ ಅವರಿವರು ಬೇಡಂದರೆ ಹೋಗುವ ಚಟ ಅಲ್ಲ ಇದು. ಸರಿ. ಹೇಳಿದರಾದರೂ ಏನು ಉಪಯೋಗ? ನನಗೆ ಪೂಜೆ ಮಾಡದಿದ್ದರೆ ಮನಸಿಗೆ ಸಮಾಧಾನ ಇರುವದಿಲ್ಲ. ಹಾಗೇ ಅವರಿಗೆ ಕುಡಿತ ಇಲ್ಲದಿದ್ದರೆ ಸಮಾಧಾನ ಆಗುವದಿಲ್ಲ ಅಂದುಕೊಳ್ಳೋಣ. ಅವರ ಚಟದಿಂದ ನಮಗೆ ಹಾನಿಯೂ ಆಗಿಲ್ಲವಲ್ಲ. ಅವರೇನು ಮನೆಯನ್ನೇ ಆಗಲಿ ಆಸ್ತಿಯನ್ನೇ ಆಗಲಿ ಹಣವನ್ನೇ ಆಗಲಿ ಅದಕ್ಕಾಗಿ ಹಾಳುಮಾಡಲಿಲ್ಲ. ಅಂದ ಮೇಲೆ ನಾನೇಕೆ ಸಿಟ್ಟಾಗಬೇಕವ್ವ?"

"ಹೌದು ಅತ್ತಿಗೆ. ನೀನನ್ನುವದೂ ನಿಜ."

"ಕುಡೀತಾರೆ ಅಂತ ಅವರೆಂದೂ ಬಾಯಿಗೆ ಬಂದ ಹಾಗೆ ಯಾರಿಗೂ ಮಾತಾಡಿಲ್ಲ. ಮಾವನವರನ್ನು ಮರ್ಯಾದೆಯಿಂದಲೇ ನೋಡುತಾರೆ. ನಮ್ಮೆಲ್ಲರ ಸಂಗಡಲೂ ಪ್ರೀತಿಯಿಂದಲೇ ಇದ್ದಾರೆ. ಅಲ್ಲವೇನೇ?"

"ಹೌದು ಅತ್ತಿಗೇ. ನನ್ನ ಮೇಲೂ ಬಹಳ ಪ್ರೇಮ ಅಣ್ಣಂದು."

ಇಸ್ಪೇಟಿನ ಆಟದಲ್ಲಿ ತಮ್ಮ ಕೈಚಳಕವನ್ನು ಚೆನ್ನಾಗಿ ಪ್ರದರ್ಶಿಸಿ ಚೆನ್ನಾಗಿ ಸಂಪಾದಿಸಿದ ದಿನ ಬಾಜೀರಾಯರಿಗೆ ತಮ್ಮ ತಂದೆ ತಂಗಿ ಮತ್ತು ಹೆಂಡತಿಯ ಬಗೆಗಿದ್ದ ಮಮತೆ ಹೊರಚಿಮ್ಮುತ್ತಿತ್ತು. ಅಂಥ ದಿನಗಳಲ್ಲೆಲ್ಲ ಅವರು ತಂಗಿಗೂ ಹೆಂಡತಿಗೂ ಒಳ್ಳೆಯ ಮಾದರಿಯ ಬಟ್ಟೆ ಬರೆಗಳನ್ನು ಕೊಂಡು ತರುವರು. ತಂದೆಯವರಿಗಾಗಿ ರಾಮದೇವರ ಇಲ್ಲವೆ ನರಸಿಂಹದೇವರ ಬೆಳ್ಳಿಯ ಮೂರ್ತಿಗಳನ್ನು ತರುವರು. ಅವುಗಳನ್ನು ಕಂಡು ಹರ್ಷಿತರಾದ ನಾರಾಯಣರಾಯರು ಸೊಸೆಯನ್ನು ಕುರಿತು ಹೇಳುವರು:

"ಬಾಜೀರಾವ್ ಕೆಟ್ಟವನಲ್ಲ ತಾರಾ. ಅದೊಂದು ದುಶ್ಚಟ ಬಿಟ್ಟರೆ ಅವನಲ್ಲಿ ಇನ್ನಾವ ದೋಷವೂ ಇಲ್ಲ. ನಮಗಾದರೂ ಬೇರೆ ಯಾರಿದ್ದಾರೆ? ಸುಶೀಲಳ ಮದುವೆಯಾಯಿತೆಂದರೆ ಅವಳದೂ ಈ ಮನೆಯ ಋಣ ತೀರುವದು. ನಾನೂ ಹೋದ ಮೇಲೆ ಅವನೇ ಈ ಎಲ್ಲ ಆಸ್ತಿಯ ಮಾಲಕ. ಆಗ ಆತ

ಎಲ್ಲಾ ಹಾಳು ಮಾಡಬಾರದೆಂದೇ ನಾನು ಅವನನ್ನ ಹತ್ತಿಕ್ಕಿ ಇಟ್ಟಿದೀನಿ. ನನ್ನ ಪಶ್ಚಾತ್ ನೀನೂ ಹಾಗೇ ಮಾಡಬೇಕು."

ಅವರು ಹಾಗೆ ಮಾತನಾಡಿದಾಗಲೆಲ್ಲ ಅಳುವುಕ್ಕಿ ಬರುವುದು ತಾರಾಬಾಯಿಗೆ. ನಾರಾಯಣರಾಯರಿಗೂ ತಮ್ಮ ಹೆಂಡತಿಯ ನೆನಪು ಬಂದು ಕಣ್ಣುಗಳಲ್ಲಿ ನೀರೂರುವುದು.

"ಅವಳು ಇದ್ದಿದ್ದರೆ....ಅವಳು ಇದ್ದಿದ್ದರೆ...." ಎಂದು ರಾಯರು ಮತ್ತೆ ಮತ್ತೆ ಹೇಳಿಕೊಳ್ಳುವರು.

ದಿನಗಳ ಹಿಂದೆ ದಿನ ಬಂದು ಹೋದವು.

ಯುದ್ಧ ಎಂದೋ ಮುಗಿದುಹೋಗಿತ್ತು.

ನಮ್ಮ ದೇಶ ಸ್ವತಂತ್ರವಾದುದೂ ಆಯಿತು. ಅನಂತರ ಒಂದರ ಹಿಂದೊಂದರಂತೆ ಸುಧಾರಣೆಯ ಕಾಯದೆಗಳು ಜಾರಿಗೆ ಬರತೊಡಗಿದುವು. ಸಾಲದ ಕಾಯಿದೆ, ಹೊಲ ಸಾಗುವಳಿ ಕಾಯಿದೆ, ದ್ವಿಪತ್ನೀ ವಿಷಯದ ಕಾಯಿದೆ, ಪಾನ ಪ್ರತಿಬಂಧ ಕಾಯಿದೆ....ಒಂದೇ ಎರಡೇ, ನೂರಾರು ಸಾವಿರಾರು ಕಾಯಿದೆಗಳು. ಮೊದಮೊದಲು ಜನರಿಗೆ ಈ ಕಾಯಿದೆಗಳ ಅರ್ಥವೂ ತಿಳಿಯದಂತಾಗಿ ಎಲ್ಲರೂ ದಿಗಿಲುಗೊಂಡರು. ಅರ್ಥ ತಿಳಿದುಕೊಳ್ಳಬೇಕಾದರೆ ಕಾಯಿದೆಯ ಪಂಡಿತರಾದ ವಕೀಲರುಗಳ ಹತ್ತಿರ ಹೋಗಲೇಬೇಕಲ್ಲ. ನಗರದ ವಕೀಲಿ ವ್ಯವಸಾಯದ ಗುತ್ತಿಗೆ ಹಿಡಿದು ಕುಳಿತಿದ್ದ ದೊಡ್ಡ ದೊಡ್ಡ ವಕೀಲರುಗಳ ಹತ್ತಿರ ಹೋಗುವ ಯೋಗ್ಯತೆ ಬಡಜನರಿಗೆಲ್ಲಿಯದು? ಅಂತೆಯೇ, 'ಸಂಡೇ ಪ್ಲೀಡರು'ಗಳೆನಿಸಿಕೊಂಡು ಕ್ಲಬ್ಬಿನಲ್ಲಿ ಕಾಲಹರಣ ಮಾಡುತ್ತಿದ್ದ ತರುಣ ವಕೀಲರ ಹತ್ತಿರ ಜನ ಬರುವುದಕ್ಕಾರಂಭವಾಯಿತು.

ಅಕ್ಕೂರಿನ ದೇಶಪಾಂಡೆ ಮನೆತನವೆಂದರೆ ಸುತ್ತಲಿನ ಐವತ್ತು ಹಳ್ಳಿಗಳಲ್ಲೆಲ್ಲ ಖ್ಯಾತಿ ಗಳಿಸಿದ್ದಂಥದು. ಆ ಹಳ್ಳಿಗಳ ಜನರೆಲ್ಲರೂ ಸಹಜವಾಗಿಯೇ ಬಾಜೀರಾವ್ ದೇಶಪಾಂಡೆಯವರನ್ನೇ ಹುಡುಕಿಕೊಂಡು ಬರತೊಡಗಿದರು. ಅವರಿಗಾಗಿ ಬಾಜೀರಾಯರು ಮತ್ತೊಂದು ಬಾರಿ ಕಾನೂನಿನ ಪುಸ್ತಕಗಳನ್ನು ಓದಿಕೊಳ್ಳಬೇಕಾಯಿತು. ಅವರ ಶ್ರಮಕ್ಕೆ ಪ್ರತಿಫಲವೆಂದು ನೂರಿನ್ನೂರು ರೂಪಾಯಿಗಳಷ್ಟು ಹಣವೂ ಗಿಟ್ಟತೊಡಗಿತು. ಈ ಕೇಸುಗಳ ಕಾಗದ

ಪತ್ರಗಳನ್ನಿಡಲು ಒಬ್ಬ ಕಾರಕೂನನೂ ಅವಶ್ಯಕವೆಂಬುದರ ಅರಿವು ಅವರಿಗಾಯಿತು.

× × × ×

"ಸಂಡೇ ಪ್ಲೀಡರುಗಳ ಕಾರಕೂನನೆಂದು ಅಷ್ಟೊತ್ತಿಗಾಗಲೇ ನನಗೆ ಹೆಸರು ಬಂದಿತ್ತು. ಅದುವರೆಗೆ ಐದು ಮಂದಿ ವಕೀಲರ ಕಾರಕೂನನಾಗಿದ್ದ ನಾನೇ ಈಗ ಬಾಜೀರಾಯರಿಗೂ ಕಾರಕೂನನಾಗಬೇಕಾಯ್ತು," ಎಂದ ಬಸಲಿಂಗ.

"ಆಗಲೇ ಅವರ ಗುರುತಾದದ್ದೇನು ನಿನಗೆ?" ಎಂದಳು ಚೆನ್ನಿ.

"ಊಹೂಂ. ಅದಕ್ಕು ಮೊದಲೇ ಗುರುತೇನೋ ಇತ್ತು. ಆದರೂ ಅಷ್ಟು ಹೆಚ್ಚಿಗಿರಲಿಲ್ಲ. ನಾನು ಅವರಿಗೂ ಕಾರಕೂನನಾದ ಬಳಿಕ, ಅವರ ಕಚೇರಿಯೊಳಗೂ ನನ್ನ ಡೆಸ್ಕು ಹೂಡಿದ ಬಳಿಕ ಅವರೂ ನಾನೂ ಹತ್ತರ ಬಂದದ್ದು. ತಾರಾಬಾಯಿಯವರ ಗುರುತಾದದ್ದು ಆಗಲೇ. ಅಂದಿನಿಂದಲೂ ನನ್ನ ಸ್ವಂತ ಮಗನ ಹಾಗೆ ನೋಡಿಕೊಂಡು ಬಂದಾರೆ ಆ ತಾಯಿ. ನಾರಾಯಣ ರಾಯರೂ ಹಂಗೇ. ಬಹಳ ಉತ್ತಮರು. ಒಂದಿನವಾದರೂ ನನ್ನ ಯಾತಕ್ಕೂ ಗದರಿಸಿದವರಲ್ಲ.

"ಇರಲಿ. ಮುಂದಿನದು ಕೇಳು...."

× × × ×

ಕಾಂಗ್ರೆಸ್ ಸರಕಾರ ಜಾರಿಗೆ ತಂದ ಹೊಲ ಸಾಗುವಳಿ ಕಾನೂನಿನಿಂದ ದೊಡ್ಡ ಜಮಿನ್ದಾರರಾದ ನಾರಾಯಣರಾಯರಿಗೆ ಯಾವ ತೊಂದರೆಯೂ ಉಂಟಾಗಲಿಲ್ಲ. ಅವರ ರೈತರೆಲ್ಲರೂ ಒಳ್ಳೆಯವರಾಗಿದ್ದುದೇ ಅದಕ್ಕೆ ಮುಖ್ಯ ಕಾರಣ. ನಾರಾಯಣರಾಯರೂ ಒಳ್ಳೆಯವರೇ ಆಗಿದ್ದುದೂ ಒಂದು ಕಾರಣವೇ. ಭೂಮಿಯ ಉತ್ಪಾದನೆಯಲ್ಲಿ ಮೂರರಲ್ಲೊಂದು ಪಾಲನ್ನು ಮಾತ್ರ ರೈತರು ಜಮಿನ್ದಾರರಿಗೆ ಕೊಡಬೇಕೆಂದು ಕಾನೂನು ವಿಧಿಸಿತಾದರೂ ಅದರಂತೆ ನಡೆಯಲು ಯತ್ನಿಸಿದವರು ಬಹಳ ವಿರಳ. ನೂರಾರು ವರ್ಷಗಳಿಂದ ಯಾವ ಕರಾರುಗಳ ಪ್ರಕಾರ ನಡೆದುಬಂದಿತ್ತೋ ಹಾಗೆಯೇ ಈಗಲೂ ನಡೆಯುತೊಡಗಿತು. ಅಂತೆಯೆ, ಹೊಲ ಸಾಗುವಳಿ ಕಾನೂನಿನ ಬಗೆಗೆ

ನಾರಾಯಣರಾಯರಾಗಲಿ ಬಾಜೀರಾಯರಾಗಲಿ ಚಿಂತಿಸುವ ಪ್ರಸಂಗವೇ ಬರಲಿಲ್ಲ.

ಮದ್ಯಪಾನ ಪ್ರತಿಬಂಧಕ ಕಾನೂನು ಮಾತ್ರ ನಾರಾಯಣರಾಯರಿಗೂ ತಾರಾಬಾಯಿಯವರಿಗೂ ಸಂತೋಷಕ್ಕೆ ಕಾರಣವಾದರೆ ಬಾಜೀರಾಯರಿಗೆ ವೈರಿಯಾಗಿ ಕಾಣಿಸದಿರಲಿಲ್ಲ. ಅದು ಸಹಜವೂ ಆಗಿತ್ತು. ಭಾರತವು ಸ್ವತಂತ್ರ ವಾಯಿತೆಂದು ಹೆಮ್ಮೆಯಿಂದ ಬೀಗಿದ್ದ ಬಾಜೀರಾಯರು ಸ್ವಾತಂತ್ರ್ಯದ ಹಿಂದೆ ಹಿಂದೆಯೇ ಬಂದ ಈ ಕಠೋರ ಕಟ್ಟಳೆಯನ್ನು ಕಂಡು ಕೆರಳಿದರು. ಕಾಂಗ್ರೆಸ್ ಸರಕಾರವನ್ನು ಮುರಾರಜಿಯವರನ್ನೂ ಬಾಯಿಗೆ ಬಂದ ಹಾಗೆ ಹಳಿದರು.

“ಕುಡೀಬಾರದಂತೆ! ಈ ಪಂಡಿತರು ಕಾಯದೆ ಮಾಡಿದರು. ನಮ್ಮ ದುಡ್ಡು ಖರ್ಚುಮಾಡಿ ನಾವು ಕುಡೀತೀವಿ. ನಾವು ಹಾಳಾಗಿ ಹೋಗುತೀವಿ. ನಮಗೆ ಬೇಡ ಅನ್ನಲಿಕ್ಕೆ ಇವರ್‍ಯಾರು? ನಾವು ಕುಡಿದರೆ ಇವರದೇನು ಗಂಟು ಹೋಗ್ತದೆ? ಇಂಗ್ಲಂಡದ ರಾಜರಾಣಿಯರು ಕುಡೀತಾರೆ. ಅಮೇರಿಕದ ಅಧ್ಯಕ್ಷರು ಕುಡೀತಾರೆ, ಸ್ಟಾಲಿನ್ ಕುಡೀತಾರೆ, ನೆಹರೂ ಕುಡೀತಾರೆ. ನಾವೂ ಕುಡೀತೀವಿ, ಗಟಾರದಲ್ಲಿ ಬಿದ್ದರೂ ಚಿಂತೆಯಿಲ್ಲಾ, ಕುಡೀತೀವಿ. ಕುಡಿದೇ ಕುಡೀತೀವಿ,” ಎಂದು ಭಾಷಣಗಳನ್ನು ಬಿಗಿದರು – ತಮ್ಮ ಬಾಟಲ್‌ಗ್ಯಾಂಗು ಕೂಡಿದಾಗ.

“ಹೌದ್‌ೌದು. ಕುಡಿದೇ ಕುಡೀತೀವಿ. ಈ ಟೊಪ್ಪಿಗೇ ಸರಕಾರ ಹ್ಯಾಗೆ ರಾಜ್ಯ ಆಳ್ತದೆ ನೋಡುತೀವಿ!” ಎಂದು ಕೂಗಿಕೊಂಡಿತು ಗುಂಪು.

ಇಂಥ ಪ್ರತಿಷ್ಠಿತರೂ ಸಿರಿವಂತರೂ ಸುಶಿಕ್ಷಿತರೂ ಕುಡುಕರಾಗಿರುತ್ತ ಕುಡಿತ ನಿಲ್ಲುವುದಾದರೂ ಹೇಗೆ? ಕುಡಿತವನ್ನು ಪ್ರತಿಬಂಧಿಸುವ ಪೋಲೀಸ್ ಪಡೆ ಬಲಪಡುತ್ತ ಹೋದ ಹಾಗೆ ಮದ್ಯದ ಬೆಲೆಯೂ ಹೆಚ್ಚುತ್ತ ಹೋಯಿತು. ಸೆರೆಯಂಗಡಿಗಳು ಮುಚ್ಚಿದೊಡನೆ ಕಳ್ಳಭಟ್ಟಿಗಳ ಕಾಯಕಕ್ಕಾರಂಭವಾಯಿತು. ಆದರೆ, ‘ಸರದಾರ್‍ಸ್ ಕ್ಲಬ್’ನ ಸಿರಿವಂತ ಸರದಾರರು ಇಂಥ ಸೆರೆಯನ್ನೆಂದೂ ಮುಟ್ಟದವರಲ್ಲ. ಅವರ ಸ್ಥಾನಮಾನಗಳಿಗೆ ತಕ್ಕುದಾಗಿದ್ದುದೆಂದರೆ ವಿದೇಶೀಯ ಮದ್ಯವೇ. ಸರಕಾರಕ್ಕೆ ತಿಳಿಯದಂತೆ ಅದನ್ನು ದೊರಕಿಸುವ ಪ್ರಯತ್ನಗಳಿಗೂ ಆರಂಭವಾಯಿತು. ಅದು ಬರಬೇಕಾದುದು ಗೋವೆಯಿಂದ. ಓರೆಕೋರೆ ಜಿಲ್ಲೆಗೂ ಗೋವೆಗೂ ಅಷ್ಟು ದೂರವೂ ಇಲ್ಲವಲ್ಲ. ಸರಿ. ಗೋವಾದಲ್ಲಿ ಆರು

ರೂಪಾಯಿಗಳಿಗೆ ದೊರಕುವ 'ಮುಶೀರಾ' ಬಾಟಲು ಗಡಿದಾಟಿ ನಮ್ಮ ಸೀಮೆಗೆ ಬಂದೊಡನೆಯೆ ಅದರ ಬೆಲೆ ಹನ್ನೊಂದು ರೂಪಾಯಿಗಳಿಗೇರುತ್ತಿತ್ತು. ಅಲ್ಲಿನಿಂದ ಇಲ್ಲಿಗೆ ಬಂದು ಮುಟ್ಟಿದಾಗ ಅದೇ ಬಾಟಲಿಗೇ ಇಪ್ಪತ್ತು ರೂಪಾಯಿಯಾಗುತ್ತಿತ್ತು. ಗೋವಾ ಗಡಿಯ ಹತ್ತಿರ ಹನ್ನೊಂದು ರೂಪಾಯಿ ತೆತ್ತು ಆ ಬಾಟಲು ಖರೀದಿ ಮಾಡಿದವನಿಗೆ ಅಲ್ಪ ಶ್ರಮದಲ್ಲಿಯೆ ಒಂಭತ್ತು ರೂಪಾಯಿಗಳ ಲಾಭ ಬರತೊಡಗಿದಾಗ ಆತ ಬೇರೆ ಉದ್ಯೋಗ ವ್ಯವಹಾರಗಳನ್ನಾದರೂ ಏಕೆ ಮಾಡಿಯಾನು? ಈ ವ್ಯವಹಾರದಲ್ಲಿ ಹಾನಿಯಂತೂ ಇಲ್ಲವೇ ಇಲ್ಲ. ಬಾಜೀರಾಯರಂಥ ಸಾವಿರಾರು ಜನ ಸಿರಿವಂತರು ನಗರದಲ್ಲಿರುವಾಗ ಗಿರಾಕಿಗಳ ಕೊರತೆಯೂ ಆಗುವಂತಿಲ್ಲ. ಕೊಂಡು ತಂದ ಮಾಲು ಮಾರಾಟವಾಗದೆ ಉಳಿದೀತೆಂಬ ಭಯವೂ ಇಲ್ಲ. ಹೀಗಿರುವಾಗ, ಅಲ್ಪ ಶ್ರಮದಿಂದ ಸುಲಭವಾಗಿ ಹಣ ಗಳಿಸಬಯಸುವವರಿಗೆಲ್ಲ ಇದೊಂದು ವರದಾನವಾಗಿ ಪರಿಣಮಿಸಿದುದರಲ್ಲಿ ಆಶ್ಚರ್ಯವಿಲ್ಲ.

ಬಾಡಿಗೆಯಿಂದ ಮೋಟರುಗಳನ್ನು ನಡೆಸುತ್ತಿದ್ದವರೆಲ್ಲರೂ ಗೋವಾದ ಗಡಿಗೆ ನುಗ್ಗಿದರು. ಅರಣ್ಯದಿಂದ ಕಟ್ಟಿಗೆಯನ್ನು ಸಾಗಿಸಿ ತರುವ ವ್ಯವಹಾರದಲ್ಲಿ ತೊಡಗಿದ್ದ ಕಂಟ್ರಾಕ್ಟರುಗಳು ಮಶೀರಾ ಬಾಟಲು ತುಂಬಿದ ಪೆಟ್ಟಿಗೆಗಳನ್ನು ಟ್ರಕ್ಕುಗಳಲ್ಲಿ ಅಡಗಿಸಿ ಅವುಗಳ ಮೇಲೆ ಕಟ್ಟಿಗೆ ಹೇರಿದರು. ದನಗಳ ಮೇವು ತರುವ ಎತ್ತಿನ ಬಂಡಿಗಳವರೂ ಮೇವಿನ ಹೊರೆಯ ಬುಡದಲ್ಲಿ ಮಶೀರಾ ಪೆಟ್ಟಿಗೆ ಮುಡಗಿಸಿದರು. ಸರಕಾರೀ ಜೀಪ್‌ಗಾಡಿಗಳಲ್ಲಿ ತಿರುಗುತ್ತಿದ್ದ ಒಕ್ಕಲುತನ, ಅರಣ್ಯ ಹಾಗು ಆರೋಗ್ಯ ಶಾಖೆಗಳ ನೌಕರರೂ ತಮ್ಮ ತಮ್ಮ ಸಾಮಾನುಗಳ ನಡುವೆ ಬಾಟಲಿಗಳನ್ನು ಮುಚ್ಚಿಟ್ಟು ತಂದರು. ಪೋಲೀಸರೂ ಹಿಂದೆ ಬೀಳಲಿಲ್ಲ. ತಮ್ಮ ಖಾಕಿ ಬಗಲುಚೀಲಗಳಲ್ಲಿ ಹತ್ತಿಪ್ಪತ್ತು ಬಾಟಲು ಹೊತ್ತು ತಂದರು.

ಬಾಜೀರಾಯರಂಥ ಹಣವಂತರು, ನೂರಾರು ಸೀಸೆಗಳನ್ನು ಕೊಂಡು ನಾಳಿನ ಉಪಯೋಗಕ್ಕೆಂದು ಸಂಗ್ರಹಿಸಿಟ್ಟುಕೊಂಡರು. ನಗರಕ್ಕೆ ಬರುತ್ತಿದ್ದ ಮಶೀರಾ ಇಲ್ಲಿಯ ಗ್ರಾಹಕರಿಗೆ ಸಾಕಾಗಿ ಬೇರೆ ನಗರಗಳಿಗೆ ರಫ್ತಾಗತೊಡಗಿತು. ಅದಕ್ಕೆ ಸರಿಯಾಗಿ ಪರಸ್ಥಳಗಳಲ್ಲಿ ಇನ್ನೂ ಹೆಚ್ಚಿನ ಬೆಲೆ ಬರತೊಡಗಿತು. ನೂರಾರು ಜನರು ಈ ಲಾಭದಾಯಕ ಉದ್ಯೋಗಕ್ಕೆ ತೊಡಗುತ್ತಲೂ

ಸಹಜವಾಗಿಯೇ ಸ್ಪರ್ಧೆ ಬೆಳೆದು, ವಿರಸವುತ್ಪನ್ನವಾಯಿತು. ತಮ್ಮ ಸಹೋದ್ಯೋಗಿಗಳ ಕುರಿತು ಅನೇಕರು ಪೋಲೀಸಿನವರಿಗೆ ದೂರು ಕೊಟ್ಟುದುದರಿಂದಾಗಿ ಹಲವರು ಸಿಕ್ಕಿಬಿದ್ದರು.

ಹಾಗೆ ಪೋಲೀಸರ ಕೈಗೆ ಸಿಕ್ಕಿಬಿದ್ದವರು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಬಾಜೀರಾಯರಂಥ ವಕೀಲರ ಮೊರೆ ಹೊಕ್ಕು ನ್ಯಾಯಾಲಯದ ಕಟ್ಟೆ ಏರಿ ಹತ್ತಿಪ್ಪತ್ತು ರೂಪಾಯಿ ದಂಡ ತೆತ್ತು ಪಾರಾಗಿ ಬಂದರು. ಅದೇ ದಿನವೇ ಗೋವಾ ಗಡಿಗೆ ಧಾವಿಸಿ ಹತ್ತು ಹದಿನೈದು ಸೀಸೆ ಕೊಂಡು ತಂದು ಮಾರಾಟ ಮಾಡಿ, ದಂಡದ ನಷ್ಟ ತುಂಬಿಕೊಂಡರು. ಆದರೆ, ಒಮ್ಮೆ ಪೋಲೀಸರ ಕೈಗೆ ಸಿಕ್ಕಿಬಿದ್ದ ಈ ಜನರು ಈ ಬಾರಿ ಪೋಲೀಸರನ್ನು ಮರೆಯದೆ, ತಮಗೆ ಬಂದ ಲಾಭದ ಹಣದಲ್ಲಿ ಅವರಿಗೂ ಅಷ್ಟಿಷ್ಟು ಸಲ್ಲಿಸುವ ಪದ್ಧತಿಗಾರಂಭಿಸಿದರು. ಪೋಲೀಸ್ ಅಧಿಕಾರಿಗಳೂ ಮನುಷ್ಯರೇ ಅಲ್ಲವೇ? ಮಾನವಸಹಜವಾದ ದೌರ್ಬಲ್ಯಗಳೂ ದುರಭ್ಯಾಸಗಳೂ ಅವರಿಗೂ ಅಂಟಿಕೊಳ್ಳುವುದು ಸಹಜವಲ್ಲವೆ? ಅವರಲ್ಲಿಯೂ ಅನೇಕ ಜನ ಕುಡುಕರಿದ್ದರು. ಮಶೀರಾ ಮಾರಾಟಗಾರರಿಂದ ಬಿಟ್ಟಿಯಾಗಿ ಬಾಟಲುಗಳು ಸಿಕ್ಕಿದರೆ ಅವರಾದರೂ ಯಾಕೆ ಬಿಟ್ಟಾರು? ಮುರಾರಜಿಯವರಿಗೆ ಗೊತ್ತಾಗದಂತೆ ಕದ್ದು ಮುಚ್ಚಿ ಕಾಯದೆಯ ಕೊಲೆಯಾದರೂ ಏನಾಯಿತು.

'ಮಶೀರಾ' ವ್ಯವಹಾರವಂತೂ ಮೇಲ್ತರಗತಿಯವರ ವ್ಯವಹಾರವಾಯಿತು. ಸೇಂದಿ ಸೆರೆಗಳ ಗಡಂಗಗಳ ಮುಂದೆ, ಆ ಪಾನೀಯಗಳನ್ನು ಹೊತ್ತು ತರುವ ಮೋಟರುಗಳು ಬರುವ ಸಮಯವಾದ ಮಧ್ಯಾಹ್ನದ ಎರಡು ಗಂಟೆಯಿಂದ ಹಿಡಿದು ರಾತ್ರಿಯ ಹನ್ನೆರಡು ಗಂಟೆಗಳವರೆಗೂ ಅಲ್ಲಿಯೇ ತಳವೂರಿ ಕುಳಿತು, ಯಥೇಚ್ಛವಾಗಿ ಕುಡಿದು, ಕುಳಿತ ಸ್ಥಳವನ್ನು ಬಿಟ್ಟು ಏಳಲಾರದೆ ಗಟಾರದ ಕಲ್ಲುಗಳನ್ನೇ ತಲೆದಿಂಬುಗಳನ್ನಾಗಿ ಮಾಡಿಕೊಂಡು ಸುಖನಿದ್ದೆ ಮಾಡುತ್ತಿದ್ದ ಹೆಸರಾಂತ ಕುಡುಕರಿಗೆಲ್ಲ ದುರ್ದಿನಗಳು ಬಂದಿದ್ದುವು. ಹಿಂದೆಯೂ ಈ ಜನರು 'ಮಶೀರಾಪ್ರಿಯ'ರಾಗಿರಲಿಲ್ಲ, ಮುಂದೆಯೂ ಆಗುವಂತಿರಲಿಲ್ಲ. ಅವರ ಪಾಲಿಗೆ ಗಗನಕುಸುಮವಾಗಿತ್ತು ಆ ಮಶೀರಾ. ಅವರಿಗೆ ಬೇಕಿದ್ದುದು ಕಡಮೆ ಬೆಲೆಗೆ ಸಿಕ್ಕುವ ಹೆಂಡ ಅಥವಾ ಸೆರೆ.

ಬೇಡಿಕೆ ಮತ್ತು ಪೂರೈಕೆ ಎಂಬ ಆರ್ಥಿಕ ಸಿದ್ಧಾಂತದಂತೆ ಈ ಸೇಂದಿ

ಸೆರೆಗಳ ಭಕ್ತರಿಗೆ ಸೇವೆ ಸಲ್ಲಿಸಲೆಂದು ಅನೇಕ ಉದಾರಿಗಳು ಮುಂದೆ ಬಂದರು. ಕಾಡುಗಳಿಂದ ಕಟ್ಟಿಗೆ ಹೊರೆ ಹೊತ್ತು ತಂದೋ ಕೂಲಿನಾಲಿ ಮಾಡಿಯೋ ಹೊಟ್ಟೆ ಹೊರೆಯುತ್ತಿದ್ದ ಲಂಬಾಡಿಗರು ಈ ಕ್ಷೇತ್ರದಲ್ಲಿ ಮುಂದಳದವರಾದರು. ಮೊದಲಿನಿಂದಲೂ ಅಕ್ರಮವಾದ ರೀತಿಯಲ್ಲಿಯೇ ಭಟ್ಟಿ ಸೆರೆ ತಯಾರಿಸಿ ಕುಡಿಯುತ್ತ ಬಂದು ಆ ಉದ್ಯಮದಲ್ಲಿ ಪಳಗಿದ ಈ ಜನರಿಗೆ ಈಗ ಅದನ್ನೇ ದೊಡ್ಡ ಪ್ರಮಾಣದಲ್ಲಿ ಮುಂದುವರಿಸುವುದು ಕಷ್ಟಕರವಾದ ಕೆಲಸವೇನೂ ಆಗಿರಲಿಲ್ಲ. ಸರಿ. ಹಾ ಹಾ ಎನ್ನುವುದರೊಳಗಾಗಿ ಕಾಡು ಮೇಡುಗಳು ಕಳ್ಳ ಭಟ್ಟಿ ಸೆರೆಯನ್ನು ಕಕ್ಕತೊಡಗಿದುವು. ಹಬ್ಬ ಹುಣ್ಣಿಮೆಗಳಲ್ಲೂ ಕೂಡಾ ಎಂದೂ ಬೆಲ್ಲ ಕೊಳ್ಳದಿದ್ದ ಇವರು ಈಗ ಪೇಟೆಯಲ್ಲಿನ ಬೆಲ್ಲವನ್ನೆಲ್ಲ ಕೊಂಡು ಕೊಳ್ಳತೊಡಗಿದರು. ಇಷ್ಟು ಬೇಡಿಕೆ ಈ ಮೊದಲೆಂದೂ ಬಂದಿರಲಿಲ್ಲ ಬೆಲ್ಲಕ್ಕೆ.

ಸರಿ. ಬೆಲ್ಲಕ್ಕೂ ಧಾರಣೆ ಏರತೊಡಗಿತು. ಭಿಕ್ಷುಕರೂ ತಿನ್ನದೆ ಬಿಸುಟುತ್ತಿದ್ದ ತೀರಾ ಕನಿಷ್ಠ ತರಗತಿಯ ಬೆಲ್ಲವನ್ನೂ ಲಂಬಾಡಿಗರು ಕೊಂಡು ಸಾಗಿಸತೊಡಗಿದರು. ಚಿನ್ನ ಬೆಳ್ಳಿಗಳ ವ್ಯಾಪಾರಕ್ಕಿಂತ ಬೆಲ್ಲದ ವ್ಯಾಪಾರವೇ ಹೆಚ್ಚು ಲಾಭದಾಯಕವಾಗುತ್ತಲೂ ಅನೇಕ ಜನ ವ್ಯಾಪಾರಸ್ಥರು ತಮ್ಮ ಬಂಡವಾಳವನ್ನೆಲ್ಲ ಇದೇ ವ್ಯಾಪಾರಕ್ಕೆ ಸುರಿದು ಬೆಲ್ಲದ ಪೇಟೆಗಳಿಂದ ಗೋಡೌನುಗಳನ್ನು ತುಂಬಿದರು. ಹೋಳಿಗೆ ಹುಗ್ಗಿಗಳಿಗಾಗಿ ಬೆಲ್ಲ ಕೊಳ್ಳುವ ನಾಗರಿಕರಿಗೂ ಬೆಲ್ಲ ಸಿಕ್ಕದಂತಾಗಿ ಜನ ಹೌಹಾರಿತು. ಬೆಲ್ಲದಲ್ಲಿ ಇಂಥ ಬ್ಲಾಕ್ ಮಾರ್ಕೆಟ್ ಎಂದೂ ನಡೆದಿರಲಾರದು. ವ್ಯಾಪಾರಸ್ಥರು ಹೇಳಿದ ಬೆಲೆಗೆ ಬೆಲ್ಲ ಕೊಳ್ಳುವ ತ್ರಾಣವೂ ನಾಗರಿಕರಿಗುಳಿಯಲಿಲ್ಲ. ಎಲ್ಲವನ್ನೂ ಲಂಬಾಡಿಗರೇ ಕೊಳ್ಳತೊಡಗಿದರು. ಒಂದು ರೂಪಾಯಿಯ ಬೆಲ್ಲದಿಂದ ಐದು ರೂಪಾಯಿಯ ಸೆರೆ ತಯಾರಿಸಿ ಮಾರಿದರೂ ಅವರಿಗೇನೂ ಹಾನಿಯಿರಲಿಲ್ಲವಲ್ಲ? ಕಟ್ಟಿಗೆ ಹೊರೆಗಳನ್ನು ಹೊತ್ತು ತರುವ ಲಂಬಾಡಿ ಹೆಂಗಸರು ತಮ್ಮ ಹೊರೆಗಳಲ್ಲಿ ಈ ಸೆರೆಯ ಸೀಸೆಗಳನ್ನು ಮುಚ್ಚಿಟ್ಟುಕೊಂಡು ಬಂದು ನಗರದಲ್ಲಿನ ವಿಶಿಷ್ಟ ಗಿರಾಕಿಗಳಿಗೆ ಮುಟ್ಟಿಸತೊಡಗಿದರು. ಈ ಗಿರಾಕಿಗಳೇನೂ ಸ್ವತಃ ಕುಡಿಯುವವರಲ್ಲ. ಲಂಬಾಡಿಗರಿಂದ ಎರಡು ರೂಪಾಯಿಗಳಿಗೊಂದರಂತೆ ಸೆರೆಯ ಸೀಸೆಗಳನ್ನು ಕೊಂಡು ಆ ಸೆರೆಯಲ್ಲಿ ಸಾಕಷ್ಟು ನೀರು ಕೂಡಿಸಿ, ಒಂದು ಸೀಸೆಯಷ್ಟು ಸೆರೆಯನ್ನು ಒಂದೂವರೆ ಸೀಸೆಯಷ್ಟು ಮಾಡಿ, ಒಂದು ಸೀಸೆಗೆ ಆರು ರೂಪಾಯಿಗಳಂತೆ ಕುಡುಕರಿಗೆ

ವಿಕ್ರಯಿಸಿ ಪ್ರತಿ ಸೀಸೆಗೂ ನಾಲ್ಕು ರೂಪಾಯಿಗಳ ನಿವ್ವಳ ಲಾಭ ಪಡೆಯ ತೊಡಗಿದರು. ಪ್ರತಿಯೊಂದು ಬೀದಿಯಲ್ಲಿಯೂ ಇಂಥ ಒಬ್ಬಿಬ್ಬರು ಮಾರಾಟ ಗಾರರು ಹುಟ್ಟಿಕೊಂಡರು. ಪ್ರತಿಯೊಬ್ಬನೂ ಪ್ರತಿದಿನವೂ ನಾಲ್ಕೈದು ಸಿಸೇ ಗಳನ್ನು ಮಾರಿ ಹದಿನೈದು ಇಪ್ಪತ್ತು ರೂಪಾಯಿ ಸಂಪಾದಿಸತೊಡಗಿದರು. ಮಶೀರಾ ವ್ಯವಹಾರದಲ್ಲಿ ತಲೆದೋರಿದ ಹಾಗೇ ಈ ವ್ಯವಹಾರದಲ್ಲೂ ಸ್ಪರ್ಧೆ ತಲೆದೋರಿ ದ್ವೇಷಾಸೂಯೆ ಬೆಳೆದು ಪೋಲೀಸರಿಗೆ ಸುದ್ದಿ ಹೋಗಿ ನಾಲ್ಕಾರು ಖಟ್ಲೆಗಳೂ ನಡೆದುವು. ಖಟ್ಲೆಗಳಲ್ಲಿ ಸಿಕ್ಕಿಬಿದ್ದವರು ಒಡನೆಯೇ ಪೋಲೀಸ ರೊಡನೆ ಒಪ್ಪಂದ ಮಾಡಿಕೊಂಡು ಮಾರನೆಯ ದಿನದಿಂದ ನಿರ್ಭಯವಾಗಿ ವ್ಯವಹಾರಕ್ಕೆ ನಿಂತರು.

× × × ×

"ಇದನ್ನೆಲ್ಲಾ ನೋಡಿ ನೋಡಿ ನನಗೂ ಈ ವ್ಯಾಪಾರದ ಆಸೆಯಾಯ್ತು. ಆರು ಮಂದಿ ವಕೀಲರ ಕಾರಕೂನನಾಗಿದ್ದರೂ ನನ್ನ ಹೊಟ್ಟೆ ನಡೆಯುವದು ಕಠಿನವಾಗಿತ್ತಲ್ಲ. ಏನೋ ಈ ವ್ಯಾಪಾರದಾಗ ನನಗೂ ಹತ್ತಿಪ್ಪತ್ತು ರೂಪಾಯಿ ಸಿಕ್ಕರೆ ನಾನೂ ಸ್ವಲ್ಪಿಲ್ಲ ಸ್ವಲ್ಪ ಆದರೂ ಸುಖದಿಂದ ಇರಬಹುದು ಅಂತ ವಿಚಾರ ಬಂತು. ಸೆರೆ ಹೊತ್ತು ತರುತಿದ್ದ ಲಂಬಾಡಿಗರದು ನನಗೂ ಗುರುತಿತ್ತು. ಅವರಿಗೆ ಕೇಳಿಕೊಂಡು ನಾನೂ ಒಬ್ಬ ಏಜಂಟ್ ಆಗಿಬಿಟ್ಟೆನಿ. ವಕೀಲರ ಕಾರ ಕೂನ ಅಂದಮ್ಯಾಲ ಪೋಲೀಸರ ದೋಸ್ತಿ ಅಂತೂ ಇದ್ದೇ ಇತ್ತು. ಫೌಜದಾರ ಸಾಬರಿಗೆ ಹೇಳಿಕೊಂಡು ದಿನಾ ನಾಲ್ಕು ಬಾಟಲು ಸೆರೆ ಮಾರುವದಕ್ಕ ಅಪ್ಪಣೆ ಪಡೆದು ಅವರಿಗೆ ತಿಂಗಳು ತಿಂಗಳು ನೂರೈವತ್ತು ರೂಪಾಯಿ ಮಾಮೂಲು ಕೊಡುವ ಮಾತಾಯ್ತು" ಎಂದ ಬಸಲಿಂಗ.

"ಅವರಿಗಷ್ಟು ಕೊಟ್ಟರೂ ನಿನಗೆ ಎರಡು ಮೂರು ನೂರು ಉಳಿದಿರ ಬೇಕಲ್ಲ ತಿಂಗಳೂ. ಅದನ್ನೆಲ್ಲಾ ಏನು ಮಾಡಿದಿ?" ಎಂದು ಕೇಳಿದಳು ಚೆನ್ನಿ.

ವಾಸ್ತವವಾಗಿ ಆತ ಆ ಹಣವನ್ನು ಹಾಳುಮಾಡಿರಲಿಲ್ಲ. ಬ್ಯಾಂಕಿನಲ್ಲಿ ಶೇಖರಿಸಿಟ್ಟಿದ್ದ. ಆ ವಿಚಾರವನ್ನು ಚೆನ್ನಿಯೆದುರಿಗೆ ಹೇಳುವುದೇ ಬೇಡವೆ ಎಂದು ಒಂದು ಕ್ಷಣ ಯೋಚಿಸುತ್ತಿದ್ದು, ಹೇಳದಿರುವುದೇ ಒಳ್ಳೆಯದೆಂಬ ತೀರ್ಮಾನಕ್ಕೆ ಬಂದು,

"ಈ ಎರಡು ಮೂರು ನೂರು ಕೈಯೊಳಗೆ ಉಳಿಯೂದಾದರೂ ಹ್ಯಾಗೆ ಹೇಳು. ಅದರಲ್ಲಿ ನಾನಿಲ್ಲಿ ಒಬ್ಬಂಟಿಗ. ಹೇಳುವವರು ಕೇಳುವವರು ಯಾರೂ ಇಲ್ಲ. ನೀನಾದರೂ ಇದ್ದಿದ್ದರೆ ರೂಪಾಯಿ ಬಂದ ಹಾಂಗೆಲ್ಲಾ ನಿನ್ನ ಕೈಯಾಗ ಕೊಡುತಿದ್ದಿನಿ. ಆಗ ಯಾರ ಕೈಯಾಗ ಕೊಡೂದು?"

"ಏನೋ ಬಿಡು. ನಿನ್ನ ಮಾತು ನಂಬುವ ಹಾಂಗ ಆಗೂದಿಲ್ಲ," ಎಂದಳು ಚೆನ್ನಿ. "ಹೂಂ. ಮುಂದೇನಾತು?"

"ಹೊತ್ತು ಮುಳುಗಿ ಕತ್ತಲಾಗುತ್ತಲೂ ನಡೀಬೇಕು ನಮ್ಮ ಈ ವ್ಯಾಪಾರ. ನಾನೇನು ಮನೆಮನೆಗೆ ಹೋಗಿ ಮಾರಬೇಕಾಗಿರಲಿಲ್ಲ. ಗುರುತಿನವರೇ ಆದ ಹತ್ತಿಪ್ಪತ್ತು ಮಂದಿ ವಿಶ್ವಾಸಿಕರಾದ ಕುಡುಕರಿದ್ದರು. ಅವರೇ ನನ್ನ ಕೋಣೆಯ ತನಕ ಬಂದು ತಾವೇ ಸೆರೆ ತಗೊಂಡು ಹೋಗುತ್ತಿದ್ದರು. ಹತ್ತು ಮಿನಿಟು ಗಳೊಳಗೇ ನನ್ನ ವ್ಯಾಪಾರ ಮುಗಿದು ಹೋಗುತ್ತಿತ್ತು."

× × × ×

ಮೊದಲು ಗಟಾರಗಳಿಗೆ ಬಿಸುಟುತ್ತಿದ್ದ ಹಳೆಯ ಸೈಕಲ್ ಟ್ಯೂಬುಗಳಿಗೂ ಈಗ ಬೆಲೆ ಬರತೊಡಗಿತ್ತು. ಈ ಟ್ಯೂಬುಗಳಲ್ಲಿ ಸೆರೆ ತುಂಬಿ ತಮ್ಮ ನಡುವಿಗೆ ಸುತ್ತಿಕೊಂಡು, ಅದರ ಮೇಲೆ ಬೆಲೆಬಾಳುವ ಸೂಟು ಧರಿಸಿ ವ್ಯಾಪಾರ ಸಾಗಿಸುವ ಸಂಭಾವಿತರೂ ಹುಟ್ಟಿಕೊಂಡರು. ಲಂಬಾಡಿಗರ ಶಿಬಿರಗಳಿಂದ ಸೆರೆಯನ್ನು ಸಾಗಿಸುವುದಕ್ಕೂ ಟ್ಯೂಬುಗಳ ಉಪಯೋಗವಾಗತೊಡಗಿತು. ಒಂದು ಸೈಕಲ್ ಟ್ಯೂಬಿನಲ್ಲಿ ಎರಡೂವರೆ ಸೀಸೆಗಳಷ್ಟು ಸೆರೆ ಹಿಡಿಸುವಾಗ ಕೇಳಬೇಕೇ! ಲಂಬಾಡಿ ಹೆಂಗಸರು ಇಂಥ ನಾಲ್ಕೈದು ಟ್ಯೂಬುಗಳನ್ನು ತಮ್ಮ ದಪ್ಪನೆಯ ಉಡುಗೆಗಳಲ್ಲಿ ಬಚ್ಚಿಟ್ಟುಕೊಂಡು ನಗರಕ್ಕೆ ಬಂದು ಮಾಲು ಒಪ್ಪಿಸಿ ಹೋಗ ತೊಡಗಿದರು.

ಈ ವ್ಯವಹಾರ ಬೆಳೆಯುತ್ತ ನಡೆದಂತೆ ಬೆಲ್ಲ ತಯಾರಿಸುವ ರೈತರಿಗೆ, ಮಾರುಪ ವ್ಯಾಪಾರಸ್ಥರಿಗೆ, ಲಂಬಾಡಿಗರಿಗೆ, ಏಜಂಟರಿಗೆ, ಪೋಲೀಸರಿಗೆ ಸುವರ್ಣಕಾಲ ಬಂದಂತಾಯಿತು. ಅದಕ್ಕಾಗಿ ಅವರೆಲ್ಲರೂ ಮನಸ್ಸಿನಲ್ಲಿಯೇ ಕಾಂಗ್ರೆಸ್ ಸರಕಾರವನ್ನು ಕೊಂಡಾಡುವಂತಾಯಿತು.

ಆದರೆ ಸರಕಾರವೇನೂ ನಿದ್ದೆಮಾಡುತ್ತಿರಲಿಲ್ಲ. ಕುಡಿತದ ವ್ಯಸನಕ್ಕೆ ಬಲಿಬಿದ್ದು ಇದ್ದುಬಿದ್ದುದೆಲ್ಲವನ್ನೂ ಕಳೆದುಕೊಂಡು ಹೆಂಡಿರು ಮಕ್ಕಳಿಗೂ

ತಮಗೂ ಕೂಳಿಲ್ಲದಂತಾಗುವ ಸ್ಥಿತಿಯನ್ನು ತಂದುಕೊಳ್ಳುತ್ತಿದ್ದ ಬಡವರ ಕಲ್ಯಾಣಕ್ಕಾಗಿಯೇ ತಾನೆ ಸರಕಾರ ಈ ಕಾನೂನು ತಂದಿದ್ದುದು? ಆ ಒಂದು ಒಳ್ಳೆಯ ಉದ್ದೇಶವನ್ನು ಸಾಧಿಸುವುದಕ್ಕಾಗಿ ಕೋಟಿಗಟ್ಟಲೆ ಉತ್ಪನ್ನವನ್ನು ಸಂತೋಷದಿಂದ ಬಿಟ್ಟುಬಿಟ್ಟಿರಲಿಲ್ಲವೇ ಸರಕಾರ? ಕದ್ದು ಸೆರೆ ತಯಾರಿಸಿ ಮಾರುವ ಈ ವ್ಯವಹಾರದ ಸುಳುವು ತಿಳಿದಂತೆ ಸರಕಾರವೂ ಈ ಅಪರಾಧಗಳನ್ನು ಕಂಡುಹಿಡಿದು ಸದೆಬಡೆಯಲೆಂದು ವಿಶೇಷ ಪೋಲೀಸ್ ಸಿಬ್ಬಂದಿಯನ್ನೇರ್ಪಡಿಸಿತು. ಅದಕ್ಕಾಗಿ ಮತ್ತೂ ಒಂದೆರಡು ಕೋಟಿಗಳಷ್ಟು ವೆಚ್ಚ ಸಹಿಸಿಕೊಂಡು ವಿರೋಧಿ ಪಕ್ಷಗಳ ಟೀಕೆಗಳಿಗೆ ಬೆದರದೆ ಮುಂದುವರಿಯಿತು.

ಹೀಗೆ ಸರಕಾರ ಸ್ವಲ್ಪ ಬಿಗುವಿನಿಂದ ವರ್ತಿಸತೊಡಗುತ್ತಲೂ ಅನೇಕರು ಸಿಕ್ಕಿಬಿದ್ದರು. ಅನೇಕರು ಜೈಲು ಕಂಡರು. ಇಷ್ಟುದಿನ ಸಿಕ್ಕಿದಷ್ಟು ಲಾಭ ಸಾಕು, ಇನ್ನು ಈ ವ್ಯವಹಾರ ಬೇಡವೆಂದುಕೊಂಡು ಕೆಲವರು ಬೇರೆ ಉದ್ಯೋಗಗಳಿಗೆ ತೊಡಗಿದರು. ಕೆಲವರು ಧೈರ್ಯಶಾಲಿಗಳು ಮಾತ್ರ ಪೋಲೀಸರೊಡನೆ ಹೊಸ ಒಡಂಬಡಿಕೆ ಮಾಡಿಕೊಂಡು ಅದೇ ಲಾಭದಾಯಕ ಉದ್ಯಮಕ್ಕೇ ಅಂಟಿಕೊಂಡು ನಿಂತರು. ವ್ಯವಹಾರದಿಂದ ಅನೇಕರು ಹಿಂದೆಗೆದುದರಿಂದಾಗಿ ಮಾಲಿನ ಪೂರೈಕೆ ಕಡಿಮೆಯಾಗಿ ಗಿರಾಕಿಗಳಲ್ಲಿ ಹಾಹಾಕಾರವುಂಟಾಯಿತು. ಸೆರೆಯ ಧಾರಣೆಯೂ ಏರಿತು. ಆರು ರೂಪಾಯಿಯ ಒಂದು ಸೀಸೆ ಹತ್ತು ರೂಪಾಯಿಗಳಿಗೆ, ಒಂದೊಂದು ಬಾರಿ ಇಪ್ಪತ್ತು ರೂಪಾಯಿಗಳಿಗೂ ಮಾರಾಟವಾಗತೊಡಗಿತು. ಅದರಂತೆಯೇ ಇಲ್ಲಿ ಇಪ್ಪತ್ತು ರೂಪಾಯಿಗಳಿಗೆ ಸಿಕ್ಕುವ ಒಂದು ಮಶೀರಾ ಸೀಸೆಗೆ ನಲವತ್ತು ರೂಪಾಯಿ ಆಯಿತು. ಗೋವಾ ಗಡಿಯಿಂದ ಆ ಮದ್ಯವನ್ನು ಸಾಗಿಸುವ ಅನೇಕ ಕಾರುಗಳನ್ನು ಟ್ರಕ್ಕುಗಳನ್ನು ಪಾನಪ್ರತಿಬಂಧಕ ಪಡೆಯವರು ತಡೆದು ಅವುಗಳ ಒಡೆಯರನ್ನು ಬಂಧಿಸಿ ಆ ಕಾರು ಟ್ರಕ್ಕುಗಳನ್ನು ಜಪ್ತಿಮಾಡಿ ಹರಾಜು ಹಾಕಿಸಿ, ಬಂದ ಹಣ ಸರಕಾರದ ಬೊಕ್ಕಸಕ್ಕೆ ಸೇರುವಂತೆ ಮಾಡಿದುದರಿಂದ ಮಶೀರಾದ ಕೊರತೆಯೂ ಉಂಟಾಯಿತು.

ಇಂಥ ಪರಿಸ್ಥಿತಿ ಎಂದಾದರೊಮ್ಮೆ ನಿರ್ಮಾಣವಾಗುವುದು ಖಚಿತವೆಂದು ಮೊದಲೇ ಊಹಿಸಿಕೊಂಡಿದ್ದ ದೂರದೃಷ್ಟಿಯ ಬಾಜೀರಾಯರು, ತಮ್ಮ ಹೆಂಡತಿಗೂ ಆ ರಹಸ್ಯವನ್ನು ತಿಳಿಸಿ ಅವಳಿಂದ ಎರಡು ಸಾವಿರ ರೂಪಾಯಿ

ಗಳನ್ನು ದೊರಕಿಸಿಕೊಂಡು, ತಮ್ಮ ಗೆಳೆಯರಿಂದಲೂ ಎರಡು ಸಾವಿರ ದೊರಕಿಸಿ ಇನ್ನೂರು ಸೀಸೆಗಳಷ್ಟು 'ಮಶೀರಾ' ಸಂಗ್ರಹಿಸಿಟ್ಟುಕೊಂಡಿದ್ದರು. ಅವುಗಳನ್ನು ವಿಕ್ರಯಿಸಿ ಲಾಭ ಮಾಡಿಕೊಳ್ಳುವ ಅಪೇಕ್ಷೆಯೇನೂ ಆಗ ಅವರಿಗಿರಲಿಲ್ಲ. ತಮ್ಮ ಉಪಯೋಗಕ್ಕೆಂದೇ ಅವರು ಸಂಗ್ರಹಿಸಿದ್ದುದು. ಮಶೀರಾದ ಕೊರತೆ ಯುಂಟಾಗಿ ಸೀಸೆಗೆ ನಲವತ್ತು ರೂಪಾಯಿಯ ಬೆಲೆಯಾದಾಗ ಬಾಜೀರಾಯರು ಅಷ್ಟು ಹಣ ತೆರಬೇಕಾದ ಪ್ರಸಂಗ ಬರಲಿಲ್ಲ. ಅವರಿಗಾದ ಲಾಭವೆಂದರೆ ಅಷ್ಟೆ. ಸೀಸೆಯೊಂದಕ್ಕೆ ಇಪ್ಪತ್ತು ರೂಪಾಯಿಗಳಷ್ಟು ಉಳಿತಾಯವಾಯಿತೆಂದು ತಾರಾಬಾಯಿಯವರಿಗೂ ಸಮಾಧಾನವಾಗದಿರಲಿಲ್ಲ.

ಮುಂದೆ ಕೆಲದಿನಗಳಲ್ಲಿಯೆ ಸುಶೀಲೆಯ ಮದುವೆಯೂ ನಡೆದು ಅವಳು ಗಂಡನ ಮನೆಗೆ ಹೊರಟುಹೋದಳು. ನಾರಾಯಣರಾಯರು ಮತ್ತೆರಡು 'ಚಾಳ'ಗಳನ್ನು ಕಟ್ಟಿಸಿ ತಮ್ಮ ಸೊಸೆಯ ಹೆಸರಿನಲ್ಲಿ ನೋಂದಾಯಿಸಿದರಲ್ಲದೆ ಐವತ್ತು ಸಾವಿರದಷ್ಟು ಹಣವನ್ನು ಅವಳ ಹೆಸರಿನಲ್ಲಿ ಬ್ಯಾಂಕಿನಲ್ಲಿಟ್ಟರು. ಇತ್ತೀಚೆಗೆ ಅವರಿಗೆ ತಮ್ಮ ಹೊಲಗಳ ಬಗೆಗಿದ್ದ ಆಸಕ್ತಿ ಕಡಮೆಯಾಗುತ್ತ ಬಂದಿತ್ತು. ಅದರ ಬದಲು ಮನೆಗಳ ಬಾಡಿಗೆಯ ಬಗೆಗೆ ನಂಬುಗೆ ಬೆಳೆದಿತ್ತು. ಆ ವಿಚಾರವಾಗಿ ಅವರು ಮಗನಿಗೂ ಸೊಸೆಗೂ ತಿಳಿಸಿ ಹೇಳಿ ಮನೆಗಳನ್ನು ಯೋಗ್ಯ ರೀತಿಯಿಂದ ನೋಡಿಕೊಂಡರೆ ಸುಖವಾಗಿ ಜೀವಿಸಬಹುದೆಂಬ ಗುಟ್ಟನ್ನು ಮನವರಿಕೆ ಮಾಡಿಕೊಟ್ಟಿದ್ದರು.

ಶಾಸನ ಸಭೆಯಲ್ಲಿ ಪಾನಪ್ರತಿಬಂಧಕ ಕಾನೂನು ಸ್ವೀಕರಿಸಲ್ಪಟ್ಟ ದಿನ ಅವರು ತುಪ್ಪದ ದೀಪ ಹಚ್ಚಿ ದೇವರನ್ನು ಕೊಂಡಾಡಿದ್ದುದಿತ್ತು. ತಿರುಪತಿ ವೆಂಕಟರಮಣನೇ ಈ ಕಾನೂನು ಮಾಡಿಸಿದನೆಂದು ಅವರು ನಂಬಿಕೊಂಡಿದ್ದರು. ಆದರೆ, ಕಾನೂನು ಜಾರಿಗೆ ಬಂದ ಕೆಲದಿನಗಳಲ್ಲಿಯೇ ತಮ್ಮ ಮಗ ಮತ್ತೆ ಕುಡಿದು ಮನೆಗೆ ಬಂದಾಗ ಅವರಿಗಾದ ವ್ಯಸನ ಅಷ್ಟಿಷ್ಟಲ್ಲ. ಅದೊಂದು ವಿಷಯವನ್ನು ಹೊರತುಪಡಿಸಿದರೆ ಅವರಿಗೆ ಬೇರಾವುದರ ಬಗೆಗೂ ವಿವಂಚನೆ ಯಿರಲಿಲ್ಲ. ಇಬ್ಬರು ಹೆಣ್ಣುಮಕ್ಕಳೂ ಗಂಡಂದಿರ ಜೊತೆಗೆ ಸುಖವಾಗಿ ಸಂಸಾರ ಸಾಗಿಸುತ್ತಿದ್ದರು. ಮನೆತನಕ್ಕೆ ಗೌರವ ತಂದುಕೊಡಬಲ್ಲ ಸುಶೀಲ ಸೊಸೆಯಿದ್ದಳು. ವಕೀಲನಾದ ಮಗನಿದ್ದ. ಸಾವಿರಾರು ರೂಪಾಯಿ ಬಾಡಿಗೆ ತರುವ ಚಾಳಗಳಿದ್ದುವು, ಹೊಲಗಳಿದ್ದುವು. ಅವರಿಗುಳಿದಿದ್ದ

ಆಸೆಗಳೆಂದರೆ ಎರಡೇ ಎರಡು. ಒಂದು: ಮೊಮ್ಮಗನ ಮುಖ ನೋಡುವುದು, ಇನ್ನೊಂದು: ಬಾಜೀರಾಯರು ಕುಡಿತ ತ್ಯಜಿಸಿದುದನ್ನು ನೋಡುವುದು. ಇವೆರಡೂ ಆಸೆಗಳು ಪೂರೈಸಿದರೆ ತಾವು ಸುಖವಾಗಿ ಸಾಯಬಹುದೆಂದು ಅವರು ಬಗೆದಿದ್ದರು.

ಅವರ ಮೊದಲನೆಯ ಆಸೆ ಈಡೇರುವ ಶುಭಚಿಹ್ನೆಗಳು ಕಾಣಿಸಿಕೊಂಡಾಗ ಅವರಿಗಾದ ಆನಂದ ಹೇಳತೀರದು. ತಾವೇ ಅತ್ತೆಯಾಗಿ, ತಾಯಿಯಾಗಿ ಸೊಸೆಯ ಯೋಗಕ್ಷೇಮ ನೋಡಿಕೊಂಡರು.

"ನೀನು ಯಾತಕ್ಕೂ ತೊಂದರೆ ಮಾಡಿಕೋಬೇಡ ತಾರಾ. ಅತ್ತಿತ್ತ ನಡೆದಾಡುವದೂ ಬೇಡ. ಆಯಾಸವಾದೀತು," ಎಂದು ಪದೇ ಪದೇ ಎಚ್ಚರಿಸುವರು. ತಂದೆಯ ಕಾತರವನ್ನು ಕಂಡು ಬಾಜೀರಾಯರಿಗೆ ಕೌತುಕವೆನ್ನಿಸದಿರಲಿಲ್ಲ.

ಸೊಸೆ ಗರ್ಭಿಣಿಯಾದ ತರುವಾಯ ಕೆಲದಿನಗಳಲ್ಲಿಯೆ ನಾರಾಯಣರಾಯರು ಹಾಸಿಗೆ ಹಿಡಿದರು. ಎಂಥದೋ ವಿಚಿತ್ರ ಕಾಯಿಲೆ ಅವರನ್ನಾವರಿಸಿಕೊಂಡಿತು. ಚೊಚ್ಚಿಲು ಬಾಣಂತಿತನಕ್ಕೆಂದು ಸೊಸೆಯನ್ನು ತವರುಮನೆಗೆ ಕಳುಹಿಸಲೂ ಅವರು ಒಪ್ಪಲಿಲ್ಲ. ಬೀಗರ ನಿಷ್ಠುರ ನುಡಿಗಳನ್ನು ಶಾಂತವಾಗಿ ಸಹಿಸಿಕೊಂಡರು. ಮೊಮ್ಮಗನನ್ನು ನೋಡಿಯೇ ಸಾಯುವುದಾಗಿ ಕನವರಿಸುತ್ತಾ ಹಾಸಿಗೆ ಹಿಡಿದು ಮಲಗಿದ ಮಾವನವರನ್ನು ಬಿಟ್ಟು ತವರುಮನೆಗೆ ಹೋಗಲು ತಾರಾಬಾಯಿಗೂ ಮನಸ್ಸು ಬರಲಿಲ್ಲ.

ಸಕಾಲದಲ್ಲಿ ಹೆರಿಗೆಯಾಗಿ ತಾರಾಬಾಯಿ ಗಂಡುಮಗುವಿನ ತಾಯಿಯಾದಳು. ಭೂಲೋಕದಲ್ಲಿಯೇ ಸ್ವರ್ಗಲೋಕದ ದರ್ಶನವಾದಷ್ಟು ಸಂತೋಷವಾಯಿತು ನಾರಾಯಣರಾಯರಿಗೆ.

ಮೂರು ತಿಂಗಳುಗಳ ತರುವಾಯ ಒಂದು ದಿನ, ಮಕ್ಕಳು, ಅಳಿಯಂದಿರು, ರೈತರೇ ಮೊದಲಾದವರೆಲ್ಲ ಸುತ್ತಮುತ್ತಲೂ ನೆರೆದಿದ್ದಾಗ ನಾರಾಯಣರಾಯರು ನೆಮ್ಮದಿಯಿಂದಲೇ ಇಹಲೋಕವನ್ನು ತ್ಯಜಿಸಿದರು.

# ಐದು.... ಮೋಜಣ್ಣವರು !

ಬಸಲಿಂಗನ ಆರು ಜನ 'ಸಂಡೇ ಪ್ಲೀಡರು'ಗಳ ತಂಡಕ್ಕೆ ಬಾಜೀ ರಾಯರು ರಾಜರಂತಿದ್ದರೆ ಮೋಜಣ್ಣವರು ಮಂತ್ರಿಗಳಂತಿದ್ದರು. ಸಿರಿವಂತಿಕೆ ಯೊಂದನ್ನು ಬಿಟ್ಟರೆ ಬಾಜೀರಾಯರಿಗೆ ಇನ್ನಾವ ವಿಷಯಗಳಲ್ಲೂ ಕಡಮೆ ಯವರಲ್ಲ ಮೋಜಣ್ಣವರು. ಬಾಜೀರಾಯರ ಹಾಗೆ ಇವರೂ ಬಿ.ಎ.ಎಲ್‌ಎಲ್.ಬಿ. ಪಾಸು ಮಾಡಿದವರು. ಹೃಷ್ಟಪುಷ್ಟವಾದ ಆರು ಅಡಿ ಎತ್ತರದ ಪ್ರಭಾವಶಾಲಿ ದೇಹ. ಅದಕ್ಕೆ ತಕ್ಕ ಗಂಡು ನಿಲುವು. ಅಗಲವಾದ ತುಂಬುಮೊಗ. ಮಡಿ ಮಾಡಿದ ಸೂಟು ಹಾಕಿಕೊಂಡು ಮೋಜಣ್ಣವರು ಬೀದಿಯಲ್ಲಿ ಹೊರಟರೆಂದರೆ ಹಾಲಿವುಡ್ ನಟನ ಹಾಗೇ ಕಾಣುವುದುಂಟು. ಇಂಥ ಭವ್ಯ ವ್ಯಕ್ತಿತ್ವವನ್ನು ಪಡೆದು ಬರುವ ಭಾಗ್ಯ ಬಾಜೀರಾಯರಿಗಿರಲಿಲ್ಲ.

ಹೈಸ್ಕೂಲಿನ ಶಿಕ್ಷಣವನ್ನು ಮುಗಿಸಿ ಕಾಲೇಜಿಗೆ ಅಡಿಯಿರಿಸುವಾಗಲೇ ಮೋಜಣ್ಣವರಿಗೆ ಇಪ್ಪತ್ತೆರಡು ವರ್ಷಗಳಾಗಿದ್ದುವು. ಪುಸ್ತಕವಿದ್ಯೆಗಿಂತ ಹೆಚ್ಚಾಗಿ ಆಟಗಾರಿಕೆಯೇ ಅವರ ಮನಸ್ಸನ್ನು ಸೆಳೆದುಕೊಂಡಿದ್ದುದು ಈ ವಿಲಂಬಕ್ಕೆ ಕಾರಣವಾಗಿತ್ತು. ಹೈಸ್ಕೂಲಿನಲ್ಲಿರುವಷ್ಟು ದಿನವೂ ಮೋಜಣ್ಣವರೇ ಚಾಂಪಿಯನ್. ಓಡುವುದು, ಜಿಗಿಯುವುದು, ಈಜುವುದು ಮೊದಲಾದ ಆಟಗಳಲ್ಲಿ ಹನ್ನೆರಡು ವರ್ಷಗಳ ಕಾಲ ಆತ ಅಜಿಂಕ್ಯನಾಗಿದ್ದ. ಮ್ಯಾಟ್ರಿಕ್ ತರಗತಿಯವರೆಗೆ ಏರಿಬರಲು ಅವನಿಗೆ ಅಂಥ ತೊಂದರೆಯೇನೂ ಉಂಟಾಗಲಿಲ್ಲ. ಮ್ಯಾಟ್ರಿಕ್ ಗೋಡೆಯನ್ನೇರಿ ಹೋಗಲು ಮಾತ್ರ ಐದು ವರ್ಷ ಸೆಣಸ ಬೇಕಾಯಿತು. ಪಂದ್ಯಾಟಗಳಲ್ಲಿ ಆತ ದೊರಕಿಸುತ್ತಿದ್ದ ವಿಜಯಗಳಿಂದಾಗಿ ಶಾಲೆಗೆ ಕೀರ್ತಿ ಲಭಿಸುತ್ತಿದ್ದಿತಾದುದರಿಂದ ಶಿಕ್ಷಕರಿಗೆಲ್ಲ ಮೋಜಣ್ಣವರ್ ಮೆಚ್ಚುಗೆಯ ವಿದ್ಯಾರ್ಥಿ. ಅಂತೆಯೇ, ಆತ ಮನೆತನದಿಂದ ಬಡವನಾದರೂ,

ಶಾಲೆಯಲ್ಲಿ ಫೀಜಿನ ರಿಯಾಯಿತಿ ದೊರಕಿಸಿ ತೊಂದರೆಯಿಲ್ಲದೆ ಶಿಕ್ಷಣ ಪಡೆಯಲು ಸಾಧ್ಯವಾಯಿತು. ಫುಟ್‌ಬಾಲ್ ಟೀಮಿನ ನಾಯಕನೂ ಅವನೇ. ಹಾಕಿ ಮತ್ತು ಕ್ರಿಕೆಟ್ ಆಟಗಳಲ್ಲೂ ಆತ ಪ್ರವೀಣ. ಆಟಗಾರಿಕೆಯಲ್ಲಿ ದೊರಕಿಸಿದ ಮುಖಂಡತ್ವದ ಪ್ರಯೋಜನ ಪಡೆದು ನಾಲ್ಕು ಕಾಸು ಸಂಪಾದಿಸುವುದನ್ನು ಆತ ಕಲಿತುಕೊಂಡಿದ್ದ. ತಮ್ಮ ಹೈಸ್ಕೂಲಿಗೆ ಆಟದ ಸಾಮಾನುಗಳನ್ನೊದಗಿಸುವ ಅಂಗಡಿಯವರೊಡನೆ ರಹಸ್ಯವಾಗಿ ಕರಾರು ಮಾಡಿಕೊಂಡು ಒಂದಕ್ಕೆ ನಾಲ್ಕರಷ್ಟು ಬಿಲ್ ಬರೆಸಿ, ತನ್ನ ಊಟದ ವೆಚ್ಚಕ್ಕಾಗಿ ಹಣ ಹೊಂದಿಸಿಕೊಳ್ಳುತ್ತ ಬಂದಿದ್ದ.

ಆದರೆ, ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಮೂರನೆಯ ವರ್ಷವೂ ಲಾಗ ಹೊಡೆದ ತರುವಾಯ ಶಿಕ್ಷಣವನ್ನು ಅಲ್ಲಿಗೇ ಬಿಟ್ಟುಬಿಡಬೇಕೆಂದು ಯೋಚಿಸಿ ತನ್ನ ಖಾನಾವಳಿಯ ಒಡತಿಯಾದ ಈರಕ್ಕನ ಮುಂದೆ ಮಾತು ತೆಗೆದ:

"ಮ್ಯಾಟ್ರಿಕ್ ಪಾಸಾಗೂದು ನನ್ನ ಹಣೆಯೊಳಗೇ ಬರೆದಂತಿಲ್ಲ ಈರಕ್ಕಾ. ಇಲ್ಲಿಗೇ ಸಾಕು. ಏನಾದರೊಂದು ನೌಕರಿ ಹುಡುಕಿಕೋಬೇಕಂತ ಮಾಡೀನಿ."

ಮೋಜಣ್ಣವರನ ಆಕರ್ಷಕ ವ್ಯಕ್ತಿತ್ವವನ್ನು ಕಂಡು ಮೆಚ್ಚಿದ್ದ ಅನೇಕ ಜನರಲ್ಲಿ ಈರಕ್ಕನೂ ಒಬ್ಬಳಾಗಿದ್ದಳು. ಅವನ ರೂಪು, ಹಸನ್ಮುಖ, ಠೀವಿಯ ಹಾವಭಾವಗಳನ್ನು ಕಂಡು ಅವಳು ಮನಸ್ಸಿನಲ್ಲಿಯೆ ಅವನಿಗೆ ಪಾರು ಹೋಗಿದ್ದಳು. ಖಾನಾವಳಿಯ ಅಟ್ಟದ ಮೇಲಿನ ಕೊಟಡಿಯಲ್ಲಿಯೆ ನೆಲೆಸಿದ್ದ ಅವನನ್ನು ನಿತ್ಯವೂ ಒಂದೆರಡು ಬಾರಿಯಾದರೂ ನೋಡದಿದ್ದರೆ, ಮಾತನಾಡದಿದ್ದರೆ ಅವಳಿಗೆ ಸಮಾಧಾನವೇ ಇರುತ್ತಿರಲಿಲ್ಲ. ಅವಳು ವಿಧವೆ. ವಯಸ್ಸು ನಲವತ್ತರ ಸಮೀಪಕ್ಕೆ ಬಂದು ನಿಂತಿದ್ದಿತಾದರೂ ಪ್ರಾಯದ ಆಸೆ ಆಕಾಂಕ್ಷೆಗಳೇನೂ ಸತ್ತುಹೋಗಿರಲಿಲ್ಲ. ಶಾಲೆಯನ್ನು ಬಿಟ್ಟರೆ ಮೋಜಣ್ಣವರ್ ತನ್ನ ಖಾನಾವಳಿಯನ್ನು ಬಿಟ್ಟುಹೋಗಬಹುದು. ಅವನನ್ನು ಕಳೆದುಕೊಳ್ಳಬಾರದೆಂದೇ ನಿರ್ಧರಿಸಿ ಈರಕ್ಕ ಹೇಳಿದಳು:

"ನಿಮ್ಮಂಥವರು ಹೀಂಗ ಹೇಡಿಯ ಹಾಂಗ ಮಾತಾಡಿದರ ಹ್ಯಾಂಗ್ರೀ ಮೋಜಣ್ಣವರ್? ಇಷ್ಟೆಲ್ಲ ಆಟ ಓಟದಾಗ ಗೆದ್ದು ಕಪ್ಪು ಢಾಲು ಹೊಡೆದವರಿಗೆ ಒಂದು ಮ್ಯಾಟ್ರಿಕ್ ಗೆದಿಯೂದು ಏನಂತೆ!"

ಅವಳ ಮಾತಿನಿಂದಾಗಿ ಮೋಜಣ್ಣವರನ ಆತ್ಮಾಭಿಮಾನ ಜಾಗೃತವಾಯಿತು.

"ಅದೇನೋ ಸರಿ ಈರಕ್ಕಾ. ಈ ವರ್ಷ ಆಗದಿದ್ದರೆ ಮುಂದಿನ ವರ್ಷ ಆದರೂ ಪಾಸಾದೇನು. ಆದರೆ ಈಗ ಬಂದಿರೂದು ಖರ್ಚಿನ ತೊಂದರೆ."

"ಖರ್ಚು ಖರ್ಚು ಅಂದರೂ ಎಷ್ಟು ಖರ್ಚು ಬರುತ್ತೈತ್ರೀ ನಿಮಗೆ ತಿಂಗಳಿಗೆ?"

"ಏನಿಲ್ಲಾ ಅಂದರೂ ಮೂವತ್ತು ನಲವತ್ತು ರೂಪಾಯಿ ಆದರೂ ಬೇಕಲ್ಲ ಈರಕ್ಕಾ?"

"ಅಷ್ಟೇ ಹೌದಲ್ಲೋ. ಪಿಶ್!" ಎಂದಳು ಈರಕ್ಕ.

"ನಿನಗೇನು ಈರಕ್ಕಾ? ಇಂಥಾ ದೊಡ್ಡ ಖಾನಾವಳಿಯ ಮಾಲಕಳಾಗಿದ್ದಿ. ನೂರಾರು ರೂಪಾಯಿ ಗಳಿಸುತ್ತೀ. ನನಗೇನು ಊರಾಗ ಮನಿಯೇ, ಹೊಲವೇ? ಎಲ್ಲಿಂದಾ ತರಲಿ ರೊಕ್ಕಾ?"

"ಇರಲಿ ಬಿಡಿರಿ, ರೊಕ್ಕದ ಚಿಂತೀ ನೀವೇನು ಮಾಡಬ್ಯಾಡ್ರಿ. ನನ್ನ ಖಾನಾವಳಿಯೊಳಗ ಇಷ್ಟು ಮಂದಿ ಊಟ ಮಾಡುತಾರ. ನೀವೊಬ್ಬರು ಹಂಗೇ ಉಂಡರೆ ನನಗೇನು ಹಾನಿಯಾಗೂದಿಲ್ಲ. ಸಾಲೀ ಕಲಿಯುವವರು ಬ್ಯಾರೆ. ಅದರದಾದರೂ ಅಷ್ಟು ಪುಣ್ಯಾ ಸಿಗಲಿ ನನಗ."

ಮೋಜಣ್ಣವರಿಗೆ ಕೃತಜ್ಞತೆಯಿಂದ ಎದೆ ತುಂಬಿ ಬಂತು. ಈರಕ್ಕ ಇಷ್ಟು ಉದಾರ ಹೃದಯುದವಳೆಂಬುದು ಯಾರಿಗೆ ತಾನೆ ಗೊತ್ತಿತ್ತು?

"ಛೆ. ಛೆ. ನಿನಗ್ಯಾಕೆ ತ್ರಾಸ ಈರಕ್ಕಾ ಸುಮ್ಮಸುಮ್ಮನೆ? ನಿನ್ನ ಮ್ಯಾಲ ನಾನ್ಯಾಕೆ ಭಾರ ಆಗಿರಬೇಕು? ಛೆ. ಛೆ."

ಈರಕ್ಕನೇನು ಸಾಮಾನ್ಯಳಾಗಿರಲಿಲ್ಲ. ಮೋಜಣ್ಣವರನ್ನು ಅಲ್ಲಿಯೇ ಇರಿಸಿಕೊಳ್ಳುವುದರಲ್ಲಿ ಅವಳಿಗೆ ಇನ್ನೂ ಒಂದು ಉದ್ದೇಶವಿತ್ತು. ತಿಂಗಳುಗಳ ಕಾಲ ಅವಳ ಖಾನಾವಳಿಯಲ್ಲಿ ಊಟ ಹೊಡೆದು ಹಣ ಕೊಡದೆ ತಪ್ಪಿಸುತ್ತಿದ್ದ ಗಿರಾಕಿಗಳಿಗೇನು ಕೊರತೆಯಿಲ್ಲ. ಹೆಣ್ಣು ಹೆಂಗಸಾದ ಆಕೆ ಅಂಥ ಜನರಿಂದ ಹಣ ವಸೂಲು ಮಾಡಬೇಕಾದರೆ ಬಹಳ ತೊಂದರೆ ಪಟ್ಟುಕೊಳ್ಳಬೇಕಾಗುತಿತ್ತು. ಅವಳಿಗೆ ಕೊಡಬೇಕಾದ ಹಣವನ್ನು ಕೊಡದೆ ಓಡಿಹೋದವರೂ ಎಷ್ಟೋ ಜನರಿದ್ದರು. ಮೋಜಣ್ಣವರಂಥ ಸಧೃಡಕಾಯದ ಯುವಕ ತನ್ನ ಜೆಂಗಾವಲಿ

ಗಿದ್ದರೆ ಎಂಥವರೂ ತನ್ನ ಹಣ ಮುಳುಗಿಸುವ ಸಾಹಸಕ್ಕೆ ಪ್ರವೃತ್ತರಾಗ ಲಾರರೆಂದೇ ಅವಳು ತಿಳಿದಿದ್ದಳು. ಮೋಜಣ್ಣವರ್ ತನ್ನವನಾದರೆ ಒಬ್ಬ ಪಠಾಣನಂತೆ ಆತ ತನ್ನ ಮನೆಯನ್ನು ಕಾಯಬಹುದು. ಅವನಿಂದ ಆಗಬಹುದಾದ ಉಪಯೋಗದ ಎದುರಿಗೆ ಅವನು ಉಚಿತವಾಗಿ ಊಟ ಮಾಡುವುದೇನೂ ದೊಡ್ಡ ಮಾತಲ್ಲ. ಹಾಗೆಲ್ಲ ಲೆಕ್ಕ ಹಾಕಿಕೊಂಡೇ ಧೂರ್ತಳಾದ ಈರಕ್ಕ ಅವನನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳಲು ಯತ್ನಿಸುತ್ತಿದ್ದಳು.

"ಭಾರ ಗೀರ ಅಂತ ನೀವು ಮಾತಾಡಿದರೆ ನನಗ ಬಹಳ ಕೆಟ್ಟನಿಸುತ್ತೈತಿ ನೋಡ್ರಿ. ನನಗಾದರೂ ಯಾರಿದಾರೆ? ಅವನೊಬ್ಬ ಇದ್ದ. ಹೋದ. ಅವನಿಂದಾಗಿ ನಾ ಈ ಊರಿಗೆ ಬಂದು ಖಾನಾವಳಿ ತೆಗೆದಿನಿ. ಅವ ಹೋದ ಅಂತ ಇದನ್ನ ಬಿಡಾಕ ಬರುತ್ತೈತೇನು? ಅವನದೊಂದು ಹೊಟ್ಟೆ ಕಡಿಮಿಯಾತು. ನೀವು ಉಣ್ಣಬಹುದಲ್ಲ? ಖೋಲಿಯ ಬಾಡಿಗೆ ಕೊಡೂದೂ ಬೇಕಾಗಿಲ್ಲ. ನೀವು ಅರಾಮಾಗಿ ಇರಬಹುದು. ನಿಮಗ ಖರ್ಚಿಗೆ ಬೇಕಾದರೂ ನನ್ನ ಕೇಳಿ ತಗೋಬಹುದು. ನಾನೂ ನಿಮ್ಮವಳೇ ಅಂತ ತಿಳಕೊಂಡು ಬಿಟ್ಟರಾತು."

"ನಿನ್ನದು ಬಹಾಳ ದೊಡ್ಡಮನಸು ಈರಕ್ಕಾ. ಆದರೆ....ಆದರೆ.... ನಿನ್ನ ಉಪಕಾರ ತೀರಿಸೂದು ಹ್ಯಾಗೆ?"

"ಅಯ್ಯೋ ಹುಚ್ಚಾ, ನೀನಿನ್ನೂ ಹುಡುಗ. ನಿನಗ ಏನೂ ತಿಳಿಯೂದಿಲ್ಲ. ಅದಕ್ಕೇ ನೀ ನಪಾಸಾಗುತಾ ಇರೂದು. ನೀ ನೌಕರಿಗೆ ಸೇರಿದ ಮ್ಯಾಲ ತಿಂಗಳಾ ಇಪ್ಪತ್ತು ರೂಪಾಯಿ ಕೊಟ್ಟು ಮುಟ್ಟಿಸೀಯಂತೆ. ಅದಕ್ಯಾಕೆ ಚಿಂತೆ?"

"ಅಂತೂ ನಿನ್ನ ಗುಣಾ ಬಹಾಳ ದೊಡ್ಡದು!"

"ಸಾಕು ಮೋಜಣ್ಣವರ್, ಹೋಗು ಅಟ್ಟದ ಮ್ಯಾಲ. ಅಭ್ಯಾಸ ಮಾಡು ಹೋಗು! ಮತ್ತೆ ಮಾತಾಡಿದರಾತು!" ಎಂದು ಕೊರಳನ್ನು ಸೊಗಸಾಗಿ ಬಳುಕಿಸುತ್ತ ಹೇಳಿದಳು ಈರಕ್ಕ.

ಅವಳ ಆ ಬಳುಕಿದ ಕೊರಳನ್ನು ಕಂಡು ಝುಲ್ಲೆಂದಿತು ಅವನ ಹೃದಯ. ಅವಳ ಕಣ್ಣುಗಳಲ್ಲಿನ ವಿಲಕ್ಷಣವಾದ ಮಿಂಚನ್ನು ಎದುರಿಸಲಾರದೆ ಆತ ಸೋತುಹೋಗಿ, ಮನಸ್ಸಿನಲ್ಲಿಯೆ ಏನೇನನೋ ಯೋಚಿಸುತ್ತಾ ಅಟ್ಟವನ್ನೇರಿ ಕೊಟಡಿಗೆ ಹೋದ.

ಕೋಟು ತೆಗೆದು ಗೂಟಕ್ಕೆ ನೇತುಹಾಕುತ್ತ ಆತ ತನ್ನನ್ನು ತಾನೆ ಕೇಳಿಕೊಂಡ:

"ಈರಕ್ಕ ನನ್ನನ್ನು ಹಾಗೆ ನೋಡಿದಳಲ್ಲಾ! ಅದಕ್ಕೇನು ಕಾರಣ?" ಅವಳ ಕಣ್ಣುಗಳಲ್ಲಿ ಕಾಣಿಸಿದ ಆ ಬಯಕೆ....ಅವಳ ಆ ಒಯ್ಯಾರ....ಆ ಮುರುಕ....!"

ತನ್ನನ್ನು ಕಂಡು ಮರುಳಾಗಿರಬಹುದೇ ಈರಕ್ಕ?

ಮತ್ತೆ ಜುಮ್ಮೆಂದಿತು ಅವನ ಹೃದಯ.

—ಹಾಗೂ ಆಗುವ ಸಂಭವವುಂಟು. ಅದೇನೋ ನಿಜ. ಅವಳು ವಿಧವೆ. ಅನೇಕ ವರ್ಷಗಳಿಂದ ಗಂಡಸಿನ ಸಹವಾಸ ಸುಖವಿಲ್ಲದೆ ಅದಕ್ಕಾಗಿ ಹಸಿದು ಕೊಂಡಿರಲೂ ಸಾಕು. ಅವಳೇನು ಅಂಥ ಮುದುಕಿಯೂ ಅಲ್ಲ. ಬಹಳವಾದರೆ ಮೂವತ್ತಾರು ಮೂವತ್ತೇಳು ವರ್ಷದವಳಿರಬಹುದು, ಅಷ್ಟೆ. ನೋಡಲು ಕುರೂಪಿಯೂ ಅಲ್ಲ. ಅವಳು ತನ್ನನ್ನು ಬಯಸುವುದೂ ಸಹಜವೇ ಸರಿ.

ಅಹಂಕಾರದಿಂದ ಉಬ್ಬಿತು ಮೋಜಣ್ಣವರ ಎದೆ. ಕನ್ನಡಿಯೆದುರಿಗೆ ನಿಂತು ತನ್ನ ಮುಖವನ್ನೆ ನೋಡಿಕೊಳ್ಳುತ್ತ ಆತ ತನ್ನಷ್ಟಕ್ಕೆ ತಾನೆ ಹೇಳಿಕೊಂಡ:

"ಈ ಸುಂದರ ಮೋರೆಯನ್ನ, ಈ ಧಷ್ಟಪುಷ್ಟ ದೇಹವನ್ನ ನೋಡಿ ಮರುಳಾಗದ ಹೆಂಗಸರಾದರೂ ಇರಬಹುದೇ?"

ಆ ಗಳಿಗೆಯಲ್ಲಿ ಅವನಿಗೆ ತಾನು ಮನ್ಮಥನ ಅವತಾರವೆಂದೇ ತೋರಿತು. ತನ್ನನ್ನು ಕಂಡು ಮರುಳಾಗಿ ಹುಚ್ಚಿಯರ ಹಾಗೆ ವರ್ತಿಸುವ ಹುಡುಗಿಯರಿಗೂ ಕೊರತೆಯಿಲ್ಲ ಹೈಸ್ಕೂಲಿನಲ್ಲಿ. ಹೈಸ್ಕೂಲ್ ಹುಡುಗಿಯರು ಮಾತ್ರವಲ್ಲ, ಕಾಲೇಜ್ ಹುಡುಗಿಯರಿಗೂ ತಾನು ಹುಚ್ಚು ಹಿಡಿಸಿದ್ದುದಿತ್ತು. ಕಳೆದ ವರ್ಷದ ಓಡುವ ಪಂದ್ಯಾಟದಲ್ಲಿ ತಾನು ಮೊದಲನೆಯವನಾಗಿ ಬಂದಾಗ ತನ್ನನ್ನು ಸುತ್ತುವರಿದು ಅಭಿನಂದಿಸಿದ ಆ ಸಾರಸ್ವತ ಹುಡುಗಿಯರ ತಂಡ....

"ಈರಕ್ಕ ನನ್ನ ನೋಡಿ ಹುಚ್ಚಿಯಾದಳೆಂದರೆ ಆಶ್ಚರ್ಯ ಏನೂ ಇಲ್ಲ," ಎಂದು ಅವನು ಮತ್ತೆ ಮತ್ತೆ ಹೇಳಿಕೊಂಡ.

—ಅದು ಸರಿ. ಆದರೆ, ಹೀಗೆ ಎಷ್ಟು ದಿನಗಳಿಂದ ಅವಳು ತನ್ನನ್ನು ಬಯಸುತ್ತಿರುವಳೋ? ಅವಳ ಖಾನಾವಳಿಯಲ್ಲಿ ತಾನು ಊಟ ಮಾಡ

ಲಾರಂಭಿಸಿದುದಕ್ಕೆ ಈಗಾಗಲೆ ಎರಡು ವರ್ಷವಾಗುತ್ತ ಬಂತು. ಮೊದಲಿನಿಂದಲೂ ಅವಳು ತನ್ನ ಮೇಲೆ ಕಣ್ಣಿಟ್ಟುಕೊಂಡಿರಬಹುದೋ ಏನೊ. ಎಂಥ ಆಶ್ಚರ್ಯದ ವಿಷಯ! ತನಗೆ ಮಾತ್ರ ಇಷ್ಟು ದಿನವೂ ಅವಳ ಕಡೆಗೆ ಲಕ್ಷ್ಯ ಹೊರಳಿರಲಿಲ್ಲವಲ್ಲ?

"ಇದರಾಗ ಆಶ್ಚರ್ಯ ಏನೂ ಇಲ್ಲ. ಹೆಂಗಸರ ಕಡೆ ಲಕ್ಷ್ಯ ಆದರೂ ಯಾವಾಗ ಹಾಕಿದ್ದಿನಿ ನಾ? ನನ್ನ ಆಟಪಾಟ ಬಿಟ್ಟರೆ ಬ್ಯಾರೆ ಯಾವುದರ ಕಡೆಗೂ ಮನಸು ಹಾಕಿಲ್ಲವಲ್ಲ? ನಾ ಮನಸುಮಾಡಿದ್ದರೆ ನನಗೆ ಹುಡುಗಿಯರ ಕೊರತೆಯಾಗುತಿತ್ತೇ? ಎಂಥೆಂಥ ದೊಡ್ಡ ದೊಡ್ಡ ಮನೆತನಗಳ ಚೆಂದ ಚೆಂದದ ಹುಡುಗಿಯರು! ಈರಕ್ಕ ಎಲ್ಲಿ, ಆ ಹುಡುಗಿಯರೆಲ್ಲಿ! ಇವಳನ್ನ ನಿವಾಳಿಸಿ ಒಗೀಬಹುದು ಅವರ ಮ್ಯಾಲ!"

—ಆದರೂ ಇಂಥ ಈರಕ್ಕನಿಗೇ ತನ್ನ ಈ ಸುಂದರ ಭವ್ಯ ದೇಹವನ್ನು ಮೊದಲಬಾರಿಗೆ ಅರ್ಪಿಸುವ ಪ್ರಸಂಗ....

—ಏನು ಮಾಡುವುದು? ಬೇರೆ ಮಾರ್ಗವಿಲ್ಲ. ಮ್ಯಾಟ್ರಿಕ್ ಅಂತೂ ಮುಗಿಸಲೇಬೇಕು. ಮ್ಯಾಟ್ರಿಕ್ ಪಾಸಿನ ಮಂಗಳಸೂತ್ರ ಕಟ್ಟಿಕೊಂಡವರಿಗೆ ಮಾತ್ರವೇ ನೌಕರಿಗಳ ಕ್ಷೇತ್ರದಲ್ಲಿ ಪ್ರವೇಶ ಸಾಧ್ಯ. ತನ್ನ 'ಚಾಂಪಿಯನ್ ಶಿಪ್'ನಿಂದ ಏನೂ ಪ್ರಯೋಜನವಾಗದು ಆ ಕ್ಷೇತ್ರದಲ್ಲಿ. ಆಫೀಸುಗಳಲ್ಲೇನು ಓಡುವುದು ಜಿಗಿಯುವುದು ಇರುತ್ತದೆಯೆ? ನೌಕರಿ ಎಂದರೇನು ಕ್ರಿಕೆಟ್ ಆಟವೆ? ಹೂಂ. ಮ್ಯಾಟ್ರಿಕ್ ಅಂತೂ ದಾಟಲೇಬೇಕು. ಇನ್ನೂ ಐದು ವರ್ಷವಾದರೂ ಚಿಂತೆಯಿಲ್ಲ. ಈರಕ್ಕನ ಕೃಪೆ ದೊರಕಿದರೆ ಹಣದ ತಾಪತ್ರಯವೂ ತಪ್ಪುವುದು. ಅವಳನ್ನು ಪೂರ್ತಿಯಾಗಿ ವಶಪಡಿಸಿಕೊಂಡು ಉಪಾಯವಾಗಿ ದುಡ್ಡು ಕೀಳಬಹುದು. ಬಟ್ಟೆಬರೆ, ಚಹ ತಿಂಡಿ, ಸಿನಿಮಾ ನಾಟಕ ಮೊದಲಾದ ಷೋಕಿಗೂ ತೊಂದರೆಯಾಗಲಾರದು.

"ಇಷ್ಟೆಲ್ಲಾ ಅವಳಿಂದ ಆಗುವ ಹಾಗಿರುವಾಗ ರಾತ್ರಿ ಅವಳಿಗಷ್ಟು ಸುಖ ಕೊಡೂದು ಏನು ದೊಡ್ಡದು! ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಮಾಡಬೇಕಾದ್ದು ಧರ್ಮ. ಪಾಪ. ನನ್ನಿಂದ ಅವಳಿಗೂ ಅಷ್ಟೇ ಸುಖ ಸಿಗಲಿ!" ಎಂದು, ಬಹಳ ಉದಾರವಾಗಿ ಹೇಳಿಕೊಂಡ ಮೋಜಣ್ಣವರ್.

ಈರಕ್ಕನಿಗೆ ಸುಖ ಸಿಕ್ಕಲು ತಡವಾಗಲಿಲ್ಲ. ಆ ರಾತ್ರೆ ಕೆಲಸಗಳೆಲ್ಲ

ಮುಗಿಯುತ್ತಲೂ ಅವಳು ಬಂದು ಮೋಜಣ್ಣವರ ಕೊಟಡಿಯಲ್ಲಿ ಸೇರಿ ಕೊಂಡಳು.

ಅವಳಿಗಂತೂ ಸುಖ ಲಭಿಸಿತು. ಮೋಜಣ್ಣವರಿಗೆ ಅದೂ ಒಂದು ಮೋಜು ಎಂದೇ ತೋರಿತು. ಜೀವನವೇ ಒಂದು ಮೋಜು, ಒಂದು ಆಟ ಎಂದು ನಂಬಿದ್ದ ಆಟಗಾರನಲ್ಲವೇ ಆತ?

ಅಂದಿನಿಂದ ಮೋಜಣ್ಣವರ್ ಆ ಖಾನಾವಳಿಯ ಒಡೆಯನಂತೆಯೇ ವರ್ತಿಸತೊಡಗಿದ. ಬೆಣ್ಣೆ, ತುಪ್ಪ, ಸಕ್ಕರೆ, ಗೋದಿಯ ರೊಟ್ಟಿ, ಬಾಳೇಹಣ್ಣು, ಹಾಲು, ಕೆನೆಮೊಸರು – ಆತ ಬಯಸಿದುದೆಲ್ಲವೂ ದೊರಕುತ್ತ ಬಂತು. ದಿನ ಗಳೆದ ಹಾಗೆಲ್ಲ ಆತ ಮೊದಲಿನಕಿಂತ ಹೆಚ್ಚು ಹೆಚ್ಚಾಗಿ ಊದಿಕೊಳ್ಳತೊಡಗಿದ. ಅವನು 'ತಯಾರಾಗುವುದನ್ನು' ನಿರೀಕ್ಷಿಸಿದ ಹಾಗೆಲ್ಲ ಈರಕ್ಕನಿಗೆ ಸಂತೋಷವೋ ಸಂತೋಷ. ಅವಳ ಸಹವಾಸದಲ್ಲಿ ಆತ ತನ್ನ ಆಟಗಳನ್ನು ಮರೆಯಲಿಲ್ಲ.

ಬೆಳಿಗ್ಗೆ, ಅವನ ಮಗ್ಗುಲಿನಿಂದೆದ್ದು ಕೆಳಗೆ ಹೋಗುವ ಮೊದಲು ಈರಕ್ಕ ಅವನನ್ನು ಎಚ್ಚರುಗೊಳಿಸಿ ಅಭ್ಯಾಸಕ್ಕೆ ತೊಡಗಿಸುವಳು. ಹದಿನೈದು ನಿಮಿಷ ಗಳೊಳಗಾಗಿ ಬಿಸಿನೀರು ಮತ್ತು ಕಾಫಿ ಸಿದ್ಧವಾಗಿರುವುದು. ಒಂದು ತಾಸು ಬಿಟ್ಟು ತಿಂಡಿ ಮತ್ತು ಬಾದಾಮಿಹಾಲು. ಹತ್ತು ಗಂಟೆಗೆ ಊಟ. ಅನಂತರ ಶಾಲೆ, ಆಟದ ಬಯಲು. "ಮೋಜಣ್ಣವರ್ ಪುಣ್ಯವಂತನಪ್ಪ! ಎಷ್ಟು ಚೈನಿ ಯಿಂದಿದಾನಲ್ಲ!" ಎಂದು ನುಡಿದು ನಗುವುದು ರೂಢಿಯಾಯಿತು ಅವನ ಗೆಳೆಯರಿಗೆ. ಅವನಿಗೂ ಈರಕ್ಕನಿಗೂ ಇರುವ ಸಂಬಂಧ ನಗರಕ್ಕೆಲ್ಲ ಗೊತ್ತಾಗಲು ತಡವಾಗಲಿಲ್ಲ. ಅವನು ಬೀದಿಯಲ್ಲಿ ಹೊರಟದ್ದಾಗ ಅವನನ್ನು ನೋಡಿ ಅರ್ಥಪೂರ್ಣವಾಗಿ ನಗುವುದು ಜನರ ಚಟವಾಯಿತು. ಅಂಥ ನಗುವಿನ ಕಡೆಗೆ ಎಂದೂ ಗಮನವಿತ್ತವನಲ್ಲ ಮೋಜಣ್ಣವರ್.

"ನಗುವವರಿಗೇನು ಗೊತ್ತಾಗುತದೆ ನಮ್ಮ ಕಷ್ಟ? ಇವತ್ತು ಈರಕ್ಕ ನನ್ನ ಕೈಬಿಟ್ಟರೆ ನನ್ನ ಗತಿಯೇನಾದೀತು? ನನ್ನ ಖರ್ಚಿಗೆ ಕೊಡುತ್ತಾರೇನು ಈ ನಗುವ ಮಂದಿ? ನಾನೂ ಓದಿ ಒಬ್ಬ ದೊಡ್ಡ ಮನುಷ್ಯ ಆಗಬೇಕು. ನಗು ವವರ ಕಡೆಗೆಲ್ಲಾ ಲಕ್ಷ್ಯಕೊಟ್ಟರೆ ಬದುಕಲಿಕ್ಕೂ ಆಗಲಿಕ್ಕಿಲ್ಲ ಈ ಪ್ರಪಂಚದಲ್ಲಿ!"

ಎಂದು ಹೇಳಿಕೊಂಡು ತನ್ನಷ್ಟಕ್ಕೆ ತಾನಿದ್ದು ಬಿಡುವುದು ಮೋಜಣ್ಣವರ ಪದ್ಧತಿಯಾಗಿತ್ತು.

ಈರಕ್ಕನ ಪ್ರಿಯಕರನಾಗಿ ಎರಡು ವರ್ಷಗಳನ್ನು ನೆಮ್ಮದಿಯಿಂದ ಕಳೆದು. ಮ್ಯಾಟ್ರಿಕ್ ಪರೀಕ್ಷೆಯನ್ನು ಮುಗಿಸಿ ಮೋಜಣ್ಣವರ್ ಮುಂದೇನು ಮಾಡುವುದೆಂದು ಯೋಚಿಸತೊಡಗಿದ. ನೌಕರಿಗಾಗಿ ಅವರಿವರನ್ನು ಅಂಗಲಾಚುತ್ತ ಅಲೆಯುವುದು ಅವನಿಗಿಷ್ಟವಿರಲಿಲ್ಲ. ಅವನಂಥ ಸುಪ್ರಸಿದ್ಧ ಆಟಗಾರ ಸೊಟ್ಟದೊಂದು ನೌಕರಿಗಾಗಿ ಬಾಯಿ ತೆರೆಯುವುದುಂಟೇ!

"ನೀವು ಈಗಲೇ ಓದೂದನ್ನ ಬಿಡಬಾರದು ಮೋಜಣ್ಣವರ್. ಕಾಲೇಜಿಗೆ ಹೋಗಿ ಬಿ.ಎ. ಒಂದು ಮುಗಿಸಬೇಕು, ಕಾಲೇಜ್ ಚಾಂಪಿಯನ್‌ಶಿಪ್ ಹೊಡೆದುಕೊಳ್ಳದಿದ್ದರೆ ಏನು ಸಾರ್ಥಕ?" ಎಂದು ಗೆಳೆಯನೊಬ್ಬ ಹೇಳಿದುದು ಮೋಜಣ್ಣವರ ಮನಸ್ಸನ್ನೂ ಮುಟ್ಟಿ ಆತ ಅದೇ ವಿಚಾರಕ್ಕೆ ತೊಡಗುವಂತಾಯಿತು. ಈರಕ್ಕನೆದುರಿಗೆ ಅದನ್ನು ಹೇಗೆ ಪ್ರಸ್ತಾಪಿಸುವುದೆಂದು ಆತ ಎಣಿಕೆ ಹಾಕುತ್ತಿದ್ದಾಗ ಅವಳೇ ಒಂದು ರಾತ್ರೆ ಕೇಳಿದಳು:

"ಕಾಲೇಜಕ್ಕ ಹೋಗೂದು ಗೊತ್ತು ಮಾಡಿದಿರೇನ್ರೀ?"

"ಕಾಲೇಜಿಗೆ?" ಬೇಕೆಂತಲೇ ಆತ ಆಶ್ಚರ್ಯದ ಧ್ವನಿಯಲ್ಲಿ ಕೇಳಿದ.

"ಮತ್ತೆ? ಕಾಲೇಜಿಗೆ ಹೋಗಬಾರದಂತ ಮಾಡೀರೋ ಏನು? ಕಲಿಯೂದು ಬಿಟ್ಟು ಖಾನಾವಳಿಯ ಮಾಲಕ ಆಗಿ ಇರಬೇಕಂತ ವಿಚಾರ ಇಲ್ಲ ಹೌದಲ್ಲೋ?"

"ಏನಾದರೂ ನೌಕರಿ ಮಾಡಬೇಕಲ್ಲ ಈರಾ? ಎಷ್ಟುದಿನ ಅಂತ ನಿನ್ನ ಮ್ಯಾಲ ಭಾರ...."

ಈರಕ್ಕ ತನ್ನ ಬೆರಳುಗಳಿಂದ ಅವನ ಬಾಯಿ ಮುಚ್ಚುತ್ತ,

"ಭಾರ ಭಾರ ಅಂತ ಮತ್ತೆ ಮತ್ತೆ ಹೇಳದಿದ್ದರ ನಿಮಗೆ ಸಮಾಧಾನ ಆಗೂದೇ ಇಲ್ಲೇನು? ನಂದು ಬ್ಯಾರೆ, ನಿಮ್ಮದು ಬ್ಯಾರೆ, ಅಂತ ತಿಳಕೋ ಬ್ಯಾಡ್ರಿ ಅಂತ ಎಷ್ಟು ಸಲ ಹೇಳಬೇಕು ನಿಮಗೆ?" ಎಂದು, ಏರಿಸಿದ ಧ್ವನಿಯಲ್ಲಿ ನುಡಿದಳು.

"ಹಾಗಲ್ಲ ಈರಾ....ಆದರೂ...."

"ಆದರೂ ಇಲ್ಲ, ಗೀದರೂ ಇಲ್ಲ. ಯಾವದನ್ನೂ ಕೇಳುವಾಕಿ ಅಲ್ಲ ನಾ.

ಮೊದಲು ಕಾಲೇಜಕ್ಕ ಹೆಸರು ಹಚ್ಚಿರಿ," ಎಂದು ಆ ಮಾತು ಮುಗಿಸಿದಳು ಈರಕ್ಕ.

ಮೋಜಣ್ಣನರಿಗೆ ಬೇಕಿದ್ದುದೂ ಅಷ್ಟೇ. ಕೊಂಚವೂ ಕಷ್ಟವಿಲ್ಲದೆ ಸುಖವಾಗಿ ಉಂಡು ತಿಂದು ಬಿ.ಎ. ಮುಗಿಸುವುದೆಂದರೆ ಯಾರಿಗೆ ಬೇಡ ವಾದೀತು?

ಅವನ ಆಟಗಾರಿಕೆಯ ಕೌಶಲ್ಯವನ್ನು ನೋಡಿ ಮೆಚ್ಚಿಕೊಂಡಿದ್ದ ಕಾಲೇಜಿನ ಪ್ರಿನ್ಸಿಪಾಲರೂ ಅವನನ್ನು ಸಂತೋಷದಿಂದ ಸ್ವಾಗತಿಸಿದರು. ಅಲ್ಲಿಯೂ ಅವನಿಗೆ ಅನೇಕ ಸೌಕರ್ಯಗಳು ಲಭಿಸಿದುವು. ಅದೇ ವರ್ಷವೇ ಆತ ಕಾಲೇಜಿನ ಕ್ರಿಕೆಟ್ ಟೀಮಿನ ಕಾರ್ಯದರ್ಶಿಯಾಗಿ ಚುನಾಯಿತನಾದ. ಆಟದ ವಸ್ತುಗಳ ಅಂಗಡಿಯವರ ಸಹಕಾರವಂತೂ ಎಂದಿನಿಂದಲೂ ಇತ್ತು. ಈಗಲೂ ಅದೊಂದು ಸಂಪಾದನೆಯ ಸಾಧನವಾಯಿತು. ಅಂತರ್ – ಕಾಲೇಜು, ಅಂತರ್ – ವಿಶ್ವವಿದ್ಯಾಲಯ ಪಂದ್ಯಾಟಗಳಲ್ಲಿ ಭಾಗವಹಿಸಿ ಪ್ರಥಮಸ್ಥಾನ ಗಳಿಸಿ ತನ್ನ ಕಾಲೇಜಿಗೆ ಕೀರ್ತಿಯನ್ನು ತಂದುಕೊಡುವ ಕ್ರಮವನ್ನೂ ಆರಂಭಿಸಿದ. ಕಾಲೇಜಿನ ಚಾಂಪಿಯನ್‌ಷಿಪ್ ದೊರಕಿಸುವುದೇನೋ ಸುಲಭ ವಾಯಿತಾದರೂ ಪರೀಕ್ಷೆಗಳಲ್ಲಿ ಪಾಸಾಗುವುದು ಮಾತ್ರ ಎಂದಿನಂತೆಯೇ ಕಷ್ಟ ಕರವಾಯಿತು. ನಾಲ್ಕು ವರ್ಷಗಳಿಗೆ ಮುಗಿಯುವ ಬಿ.ಎ. ಮುಗಿಸಬೇಕಾದರೆ ಅವನಿಗೆ ಎಂಟು ವರ್ಷ ಹಿಡಿಯಿತು. ಅನಂತರ ಈರಕ್ಕನ ಸಹಾಯದಿಂದಲೇ ಮುಂಬಯಿಗೆ ಹೋಗಿ ಐದು ವರ್ಷಗಳ ಕಾಲ ಕಷ್ಟಪಟ್ಟು ಎಲ್.ಎಲ್.ಬಿ. ಮುಗಿಸಿಕೊಂಡು ಬಂದ.

ತನ್ನ ವಿದ್ಯಾಭ್ಯಾಸ ನಡೆದ ಈ ನಗರದಲ್ಲಿಯೇ ವಕೀಲಿವೃತ್ತಿ ಸಾಗಿಸಿದಲ್ಲಿ ತನ್ನ ಗೆಳೆಯರ ಪರಿಚಿತರ ಮತ್ತು ಹಿತೈಷಿಗಳ ಸಹಾಯ ಸಹಕಾರ ದೊರೆಯ ಬಹುದೆಂದು ಭಾವಿಸಿ ಇಲ್ಲಿಯೇ ನೆಲೆಯೂರುವ ನಿಶ್ಚಯಕ್ಕೆ ಬಂದು ಈರಕ್ಕನ ಅಟ್ಟದ ಮುಂದೆ ತನ್ನ ಹೆಸರಿನ ಹಲಗೆಯನ್ನು ಪ್ರತಿಷ್ಠಾಪಿಸಿದ. ಆದರೆ, ವಕೀಲಿಯೆಂದರೇನು ಬಯಲಿನಲ್ಲಿನ ಆಟವೇ? ಅವನ ಹತ್ತಿರ ಯಾವ ಕಕ್ಷಿ ಗಾರರೂ ಸುಳಿಯುವ ಲಕ್ಷಣ ಕಂಡುಬರಲಿಲ್ಲ. ಅದೇ ಸಮಯದಲ್ಲಿಯೇ ಈರಕ್ಕನೂ ವಿಷಮಜ್ವರಕ್ಕೆ ಬಲಿಯಾಗಿ ತೀರಿಕೊಂಡಳು. ಅವಳ ಖಾನಾ

ವಳಿಯ ಬಾಗಿಲು ಮುಚ್ಚಿಕೊಂಡಿತು. ಅದರೊಂದಿಗೆ ಮೋಜಣ್ಣವರ ಸುದೈವದ ದಿನಗಳೂ ಇಲ್ಲವಾದುವು.

ಈರಕ್ಕನ ಅಟ್ಟವನ್ನು ಬಿಟ್ಟು, ಸಮೀಪದಲ್ಲಿಯೇ ಇದ್ದ ಇನ್ನೊಂದು ಕೊಟಡಿಯನ್ನು ಬಾಡಿಗೆಗೆ ಹಿಡಿದು, ಶಾಲೆ ಕಾಲೇಜುಗಳಲ್ಲಿ ತಾನು ಗೆದ್ದುಕೊಂಡಿದ್ದ ಬಹುಮಾನಗಳ ಕಪ್ಪುಗಳನ್ನೂ ಪದಕಗಳನ್ನೂ ಒಂದೊಂದಾಗಿ ವಿಕ್ರಯಿಸುತ್ತಾ ಕಾಲ ತಳ್ಳತೊಡಗಿದ ಮೋಜಣ್ಣವರ್. ಈರಕ್ಕನ ನಿಧನದಿಂದುಂಟಾದ ಪ್ರಣಯಸುಖದ ಕೊರತೆಯನ್ನು ತುಂಬಿಕೊಂಡಲು, ಅವಳ ಖಾನಾವಳಿಗೆ ಹಾಲು ಪೂರೈಸುತ್ತಿದ್ದ ಗೌಳಿಗರ ಗಂಗೆ, ಕಾಯಿಪಲ್ಯ ತಂದು ಕೊಡುತ್ತಿದ್ದ ತೋಟಿಗರ ಮಲ್ಲಿ, ಬೆಣ್ಣೆ ಮಾರುತ್ತಿದ್ದ ಬಸವ್ವ ಮುಂದೆ ಬಂದರು. ಈರಕ್ಕನಿಂದ ಸಿಕ್ಕುತ್ತಿದ್ದಂತೆ ಇವರಿಂದ ಹಣ ಮಾತ್ರ ಸಿಕ್ಕುವಂತಿರಲಿಲ್ಲ.

ವಕೀಲರು ಬಹಳ ಕಷ್ಟದಿಂದ ದಿನಗಳೆಯುತ್ತಿದ್ದುದನ್ನು ನೋಡಲಾರದೆ ಅವರ ಗೆಳೆಯರೂ ವೃತ್ತಿಬಾಂಧವರೂ ಆದ ಹರಕಸೆಟ್ಟಿ ವಕೀಲರು ಒಂದು ಉಪಾಯ ಸೂಚಿಸಿದರು.

" ನೀವು ಸುಮ್ಮನೇ ಯಾಕೆ ತ್ರಾಸ ಮಾಡಿಕೋತೀರೀ ಮೋಜಣ್ಣವರ್ ? ಶ್ರೀಮಂತರ ಹುಡುಗಿಯೊಬ್ಬಳನ್ನ ಮದುವೆಯಾಗಿ ಬಿಟ್ಟರೆ ನಿಮ್ಮ ಎಲ್ಲಾ ಕಷ್ಟಗಳೂ ತೀರಿಹೋಗುತಾವೆ."

" ಅದೇನೋ ನಿಜ ಸೆಟ್ಟರೆ. ಆದರೆ, ಹೊಲಾ ಮನೆ ಏನೂ ಇಲ್ಲದ ನಮ್ಮಂಥವರಿಗೆ ಶ್ರೀಮಂತರು ಹೆಣ್ಣು ಕೊಡೂದಾದರೂ ಹ್ಯಾಗ್ರೀ ?"

" ಹೊಲಾ ಮನೆ ಇಲ್ಲದಿದ್ದರೇನಾತ್ರೀ ? ಡಿಗ್ರಿ ಇಲ್ಲೇನು ? ರೂಪ ಇಲ್ಲೇನು ? ಸ್ಯಾಂಡೋನಂಥಾ ಬಾಡಿ ಇಲ್ಲೇನು ? ನಿಮಗೆಷ್ಟು ಬೇಕ್ರೀ ಹೆಣ್ಣು ? ನೀವು ಹೂಂ ಅನ್ರಿ. ಕೊಡಿಸೂದು ನನಗಿರಲಿ."

" ಆಯಿತ್ರೀ. ನೀವೇ ನೋಡಿ ವ್ಯವಸ್ಥೆ ಮಾಡಿರಿ. ನನಗಾದರೂ ಯಾರಿದಾರೆ ?"

ಹರಕಸೆಟ್ಟಿಯವರು ಹೆಣ್ಣು ಹುಡುಕಲು ಹೊರಡುವ ಅವಶ್ಯಕತೆಯೂ ಇರಲಿಲ್ಲ. ಅವರ ಎರಡನೆಯ ಹೆಂಡತಿ ಶ್ರೀಮತಿ ಲೀಲಾದೇವಿ ತಮ್ಮೂರಿನ ಗೌಡರ ಮಗಳೂ ತನ್ನ ಗೆಳತಿಯೂ ಆದ ಗೌರೀದೇವಿಗಾಗಿ ಸುಶಿಕ್ಷಿತ ವರನೊಬ್ಬನನ್ನು ಹುಡುಕಿಕೊಡುವ ಹೊಣೆ ಹೊತ್ತುಕೊಂಡಿದ್ದಳು. ಬೆಳೆದು

ನಿಂತಿದ್ದ ಗೌರೀದೇವಿಗೆ ಮೋಜಣ್ಣವರ್ ಅನುರೂಪ ವರನಾಗಬಹುದೆಂದೇ ಅವಳು ಭಾವಿಸಿದ್ದಳು.

ಹರಕಸೆಟ್ಟಿಯವರು ಮೋಜಣ್ಣವರನ್ನು ಮನೆಗೆ ಕರೆದೊಯ್ದು ತಮ್ಮ ಪ್ರೀತಿಯ ಪತ್ನಿಯ ಪರಿಚಯ ಮಾಡಿಸಿಕೊಟ್ಟರು.

"ಇವಳೇ ನನ್ನ ಡಿಯರ್ ವೈಫು. ಮೈ ಕೈಕೇಯಿ...."

ತನ್ನೆಲ್ಲ ಮೋಹಕತೆಯನ್ನು ಮುಖದ ಮೇಲೆ ಮೂಡಿಸಿ ಮುಗುಳ್ನಗು ಸೂಸುತ್ತಾ,

"ನಮಸ್ಕಾರ ಶ್ರೀಮತಿಯವರೇ," ಎಂದು ಕೈಜೋಡಿಸಿ ವಂದಿಸಿದ, ಮೋಜಣ್ಣವರ್. ಪ್ರಥಮದರ್ಶನದ ಕಾಲಕ್ಕೇ ಪ್ರಭಾವ ಬೀರುವುದು, ಅವನು ಎಂದಿನಿಂದಲೂ ಅನುಸರಿಸಿಕೊಂಡು ಬಂದಿದ್ದ ರೀತಿಯಾಗಿತ್ತು. ಅವನ ಗಂಡು ಠೀವಿಯನ್ನೂ ಸೊಗಸುಗಾರಿಕೆಯನ್ನೂ ಸಸ್ಮಿತವದನವನ್ನೂ ಮೋಹಕ ವಿನಯವನ್ನೂ ಕಂಡು ಲೀಲಾದೇವಿಯ ಹೃದಯವೂ ಕರಗಿ ನೀರಾಯಿತು.

"ಆಹಾ! ಏನು ಮೋಸವಾಯ್ತು! ಇವನೇ ನನ್ನ ಗಂಡನಾಗಿದ್ದರೆ!" ಎಂದು ಅವಳು ಮನಸ್ಸಿನಲ್ಲಿಯೇ ಹೇಳಿಕೊಂಡು, ನಿಟ್ಟುಸಿರುಬಿಟ್ಟು; ಕೊಂಚ ಕೋಪದಿಂದಲೇ ಗಂಡನ ಕಡೆ ತಿರುಗಿ ಅವನನ್ನು ತಾತ್ಸಾರದಿಂದ ದಿಟ್ಟಿಸಿ ನೋಡಿದಳು.

ಇಬ್ಬರು ಹೆಂಗಸರೊಡನೆ ಗುದ್ದಾಡಿ ಸೋತು ಸೊರಗಿದ ತನ್ನ ಗಂಡ....

ಸಿನಿಮಾ ನಟನಂತೆ ಶೋಭಿಸುವ ಮೋಜಣ್ಣವರ್.

"ಕೂಡ್ರಿ. ಕೂಡ್ರಿ. ಸ್ವಲ್ಪ ಚಾ ಮಾಡಿ ಕೊಡ್ತೀನಿ," ಎಂದು ಹೇಳಿ ಲೀಲಾದೇವಿ ಎದ್ದು ಒಳಗೆ ಹೋದಳು.

ಪಾತ್ರೆಯಲ್ಲಿ ಚಹ ಕುದಿಯುತ್ತಿದ್ದ ಹಾಗೇ ಅವಳ ಮನಸ್ಸು ಒಂದೇ ಸಮನೆ ಕೂಗಿಕೊಳ್ಳುತ್ತಿತ್ತು :

"ಏನಾದರೂ ಮಾಡಿ ಮೋಜಣ್ಣವರನ್ನ ನನ್ನವನನ್ನಾಗಿ ಮಾಡಿಕೋಬೇಕು. ಮಾಡಿಕೋಬೇಕು....ಮಾಡಿಕೋಬೇಕು...."

ಅಂದಿನಿಂದ ಮೋಜಣ್ಣವರು ದಿನವೂ ಹರಕಸೆಟ್ಟಿಯವರ ಮನೆಗೆ ಪಾದ ಬೆಳಸತೊಡಗಿದರು. ಹರಕಸೆಟ್ಟಿಯವರೂ ಕೂಡಾ ಹೊಸದಾಗಿಯೇ ವಕೀಲಿ ವೃತ್ತಿಗಾರಂಭಿಸಿದ್ದರಾದರೂ ಅವರ ಬಂಧು ಬಳಗ ಬಲು ದೊಡ್ಡದಾಗಿದ್ದುದರಿಂದ

ಅವರ ಸಹಾಯದಿಂದಾಗಿ ಅವರಿಗೆ ಹತ್ತು ಹಲವು ಖಟ್ಲೆಗಳು ಸಿಕ್ಕುತ್ತಿದ್ದುವು. ಮೋಜಣ್ಣವರ ಹಾಗೆ ಅವರು ಪೂರಾ ನಿರುದ್ಯೋಗಿಯಾಗಿರಲಿಲ್ಲವಾದುದರಿಂದ ನಿತ್ಯವೂ ಕೋರ್ಟಿಗೆ ಹೋಗಿ ಬರುವ ನಿಯಮವನ್ನೂ ಇಟ್ಟುಕೊಂಡಿದ್ದರು. ಹರಕಸೆಟ್ಟಿಯವರು ಕೋರ್ಟಿನಲ್ಲಿರುವ ಸಮಯ ನೋಡಿಕೊಂಡೇ ಮೋಜಣ್ಣವರು ಅವರ ಮನೆಗೆ ಬಂದು ಲೀಲಾದೇವಿಯವರೊಡನೆ ಹರಟುತ್ತ ಕೂಡುವುದಕ್ಕಾರಂಭಿಸಿದರು. ಮನೆಯಲ್ಲಿ ಲೀಲಾದೇವಿಯದೇ ಸರ್ವಾಧಿಕಾರ. ಹರಕಸೆಟ್ಟಿಯವರ ಮೊದಲನೆಯ ಹೆಂಡತಿ ಪಾರ್ವತೀದೇವಿ ಅಲ್ಲಿ ತೊತ್ತಿನಂತೆ ಜೀವಿಸುತ್ತಿದ್ದಳು. ಮನೆಗೆಲಸ, ಅಡುಗೆ, ಕಸ ಮುಸುರೆ ಎಲ್ಲವೂ ಅವಳಿಗೇ ಸೇರಿದ್ದುದು. ಲೀಲಾದೇವಿ ಮಾತ್ರ ಕಾದಂಬರಿಗಳನ್ನೋದುತ್ತಲೂ ವಾಯು ವಿಹಾರ ಹೋಗುತ್ತಲೂ ವಿರಾಮವಾಗಿ ಕಾಲಹರಣ ಮಾಡಿಕೊಂಡಿದ್ದಳು. ಅವಳ ಗಂಡನಿಗೆ ಗೊತ್ತಾಗದಂತೆ ಮೋಜಣ್ಣವರು ಅವಳ ಪ್ರಿಯಕರನಾಗಲು ವಿಲಂಬವಾಗಲಿಲ್ಲ.

ಆದರೇನು! ಅವಳ ಸಹವಾಸಸುಖ ಲಭಿಸಿದ ಮಾತ್ರಕ್ಕೇ ಮೋಜಣ್ಣವರ ತಾಪತ್ರಯಗಳೆಲ್ಲವೂ ದೂರವಾಗುವಂತಿರಲಿಲ್ಲ. ದಿನಗಳುರುಳಿದ ಹಾಗೆಲ್ಲ ಹಣದ ಪ್ರಶ್ನೆ ಭೂತಾಕಾರ ತಳೆದು ಅವರನ್ನು ಕಾಡಿಸುತ್ತಿತ್ತು. ಯಾವುದೊಂದು ಹೈಸ್ಕೂಲಿನಲ್ಲಿ ಶಿಕ್ಷಕನ ಕೆಲಸವನ್ನಾದರೂ ದೊರಕಿಸಿಕೊಳ್ಳಬೇಕೆಂದು ಅವರು ಯೋಚಿಸುತ್ತಿದ್ದಾಗಲೇ ಲೀಲಾದೇವಿ ಅವರ ಮದುವೆಯ ಮಾತನ್ನು ನಿಶ್ಚಿತಗೊಳಿಸಿದಳು.

"ಎಲ್.ಎಲ್.ಬಿ. ಪಾಸು ಮಾಡಿದ ನಿಮ್ಮಂಥಾವರು ಮಾಸ್ತರಾದರೆ ಯಾರಾದರೂ ನಕ್ಕಾರು ಬಿಡ್ರಿ. ನಿಮಗೆ ಎಂದೆಂದೂ ಹಣದ ಅಡಚಣಿ ಬರದಂಥಾ ಹೆಣ್ಣು ಕೊಡಿಸ್ತೀನಿ. ಗೌರೀದೇವಿಯ ತಂದೆಗೆ ನೂರಾರು ಎಕರೆ ಹೊಲ ಅದೆ. ವರ್ಷಕ್ಕೆ ಸಾವಿರಾರು ರೂಪಾಯಿ ಉತ್ಪನ್ನ ಅದೆ. ಮಗಳ ಮ್ಯಾಲ ಅವರದು ಬಹಳ ಪ್ರೀತಿಯೂ ಅದೆ. ನೀವು ಅವಳನ್ನೇ ಆಗಬೇಕು."

"ನಿಮ್ಮ ಮ್ಯಾಲೇ ಎಲ್ಲಾ ಜವಾಬ್ದಾರಿ ಹಾಕಿಬಿಟ್ಟೇನಿ. ನೀವು ನೀರಲ್ಲಾದರೂ ಅದ್ದಬಹುದು, ಹಾಲಲ್ಲಾದರೂ ಅದ್ದಬಹುದು," ಎಂದರು ಮೋಜಣ್ಣವರು.

ಲೀಲಾದೇವಿಯ ತವರೂರಿಗೆ ಹೋಗಿ ಗೌರೀದೇವಿಯನ್ನು ನೋಡಿದುದೂ ಆಯಿತು. ಆಗ ಅವಳಿಗೆ ಹದಿನೆಂಟು ಇಪ್ಪತ್ತರ ಪ್ರಾಯ. ಸಿರಿವಂತರ ಮಗಳಾದುದರಿಂದ ಸುಖವಾಗಿ ಉಂಡು ತಿಂದು ಬೆಳೆದು ಮೈತುಂಬಿಕೊಂಡಿದ್ದಳು. ಮೋಜಣ್ಣವರನ್ನು ಅವಳೂ ಅವಳನ್ನು ಮೋಜಣ್ಣವರೂ ಮನಃಪೂರ್ವಕವಾಗಿಯೇ ಒಪ್ಪಿಕೊಂಡರು. ವಕೀಲನಾದ ಅಳಿಯ ಸಿಕ್ಕುವನಲ್ಲಾ ಎಂದು ಗೌಡರೂ ಹಿಗ್ಗಿದರು.

ಐದು ಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟು, ಮನೆಯ ಮುಂದೆಯೇ ಧಾರೆಯೆರೆದುಕೊಡಲು ಗೌಡರು ಸಂತೋಷದಿಂದ ಒಪ್ಪಿಕೊಂಡರು. ಒಂದು ತಿಂಗಳಿನೊಳಗಾಗಿ ಮದುವೆಯೂ ವಿಜೃಂಭಣೆಯಿಂದ ನಡೆದುಹೋಯಿತು. ದೇಶಪಾಂಡೆ ಚಾಳದಲ್ಲಿ ಮನೆಯನ್ನೂ ಬಾಡಿಗೆಗೆ ಹಿಡಿದು ಮೋಜಣ್ಣವರು ಸಂಸಾರ ಹೂಡಿದರು. ಮಂಚ, ಹಾಸಿಗೆ, ಕೊಡ, ಪಾತ್ರೆ ಇತ್ಯಾದಿ ಸಕಲ ಸಾಮಾನುಗಳನ್ನೂ ಕೊಡಿಸಿ ಮಗಳನ್ನು ಅಲ್ಲಿ ಬಿಟ್ಟು ಗೌಡರು ತೃಪ್ತಿಯಿಂದಲೇ ಊರಿಗೆ ಹೋದರು.

ಮಾವನ ಊರಿನ ಖಟ್ಲೆಗಳಾದರೂ ತಮ್ಮ ಹತ್ತಿರ ಬರಬಹುದೆಂಬ ಇನ್ನೊಂದು ಆಸೆಯೂ ಇತ್ತು ಮೋಜಣ್ಣವರಿಗೆ. ಆದರೆ ಆ ಊರಿನಲ್ಲಿ ವ್ಯಾಜ್ಯಗಳು ನಡೆಯುತ್ತಿದ್ದುದೇ ಅಪರೂಪವಾಗಿ. ಊರಿನ ಜನಗಳ ಮೇಲೆಲ್ಲ ಗೌಡರು ವರ್ಚಸ್ಸು ಕೂಡಿಸಿ, ಕೋರ್ಟುಕಚೇರಿಗಳಿಗೆ ಯಾರೂ ಹೋಗದಂತೆ ನೋಡಿಕೊಂಡು ಬಂದಿದ್ದರು. ಅಂತೆಯೆ, ಮೋಜಣ್ಣವರಿಗೆ ಆ ವಿಚಾರದಲ್ಲೂ ನಿರಾಸೆಯೇ ಎದುರಾಯಿತು.

ಓರೆಕೋರೆಯಂಥ ನಗರದಲ್ಲಿ ಕುಳಿತು ತಿನ್ನುವವರಿಗೆ ಐದು ಸಾವಿರ ರೂಪಾಯಿ ಎಷ್ಟು ವರ್ಷ ಸಾಕಾದಾವು? ನಾಲ್ಕೈದು ವರ್ಷ ಕಳೆದರೂ ಮೋಜಣ್ಣವರಿಗೆ ಖಟ್ಲೆಗಳು ಸಿಕ್ಕುವ ಯೋಗ ಪ್ರಾಪ್ತವಾಗಲಿಲ್ಲ. ಮತ್ತೆ ಮಾವನೇ ಅವರ ಸಹಾಯಕ್ಕೆ ಧಾವಿಸಬೇಕಾಯಿತು. ಗೌರೀದೇವಿಯೂ ಆಗಾಗ ತವರುಮನೆಗೆ ಹೋಗಿ ತಾಯಿಯನ್ನು ಕಾಡಿಸಿ ಪೀಡಿಸಿ ಅಷ್ಟಿಷ್ಟು ಹಣ ಸೆಳೆದು ತರುತ್ತಿದ್ದಳು. ಹೆಂಡತಿಯ ಹಣದ ಮೇಲೆ ಬದುಕಬೇಕಾದ ಪ್ರಸಂಗ ಬಂದುದರಿಂದ ಮೋಜಣ್ಣವರ ಸ್ಥಿತಿ ವಿಚಿತ್ರವಾಯಿತು. ಹೆಂಗಸರ ಹಣದಿಂದ ಷೋಕಿ ಮಾಡುವುದು ಅವರಿಗೆ ಹೊಸ ಸಂಗತಿಯೇನೂ ಆಗಿರಲಿಲ್ಲ.

ಖಾನಾವಳಿಯ ಈರಕ್ಕನ ಹಣದ ಆಧಾರದಿಂದ ಅವರೆಷ್ಟು ವರ್ಷ ಬದುಕಿರ ಲಿಲ್ಲ? ಅವರು ವಕೀಲರಾದುದೂ ಅವಳ ನೆರವಿನಿಂದಲೇ ಅಲ್ಲವೆ? ಆದರೂ, ಈರಕ್ಕ ಇಟ್ಟುಕೊಂಡ ಹೆಂಗಸು. ಗೌರೀದೇವಿಯಾದರೋ ಮದುವೆಯಾದ ಹೆಂಡತಿ. ಹೆಂಡತಿಯ ಹಣದಿಂದ ಜೀವಿಸುವುದೆಂದರೆ ನಿಜವಾಗಿಯೂ ಲಾಂಛನಾಸ್ಪದವಾದ ಸಂಗತಿಯೆಂಬ ವಿಚಾರ ಮೋಜಣ್ಣವರ ಎದೆಯನ್ನು ಪದೇ ಪದೇ ಇರಿಯುತ್ತಿತ್ತು. ಆದರೂ ಅದನ್ನುಳಿದು ಬೇರೆ ಮಾರ್ಗವೂ ಇರಲಿಲ್ಲವಲ್ಲ?

ಹಾಗೆ, ಮೋಜಣ್ಣವರಲ್ಲಿ ಕೀಳರಿಮೆ ಬೆಳೆಯುತ್ತ ಬಂದಂತೆ ಗೌರೀ ದೇವಿಯಲ್ಲಿ ಮೇಲರಿಮೆ ಬೆಳೆಯುತ್ತ ಬಂತು – ಸಹಜವಾಗಿಯೆ. ಮದುವೆ ಯಾದ ಹೊಸದರಲ್ಲಿ, ಗಂಡ ತುಂಬ ಕಲಿತವನೆಂದು ಅವನ ಬಗೆಗೆ ಅಭಿಮಾನ ವನ್ನೂ ಆದರವನ್ನೂ ಇರಿಸಿಕೊಂಡಿದ್ದ ಆಕೆಗೆ ವರ್ಷಗಳುರುಳಿದ ಹಾಗೆ, ಗಂಡನ ಪದವಿಗಳಿಂದ ಏನೂ ಪ್ರಯೋಜನವಿಲ್ಲವೆಂಬುದು ಮನದಟ್ಟಾಗುತ್ತಲೂ, ತವರುಮನೆಯಿಂದ ಹಣ ತಂದು ತಾನೇ ಸಂಸಾರ ನಡಸುವ ಸ್ಥಿತಿ ಬರುತ್ತಲೂ ಗಂಡನ ಬಗೆಗಿದ್ದ ಗೌರವಭಾವ ಅಳಿದು ತಾತ್ಸಾರವುಂಟಾಗುವುದೂ ಸ್ವಾಭಾವಿಕ ವಾಗಿತ್ತು. ತನ್ನ ಪ್ರಿಯ ಗೆಳತಿಯಾದ ಲೀಲಾದೇವಿಯೊಡನೆ ತನ್ನ ಗಂಡನಿಗಿದ್ದ ಗುಪ್ತಸಂಬಂಧವನ್ನು ತಿಳಿದುಕೊಂಡ ತರುವಾಯವಂತೂ ಗೌರೀದೇವಿಯ ಮನಸ್ಸು ಪೂರ್ಣವಾಗಿ ಕೆಟ್ಟುಹೋಯಿತು. ಹಾಲು ಮಾರುವವರೊಡನೆ, ಬೆಣ್ಣೆ ಮಾರುವವರೊಡನೆ, ಕಾಯಿಪಲ್ಯ ಮಾರುವವರೊಡನೆ ತನ್ನ ಗಂಡನಿರಿಸಿ ಕೊಂಡಿದ್ದ ಸಂಬಂಧಗಳ ವಿಚಾರ ತಿಳಿದಮೇಲಂತೂ ಅವಳಿಗೆ ರೋಸಿಹೋಯಿತು. ಆ ಅನೈತಿಕ ಸಂಬಂಧಗಳ ಫಲವಾಗಿ ಮೋಜಣ್ಣವರಿಗಂಟಿಕೊಂಡಿದ್ದ ಗುಹ್ಯ ರೋಗಗಳು ಅವಳಿಗೂ ಅಂಟಿಕೊಂಡು ಅವಳೂ ನರಳುವ ಪ್ರಸಂಗ ಬಂದಾಗ ಅವಳ ತಾಳ್ಮೆಯ ಕೊನೆಯ ಕಣವೂ ಇಲ್ಲದಂತಾಯಿತು. ತನ್ನ ಸಂಕಟವನ್ನು ಆಕೆ ಯಾರ ಮುಂದೆ ತೋಡಿಕೊಂಡಾಳು? ತಂದೆ ತಾಯಿಗಳೆದುರಿಗೆ ಹೇಳಿ ಕೊಳ್ಳಲು ಸಂಕೋಚ ಅಡ್ಡ ಬರುತ್ತಿತ್ತು. ಅವಳಿಗಿದ್ದ ಗೆಳತಿಯೆಂದರೆ ಒಬ್ಬಳು ಲೀಲಾದೇವಿ. ಅವಳೂ ತನಗೆ ದ್ರೋಹ ಬಗೆದವಳೇ ಆದರೂ ಅವಳನ್ನು ಬಿಟ್ಟರೆ ಬೇರೆ ಗತಿಯಿರಲಿಲ್ಲ.

ಸಂಜೆಯ ಹೊತ್ತು ಅವರಿಬ್ಬರೂ ಕೂಡಿ ಗೊಬ್ಬೂರಿನ ರಸ್ತೆ ಹಿಡಿದು

ವಾಯುವಿಹಾರ ಹೋಗುವ ಪರಿಪಾಠವಿಟ್ಟುಕೊಂಡಿದ್ದರು. ಒಂದು ದಿನ ಹಾಗೆ ಹೊರಟಾಗ ಗೌರೀದೇವಿ ತನ್ನ ಅಳಲನ್ನೆಲ್ಲ ತೋಡಿಕೊಂಡಳು.

"ಏನು ಮಾಡಲೇ ಲೀಲಾ, ಏನು ಮಾಡಲೀ? ನನಗೆ ಯಾವದೂ ತಿಳೀದಾಂಗ ಆಗಿದೆ."

ನಗುನಗುತ್ತಲೇ ಗೆಳತಿಯನ್ನು ಸಂತೈಸಿದಳು ಲೀಲಾದೇವಿ.

"ಎಂಥಾ ಹುಚ್ಚಿ ಆದೀಯೇ ನೀನು ಗೌರಾ, ಎಂಥಾ ಹುಚ್ಚಿ! ಈಗ ಅಂಥಾದ್ದು ಆದದ್ದಾದರೂ ಏನು ಅಂತ ಇಷ್ಟು ಗೋಳಾಡುತ್ತೀ?"

"ಆಗೂದು ಉಳಿದದ್ದೇನು ಲೀಲಾ? ಉಳಿದದ್ದೇನೇ?"

ಮುಳುಗುತ್ತಿದ್ದ ಸೂರ್ಯಬಿಂಬಕ್ಕೆದುರಾಗಿ ಗೆಳತಿಯರಿಬ್ಬರೂ ಕುಳಿತು ಕೊಂಡರು ಬಯಲಿನಲ್ಲಿ. ಸಮಿಾಪದಲ್ಲಿಯೇ, ಅವರಂತೆಯೇ ವಾಯು ವಿಹಾರಕ್ಕೆ ಬಂದ ಜನ ಅಲ್ಲಿ ಇಲ್ಲಿ ಸುಳಿಯುತ್ತಿದ್ದರು. ಮಾವಿನ ಚಿಗುರಿನ ಕಂಪನ್ನು ಕುಡಿದ ಗಾಳಿ ವಿಲಾಸಿಯಂತೆ ಸೊಗಸಾಗಿ ಬೀಸುತ್ತಿತ್ತು.

ತೊಡೆಯ ಮೇಲೆ ಎಡಗೈಯನ್ನೂರಿ ಗೌರೀದೇವಿಯನ್ನು ದಿಟ್ಟಿಸುತ್ತ ಲೀಲಾದೇವಿ ಹೇಳಿದಳು :

"ಪಟ್ಟಣಕ್ಕೆ ಬಂದು ಇಷ್ಟು ದಿನ ಆದರೂ ನಿನ್ನ ಹಳ್ಳೀತನಾ ಹೋಗಲಿಲ್ಲಲ್ಲ ಗೌರಾ!"

"ಅಂದರೆ?"

"ಅಂದರೆ....ಈಗಲೂ ಹಳ್ಳಿಯ ಹೆಂಗಸರ ಹಾಂಗ ಕಣ್ಣೀರು ಹಾಕು ತೀಯಲ್ಲ ಅಂತ!"

"ಮತ್ತೇನು ಮಾಡಲೇ? ಬಿ.ಎ.ಎಲೆಲ್.ಬಿ. ಮಾಡಿದವರು, ಮುಂದೆ ದೊಡ್ಡ ವಕೀಲರಾಗುವವರು, ದೊಡ್ಡ ದೊಡ್ಡ ಬಂಗಲೆ ಕಟ್ಟಿಸುವವರು, ಮೋಟಾರು ಇಟ್ಟುಕೊಳ್ಳುವವರು, ರೇಡಿಯೋ ಇಟ್ಟುಕೊಳ್ಳುವವರು ಹಾಂಗ ಹೀಂಗ ಅಂತ ಹೇಳಿ ಇವರಿಗೆ ನನ್ನ ಕಟ್ಟಿಬಿಟ್ಟ. ಇಲ್ಲಿ ಬಂದು ನೋಡಿದರೆ ಎಲ್ಲಾ ಉಪರಾಟಿ. ಮೋಟಾರು ರೇಡಿಯೋದ ಮಾತಿರಲಿ, ಮನೆಗೆ ಜೋಳ ತಂದು ಹಾಕುವದಕ್ಕ ಕೂಡಾ ಶಕ್ತಿ ಇಲ್ಲ ಇವರಿಗೆ...."

"ಇದೇ ಸ್ಥಿತಿ ಕಡೇತನಕ ಇರುತದೇನೇ ಗೌರಾ? ಪಾಪ. ವಕೀಲ ರಾದರೂ ಏನು ಮಾಡಿಯಾರು ಹೇಳು. ಇತ್ತಿತ್ತಲಾಗಿ ಜನರು ಬಡಿದಾಡೂದು

ಹೊಡೆದಾಡೂದು ಕಡಿಮೆಯಾಗಿ ಖಟ್ಲೆಗಳೂ ಕಡಿಮೆಯಾಗಿದಾವೆ. ವಕೀಲರು ಮಾತ್ರ ವರ್ಷಾವರ್ಷಾ ನೂರಿನ್ನೂರು ಮಂದಿ ಹೊಸಹೊಸದಾಗಿ ಪರೀಕ್ಷಾ ಪಾಸುಮಾಡಿ ಬೋರ್ಡು ಹಾಕಿಕೊಂಡು ಕೂಡುತಾ ಇದಾರೆ. ನೀನೇ ನೋಡಿದ್ದೀಯಲ್ಲ. ಒಂದೊಂದು ಓಣಿಗೆ ಇಪ್ಪತ್ತು ಮೂವತ್ತು ಮಂದಿಯಷ್ಟು ವಕೀಲರೇ ಇದಾರೆ ಈ ಪಟ್ಟಣದಾಗ. ಇವರಿಗೆಲ್ಲಾ ಎಲ್ಲಿಂದ ಖಟ್ಲೆ ಸಿಗಬೇಕು ಹೇಳು. ನೂರು ರೂಪಾಯಿಗೆ ಹಿಡಿಯುವ ಖಟ್ಲೆ ಮೂರು ರೂಪಾಯಿಗೂ ಹಿಡೀಲಿಕ್ಕೆ ತಯಾರಾಗಿರುವ ವಕೀಲರಿರುವಾಗ ಮೋಜಣ್ಣವರಂಥ ಬುದ್ಧಿವಂತ ವಕೀಲರಾದರೂ ಏನು ಮಾಡಬೇಕು?"

"ಅದೆಲ್ಲಾ ಖರೆ. ಆದರೆ ನಾನಾದರೂ ಏನು ಮಾಡಲೇ? ಎಷ್ಟು ದಿನಾ ಅಂತ ತವರುಮನಿಯಿಂದ ತಂದು ಹಾಕಲಿ?"

"ಗಂಡ ಹೆಂಡರಂದರೆ ಒಂದು ಸಂಸಾರದ ಎರಡು ಗಾಲಿಯಿದ್ದಾಂಗ ಗೌರಾ. ಒಂದು ಗಾಲಿ ಮುಗ್ಗುರಿಸಿದರೆ ಇನ್ನೊಂದು ಎಳೆದುಕೊಂಡು ಹೋಗಲೇ ಬೇಕಲ್ಲ?"

"ಅದು ಹೋಗಲಿ. ಇವರ ನಡತೆ ಆದರೂ ಚಲೋದಿದೆ ಅಂತೀಯಾ? ಅದೂ ಇಲ್ಲ. ಅವರಿಂದಾಗಿ ನನಗೂ...." ಎಂದು ಹೇಳುತ್ತಾ ಗೌರೀದೇವಿ ಸಂಕೋಚದಿಂದ ಮಾತನ್ನು ಅಲ್ಲಿಗೇ ನಿಲ್ಲಿಸಿದಳು.

"ಏನು ಏನು? ಯಾಕೆ ಸುಮ್ಮನಾದೆ?"

"ಏನಿಲ್ಲ ಬಿಡವ್ವಾ. ಹಾಳು ಸಹವಾಸ. ಅಂತೂ ಇವರನ್ನ ಕಟ್ಟಿಕೊಂಡು ಗೋಳಾಡಬೇಕಂತ ಮಾದೇವ ನನ್ನ ಹಣೆಯ ಮ್ಯಾಲ ಬರೆದಿರಬೇಕು."

"ಕಟ್ಟಿಕೊಳ್ಳಬೇಕಂತ ಬರೆದಿರಬಹುದು. ಗೋಳಾಡಬೇಕಂತ ಅವ ನೇನೂ ಬರೆದಿರುವದಿಲ್ಲ," ಎಂದು ಮಾರ್ಮಿಕವಾಗಿ ನುಡಿದಳು ಲೀಲಾದೇವಿ. "ಎಂಥಾ ಪ್ರಸಂಗದೊಳಗೂ ಒಂದು ಹಾದಿ ಹುಡುಕಿ ಇದ್ದದ್ದರಲ್ಲೇ ಸುಖ ವಾಗಿರೂದು ನಮ್ಮ ಕೈಯೊಳಗೇ ಇರುವಾಗ ಸುಮ್ಮನೆ ಗೋಳಾಡಿ ಏನುಪ ಯೋಗ? ಮಾದೇವನ್ನ ನಿಂದಿಸಿಯಾದರೂ ಏನುಪಯೋಗ?"

ಹುಲ್ಲುಕಡ್ಡಿಗಳನ್ನು ಕೀಳುತ್ತ ಮೌನವಾಗಿ ಕುಳಿತಿದ್ದಳು ಗೌರೀದೇವಿ. ಲೀಲಾದೇವಿಯೇ ಮತ್ತೆ ಹೇಳಿದಳು:

"ನಿನಗಾದದ್ದೇನು ಅನ್ನೂದು ನನಗೆ ಗೊತ್ತದೆ ಗೌರಾ. ಅದರಾಗ

ಅಂಥಾದ್ದೇನದೆಯೇ ನಾಚಿಕೆಪಡುವಂಥಾದ್ದು? ಎಲ್ಲರಿಗೂ ಆಗುವಂಥಾದ್ದು ನಿನಗೂ ಆಗೇದಲ್ಲ. ನನಗೇನು ಆಗಿಲ್ಲಂತ ತಿಳಿದೀಯಾ?"

"ಛೆ. ನಾನ್ಯಾಕೆ ಹಾಂಗ ತಿಳಿಯಲಿ? ನಿನ್ನಿಂದಲೇ ಬಂದಿರಬೇಕು ನಮ್ಮವರಿಗೂ!" ಎಂದು ದಿಟ್ಟತನದಿಂದ ನುಡಿದಳು ಗೌರೀದೇವಿ. ತನ್ನ ಗಂಡ ನೊಡನೆ ಲೀಲಾದೇವಿಗಿದ್ದ ಸಂಬಂಧವನ್ನು ಕುರಿತು ಅವಳ ಎದುರಿಗೇ ಇಂಥ ಮಾತನ್ನು ಇದುವರೆಗೂ ಆಕೆ ಆಡಿರಲಿಲ್ಲ.

ಒಂದು ಗಳಿಗೆ ಲೀಲಾದೇವಿಗೂ ಹೇಗೆ ಹೇಗೋ ಎನಿಸಿತು. ಈ ವಿಚಾರ ವನ್ನು ಕುರಿತು ಗೌರೀದೇವಿ ತನ್ನ ಮುಂದೆಯೇ ಈ ರೀತಿ ಮಾತನಾಡ ಬಹುದೆಂದು ಅವಳು ಎಣಿಸಿಕೊಂಡಿರಲಿಲ್ಲ.

ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಿದ್ದರು. ಈ ಪ್ರಸಂಗವನ್ನು ಹೇಗೆ ಎದುರಿಸುವುದೆಂದು ಲೀಲಾದೇವಿ ಮನಸ್ಸಿನಲ್ಲೇ ಯೋಚಿಸುತ್ತಿದ್ದ ಹಾಗಿತ್ತು.

"ನನಗಿರುವ ಜೀವದ ಗೆಳತಿಯೆಂದರೆ ನೀನೊಬ್ಬಳೇ. ನೀನೂ ಹೀಗೆ ಮಾಡೀ ಅಂತ ನನ್ನ ಕನಸುಮನಸಿನಾಗೂ ಹೊಳೆದಿರಲಿಲ್ಲ." ಆ ಮಾತು ಹೇಳುತ್ತಿದ್ದ ಹಾಗೇ ಗೌರೀದೇವಿಯ ಕಣ್ಣುಗಳಲ್ಲಿ ಗಂಗಾದೇವಿ ಪ್ರತ್ಯಕ್ಷಳಾದಳು.

ಗೌರೀದೇವಿಯನ್ನು ಖಂಡಿಸಿ ಮಾತನಾಡಿ ಅವಳು ಹೊರಿಸಿದ್ದ ಆರೋಪ ವನ್ನು ಅಲ್ಲಗಳೆಯಬೇಕೆಂದು ಯೋಚಿಸಿಕೊಂಡಿದ್ದ ಲೀಲಾದೇವಿಗೆ ಅವಳ ಕಂಬನಿಗಳನ್ನು ಕಂಡೊಡನೆಯೆ ಕರುಳು ಕರಗಿ ಮನಸ್ಸು ಬದಲಿಸಿತು. ಇನ್ನು ಆ ಆರೋಪವನ್ನಲ್ಲಗಳೆಯುವುದರಿಂದ ಪ್ರಯೋಜನವಾದರೂ ಏನು? ಎಲ್ಲ ವನ್ನೂ ಒಪ್ಪಿಕೊಂಡು ಅವಳನ್ನೂ ತನ್ನ ದಾರಿಗೆ ಎಳೆದುಬಿಡುವುದೇ ಉತ್ತಮೋಪಾಯ ಎಂದು ಹೇಳಿಕೊಂಡು,

"ನಾನೇನು ಮಾಡಲೇ ಗೌರೀ? ಬೇಕೆಂದೇ ನಾ ನಿನಗೆ ಮೋಸ ಮಾಡಲಿಲ್ಲ. ನಿನ್ನ ಕೊರಳಾಣೆ. ನನ್ನ ಮಾತು ನಂಬು. ಏನೋ ಒಂದು ಕೆಟ್ಟ ಗಳಿಗೆಯೊಳಗೆ ಕಾಲು ಜಾರಿದಿನಿ. ಸವಿಸವಿ ಮಾತಾಡಿ ನಿಮ್ಮವರು ನನ್ನ ಶೀಲ ಭಂಗಮಾಡಿಬಿಟ್ಟರು," ಎಂದು ಹೇಳುತ್ತಾ ಸೋಗಿನ ಕಣ್ಣೀರು ಪ್ರದರ್ಶಿಸಿದಳು ಲೀಲಾದೇವಿ. ತಾನು ಹೇಳುತ್ತಿದ್ದುದು ಸುಳ್ಳು ಎಂಬುದೇನೋ ಅವಳಿಗೆ ತಿಳಿದಿತ್ತು; ಅಂಥ ಸುಳ್ಳು ಹೇಳುವುದುಚಿತವಲ್ಲವೆಂಬುದೂ ಅವಳಿಗೆ ತಿಳಿದಿತ್ತು.

ಆದರೂ, ಆ ಬಿಕ್ಕಟ್ಟಿನ ಪ್ರಸಂಗದಿಂದ ಪಾರಾಗಲು ಅಂಥ ಸುಳ್ಳು ಹೇಳದೆ ಗತ್ಯಂತರವಿರಲಿಲ್ಲ.

ಲೀಲಾದೇವಿಯ ಕಣ್ಣುಗಳಲ್ಲಿ ನೀರೂರಿದುದನ್ನು ನೋಡುತ್ತಲೂ ಗೌರೀ ದೇವಿಯ ಕಣ್ಣುಗಳಲ್ಲಿನ ನೀರು ಮಾಯವಾಯಿತು. ನಡೆದುಹೋದುದರಲ್ಲಿ ತನ್ನ ಗೆಳತಿಯ ತಪ್ಪೇನೂ ಇಲ್ಲ, ಹಾಗಾದರೆ? ಎಲ್ಲ ಅಪರಾಧವೂ ತನ್ನ ದುಷ್ಟ ಗಂಡನದೇ ಆಗಿದೆ, ಹಾಗಾದರೆ? ಕಾಯಿಪಲ್ಯದ ಹೆಂಗಸರನ್ನೂ ಬಿಡದಿದ್ದ ಆ ಕಾಮುಕಪಶು ಲೀಲಾದೇವಿಯಂಥ ಸುಂದರ ಹೆಣ್ಣನ್ನು ಹಾಗೇ ಬಿಡುವುದೇ? ಇವಳು ಸತ್ಯವನ್ನೇ ಹೇಳುತ್ತಿರಬೇಕು. ತಿಳಿದೂ ತಿಳಿದೂ ತನ್ನ ಗೆಳತಿ ತನಗೆ ಮೋಸ ಮಾಡುವುದು ಅಸಾಧ್ಯವೇ ಸರಿ....

ಯೋಚಿಸುತ್ತಿದ್ದ ಹಾಗೇ ಗೌರೀದೇವಿಗೆ ಆ ಅನೈತಿಕ ಸಂಬಂಧದ ವಿಚಾರ ಸಮಗ್ರವಾಗಿ ಕೇಳಿ ತಿಳಿದುಕೊಳ್ಳಬೇಕೆಂಬ ವಿಚಿತ್ರ ಕುತೂಹಲವುಂಟಾಯಿತು.

“ಏನಾತೇ ಲೀಲಾ? ನಿನ್ನ ಕೆಡಿಸಿದ್ದಾದರೂ ಹ್ಯಾಂಗ ಅವರು?”

ಕೃತ್ರಿಮ ಕಂಬನಿಗಳನ್ನು ಮಿಡಿದುಕೊಂಡು ಮತ್ತೆ ಮತ್ತೆ ಬಿಸಿಯುಸಿರು ಬಿಡುತ್ತಾ ಲೀಲಾದೇವಿ ಹೇಳಿದಳು:

“ಅದನ್ನೆಲ್ಲಾ ಕೇಳಿ ಏನು ಮಾಡುತೀ ಬಿಡೇ. ಆದದ್ದು ಆಗಿಹೋತು.”

“ಇರಲಿ ಹೇಳೇ. ನನಗೂ ಗೊತ್ತಿರಬೇಕು ಎಲ್ಲಾ.”

“ನೋಡವ್ವಾ. ಹೇಳಲಿಕ್ಕೆ ನಂದೇನು ಅಡ್ಡಿಯಿಲ್ಲ. ಆದರೆ, ಇವನ್ನ ನೀ ನಿನ್ನ ಗಂಡನ ಹತ್ತಿರ ಮಾತಾಡಿ ಜಗಳ ಎಬ್ಬಿಸಬಾರದು.”

“ಇಲ್ಲ. ಹೇಳು.”

“ಹಾಂಗ ನೀ ಕೈಮ್ಯಾಲ ಕೈಹಾಕಿ ಮಾತುಕೊಟ್ಟರೆ ಮಾತ್ರ ಹೇಳು ತೀನಿ.”

ಗೌರೀದೇವಿ ಹಾಗೆ ವಚನವಿತ್ತ ತರುವಾಯ ಲೀಲಾದೇವಿ ಆರಂಭಿಸಿದಳು ತನ್ನ ಸುಳ್ಳು ಕಥೆಯನ್ನು.

“ನಿನ್ನ ಮದುವೆಗೂ ಮೊದಲಿನ ಮಾತು ಗೌರಾ. ನಮ್ಮವರಿಗೂ ನಿಮ್ಮ ವರಿಗೂ ಬಹಳ ಗೆಳೆತನ. ನಿಮ್ಮವರು ನಮ್ಮಲ್ಲಿಗೆ ಬಂದು ಕೂತು ಮಾತಾಡಿ ಚಾ ಕುಡಿದು ಉಂಡು ತಿಂದು ಹೋಗೂದು ನಡೆದಿತ್ತು. ನಮ್ಮವರಿಗೆ ನಿಮ್ಮವ ರೆಂದರೆ ಬಹಾಳ ವಿಶ್ವಾಸ. ನನಗೂ ಹಾಗೇ. ಅವರನ್ನು ನನ್ನ ಅಣ್ಣ ಅಂತಲೇ

ತಿಳಕೊಂಡಿದ್ದಿನಿ. ಮಧ್ಯಾಹ್ನ ಇವರು ಕೋರ್ಟಿಗೆ ಹೋದಾಗಲೂ ನಿಮ್ಮವರು ಬಂದು ಕೂಡುತಿದ್ದರು ಅಟ್ಟದ ಮ್ಯಾಲ. ನಾನೂ ಸರಳತನದಿಂದ ಅವರ ಸಂಗಡ ಮಾತಾಡುತಾ ಕೂಡುತಿದ್ದಿನಿ. ಒಂದಿನ ಮಧ್ಯಾಹ್ನ ಮನೆಯಲ್ಲಿ ಬ್ಯಾರೆ ಯಾರೂ ಇಲ್ಲದಿದ್ದಾಗ ಅವರು ಒಮ್ಮಿಂದೊಮ್ಮೆಲೆ ನನ್ನ ಹಿಡುಕೊಂಡುಬಿಟ್ಟರು. ಕೂಗಿಕೋಬೇಕಂದರೆ ನನಗೆ ಬಾಯೇ ಬರಲಿಲ್ಲ. ಅಲ್ಲದೆ, ಕೂಗಿ ಗದ್ದಲ ಮಾಡಿದರೆ ಮರ್ಯಾದೆ ಹೋಗೂದು ಹೆಂಗಸಾದ ನಂದೇ ಅಲ್ಲೇನು? ಅವರ ಕೈಯಿಂದ ಬಿಡಿಸಿಕೋಬೇಕು ಅಂತ ಒದ್ದಾಡಿದಿನಿ. ಚಲೋ ಪೈಲ್ವಾನನ ಹಾಗಿರುವ ಅವರಿಂದ ಬಿಡಿಸಿಕೊಳ್ಳೂದು ಹ್ಯಾಗಾದೀತು ನನ್ನಂಥಾ ಹೆಣ್ಣು ಹೆಂಗಸು?"

"ಮುಂದೆ? ಮುಗಿದೇ ಹೋತೇನು?" ಎಂದಳು ಗೌರೀದೇವಿ. ಅಂದು ನಡೆದಿರಬಹುದಾದ ದೃಶ್ಯವನ್ನು ಕಲ್ಪಿಸಿಕೊಳ್ಳುತ್ತಾ ವಿಚಿತ್ರವಾದ ರೀತಿಯಲ್ಲಿ ಪುಲಕಗೊಳ್ಳುತ್ತಿತ್ತು ಅವಳ ಮನಸ್ಸು.

"ಆತಲ್ಲ ಗೌರಾ. ಆಗೂದು ಆಗಿಹೋತು. ಎಲ್ಲಾ ತೀರಿದ ಮ್ಯಾಲ ನಿಮ್ಮವರು ನಾಚಿಕೆಯಿಲ್ಲದವರಂತೆ ನಕ್ಕರು...."

"ನೀನೂ ನಕ್ಕಿರಬೇಕಲ್ಲ?" ಎಂದು ನಗುತ್ತಲೇ ಕೇಳಿದಳು ಗೌರೀದೇವಿ.

ಇರುವೆ ಕುಟುಕಿದ ಹಾಗಾಯಿತು ಲೀಲಾದೇವಿಗೆ. ಆದರೂ ಸಾವರಿಸಿ ಕೊಳ್ಳುತ್ತಾ ಹೇಳಿದಳು:

"ನನಗೆ ಹ್ಯಾಗಾದರೂ ನಗು ಬಂದೀತೇ? ಅವರನ್ನ ಕಪಾಳಿಗೆ ಹೊಡೆಯುವ ಹಾಗಾಗಿತ್ತು. ಆದರೂ ಸಿಟ್ಟು ತಡಕೊಂಡು ಸುಮ್ಮನಾದಿನಿ."

"ಖರೇ ಹೇಳಬೇಕು ಅಂದರೆ ನಿನಗೆ ಸಿಟ್ಟೇ ಬಂದಿರಲಿಲ್ಲ ಅಂತ ನನಗನಿಸುತದೆ."

"ಹಾ?"

"ಹೌದು. ನಿನಗೆ ಸಿಟ್ಟು ಬಂದದ್ದು, ಅವರಿಂದ ತಪ್ಪಿಸಿಕೋಬೇಕಂತ ನೀ ಒದ್ದಾಡಿದ್ದು ಎಲ್ಲಾ ಸುಳ್ಳು. ನಾ ನಂಬುವದಿಲ್ಲ. ನನಗೆ ಗೊತ್ತಿಲ್ಲೇನು ನಮ್ಮವರ ಮಂತ್ರ ಎಂಥಾದ್ದು ಅನ್ನೂದು? ಎಂಥಾ ಪತಿವ್ರತೆಯನ್ನೂ ವಶ ಮಾಡಿಕೊಳ್ಳುವ ಗಂಡಸು ಅವರು...." ಎಂದಳು ಗೌರೀದೇವಿ, ವಿಲಕ್ಷಣವಾದ ಹೆಮ್ಮೆ ಬೆರೆತ ಧ್ವನಿಯಲ್ಲಿ.

ಆ ಮಾತಿಗೆ ಪ್ರತಿ ಹೇಳಲು ಲೀಲಾದೇವಿ ಸಮರ್ಥಳಾಗಲಿಲ್ಲ.

"ಹೊತ್ತಾಗುತಾ ಬಂತು ಏಳು. ಹೊರಡೋಣ," ಎಂದು ಮೇಲಕ್ಕೆದ್ದು ಬಿಟ್ಟಳು.

ಮತ್ತೊಂದು ಸಾಯಂಕಾಲ ಅವರಿಬ್ಬರೂ ಕೂಡಿ ವಾಯುವಿಹಾರ ಹೊರಟಿದ್ದಾಗ ಮತ್ತೆ ಅದೇ ವಿಷಯದ ಪ್ರಸ್ತಾಪ ಬಂದು,

"ನಾವು ಮೊನ್ನೆ ಮಾತಾಡಿದ್ದರ ಬಗ್ಗೆ ನಿನ್ನ ಗಂಡನಿಗೇನಾದರೂ ಕೇಳಿದಿಯೇನೇ ಮತ್ತೆ?" ಎಂದಳು ಲೀಲಾದೇವಿ.

"ಕೇಳಿಯಾದರೂ ಏನುಪಯೋಗ ಬಿಡೇ. ಸುಮ್ಮನೆ ಮನಸ್ಸು ಕೆಡಿಸಿ ಕೊಳ್ಳೂದೇ. ಹೌದಲ್ಲೋ?"

"ಈಗ ನೀ ಜಾಣೆಯಾಗುತಾ ಇದ್ದೀ ನೋಡು. ಈಗ ನೀ ಪಟ್ಟಣದ ಮಹಿಳೆಯಾಽ," ಎಂದು ನಗುತ್ತ ನುಡಿದಳು ಲೀಲಾದೇವಿ.

"ಏನಾದೆನೋ ದೇವರಿಗೇ ಗೊತ್ತು. ಈಗ ಈ ಸಂಕಟ ತಡಿಯೂದು ಹ್ಯಾಗೆ ಹೇಳು. ನಾಲ್ಕು ದಿನದಿಂದ ನೋವು ಸಹಿಸಲಿಕ್ಕೂ ಆಗಲೊಲ್ಲದು."

"ಅದಕ್ಯಾಕೆ ಅಷ್ಟು ಚಿಂತೆ ಮಾಡುತ್ತೀಯೇ? ಆಗಲೇ ಹೇಳಬಾರ ದಾಗಿತ್ತೇನು ನನಗೆ? ನನಗೂ ಆಗಾಗ ನೋವು ಆಗುತದೆ. ಡಾಕ್ಟರ ಹತ್ತಿರ ಹೋಗಿ ಒಂದು ಇಂಜಕ್ಶನ್ ತಗೊಂಡರೆ ಹೋಗಿಬಿಡುತದೆ."

"ಇಂಥಾ ರೋಗಕ್ಕೆ ಔಷಧಾ ತಗೊಳ್ಳೂದಕ್ಕೆ ಹೋಗೂದಾದರೂ ಹ್ಯಾಗವ್ವಾ?"

"ಅದರಾಗೇನದೆಯೇ? ನಾನೂ ಹೋಗುತೀನಲ್ಲ, ಇನ್ನೂ ಎಷ್ಟೋ ಹೆಂಗಸರೂ ಹೋಗುತಾರಲ್ಲ? ನಮ್ಮ ಇಂದ್ರಗೇರಿ ಡಾಕ್ಟರು ಅಂದರೆ ಈ ರೋಗಕ್ಕೆ ಔಷಧಾ ಕೊಡೂದರಾಗ ಹೆಸರಾದವರು. ದೊಡ್ಡ ದೊಡ್ಡ ಮನೆತನ ಗಳ ಹೆಂಗಸರೆಲ್ಲಾ ಬರೂದು ಅವರ ಹತ್ತರವೇ. ನಿಮ್ಮವರೂ ಅವರೂ ಬಹಳ ಗೆಳೆಯರು. ನಿನಗೆ ಗೊತ್ತಿಲ್ಲೇನು?"

"ಗೊತ್ತಿರದೇ ಏನು? ನಮ್ಮ ಮನೆಗೂ ಬಂದಿದ್ದರಲ್ಲ ಡಾಕ್ಟರರು ನಾಲ್ಕೈದು ಸಾರಿ."

"ಅವರ ಸಂಗಡ ಮಾತಾಡಿದಿಯೋ ಇಲ್ಲಾ, ಹಳ್ಳೀ ಹೆಂಗಸಿನ ಹಾಗೆ ಅಡಿಗೀಮನಿಯಾಗ ಅಡಗಿ ಕೂತಿದ್ದಿಯೋ?"

"ನಾ ಅಡಗಿ ಕೂತರೂ ನಮ್ಮವರು ಬಿಡುತಾರೇನು? ಮನೆಗೆ ಬಂದವರ ಮುಂದೆಲ್ಲಾ ಕರದು ಗುರುತು ಮಾಡಿಕೊಡುತಾರೆ."

"ಹೌದು. ಅದು ನಾಗರಿಕ ಶಿಷ್ಟಾಚಾರ. ಗಂಡಸರೂ ಹೆಂಗಸರೂ ಸಮಸಮವಾಗಿ ಕೂಡಿ ಕೂತು ಮಾತಾಡಬೇಕು, ಹರಟಿ ಹೊಡೀಬೇಕು...."

"ಹೀಂಗೆಲ್ಲಾ ಮಾಡಿಯೇ ನೀ ಕೆಟ್ಟುಹೋದಿ."

"ಕೆಟ್ಟು ಹೋಗೂದು ಅನ್ನೂದಕ್ಕಾದರೂ ಏನು ಅರ್ಥ ಗೌರಾ?"

ಆ ಸವಾಲನ್ನು ಎದುರಿಸಲಾರದೆ ಒಂದು ಗಳಿಗೆ ಸುಮ್ಮನೆ ಯೋಚಿಸುತ್ತಿದ್ದು ಅನಂತರ ನಿದಾನವಾಗಿ ಮಾತನಾಡಿದಳು ಗೌರೀದೇವಿ:

"ಮಾಡಿಕೊಂಡ ಗಂಡನ್ನ ಬಿಟ್ಟು ಇನ್ನೊಬ್ಬನ್ನ ಕೂಡಿದರೆ ಕೆಟ್ಟು ಹೋದ ಹಂಗಾಗಲಿಲ್ಲೇನು?"

"ಕೆಟ್ಟು ಹೋದದ್ದು ಏನು ಅಂತೀಸಿ."

"ಏನು ಅಂದರೆ ನಮ್ಮ ಶೀಲ, ನಮ್ಮ ಪಾತಿವ್ರತ್ಯ."

ಲೀಲಾದೇವಿ ಗಟ್ಟಿಯಾಗಿ ನಕ್ಕಳು. ನಗುನಗುತ್ತಲೇ ಹೇಳಿದಳು:

"ಸೀನಿರೂದು ಯಾವ ಯುಗದಾಗ ಗೌರಾ? ಇದು ಕಲಿಯುಗ. ತ್ರೇತಾಯುಗವಲ್ಲ. ಪಾತಿವ್ರತ್ಯ ಅಂದರಾದರೂ ಏನಂತ ತಿಳಿದಿದ್ದೀ? ರಾಮನಂಥಾ ಗಂಡ ಇದ್ದರೆ ಹೆಂಗಸು ಸೀತೆಯಂತೆ ಪತಿವ್ರತೆಯಾಗಿರಬಹುದು ಅನ್ನು, ರಾವಣನಂಥಾ ಗಂಡ ಇದ್ದಾಗಲೂ ಅವನ ಹೆಂಡತಿ ಮಾತ್ರ ಪತಿವ್ರತೆಯಾಗಿರಬೇಕಂತ ಹೇಳೂದು ಮೂರ್ಖರ ಮಾತು. ಗಂಡಸು ಮಾತ್ರ ಮಜಾ ಮಾಡಬೇಕು. ಹೆಂಗಸು ಮಾಡಬಾರದು ಅಂದರೆ ಯಾವ ನ್ಯಾಯ? ಯಾವ ಕಾಯದೆ? ಇವತ್ತು ಇಂಥಾ ನೇಮಗಳಿಗೆ ಏನೂ ಕಿಮ್ಮತ್ತು ಉಳಿದಿಲ್ಲ ಗೌರಾ. ಗಂಡಸರು ದುರಾಚಾರ ಮಾಡಿದರೆ ಅವರ ಹೆಂಡರೂ ಮಾಡುತಾರೆ. ಈಗ ನಮ್ಮವರನ್ನೇ ತೆಗೆದುಕೋ. ಮನೆಯೊಳಗೆ ಒಬ್ಬ ಹೆಂಡತಿಯಿದ್ದರೂ ಅವರು ನನ್ನ ಮದುವೆಮಾಡಿಕೊಂಡರು. ಇವರನ್ನೇ ಆಗಬೇಕಂತ ನಾನೇನು ತಪಸ್ಸು ಮಾಡಿರಲಿಲ್ಲ. ತಂದೆತಾಯಿಗಳು ಇವರಿಗೆ ಕಟ್ಟಿದರು. ಮದುವೆಯಾದಿನಿ. ಇವರ ಮನೆಗೆ ಬಂದು ನೋಡಿದರೆ ಇವರದೆಲ್ಲಾ ಬರೀ ಭಂಡತನ. ಒಬ್ಬಳೇ ಇಬ್ಬಳೇ – ನೂರಾರು ಸೂಳೆಯರ ಸಹವಾಸ ಮಾಡಿ ಇವರ ಶಕ್ತಿಯೆಲ್ಲಾ ಹಾಳಾಗಿ ಹೋಗಿದೆ. ಇನ್ನು ಇವರಿಂದ ನನಗೇನು ಸುಖ ಸಿಗಬೇಕು ಹೇಳು.

ನಾನು ಮನೆಗೆ ಬಂದರೂ ಕೂಡಾ ಇವರು ಹೊರಚಾಳಿ ನಿಲ್ಲಿಸಲಿಲ್ಲ-ಎಲ್ಲೆಲ್ಲಿಯವೋ ರೋಗ ತಂದು ನನಗೂ ಅಂಟಿಸಿದರು. ಇದನ್ನೆಲ್ಲಾ ಸುಮ್ಮನೇ ತಾಳಿಕೊಂಡು ಪತಿವ್ರತೆಯಾಗಿರಬೇಕು ಅಂದರೆ ಶಕ್ಯವಾದೀತೇನೇ ಗೌರಾ ?"

ಗೌರೀದೇವಿ ಮರುಮಾತನಾಡಲಿಲ್ಲ. ಅವಳ ಮನಸ್ಸಿನಲ್ಲಿಯೂ ಅದೇ ಬಗೆಯ ವಿಚಾರಗಳ ಗೊಂದಲಕ್ಕಾರಂಭವಾಗಿತ್ತು.

ಅವಳು ಇಂಥ ಮನಃಸ್ಥಿತಿಯಲ್ಲಿರುವಾಗಲೇ ಡಾಕ್ಟರ್ ಇಂದ್ರಗೇರಿಯವರು ಉಪಾಯವಾಗಿ ಬಲೆ ಬೀಸಿ ಅವಳನ್ನು ವಶಪಡಿಸಿಕೊಂಡರು.

## ಆರು... ಡಾ. ಇಂದ್ರಗೇರಿ

ಗೌರೀದೇವಿಯಂಥ ಹೆಣ್ಣುಮಕ್ಕಳ ರೋಗಗಳನ್ನು ಗುಣಪಡಿಸುವುದರಲ್ಲಿ ನಿಪುಣರೆಂದು ಪ್ರಖ್ಯಾತರಾಗಿದ್ದ ಡಾಕ್ಟರ್ ಇಂದ್ರಗೇರಿಯವರು ತಮ್ಮ ಸ್ತ್ರೀರೋಗಿಗಳ ದೇಹ ಮನಸ್ಸು ಹೃದಯಗಳನ್ನೂ ವಶಪಡಿಸಿಕೊಳ್ಳುವುದರಲ್ಲಿಯೂ ನುರಿತವರೆಂದು ಪ್ರಸಿದ್ಧಿ ಪಡೆದಿದ್ದರು. "ಸಾವಿರ ಅಹಲ್ಯೆಯರ ಸವಿಕಂಡ ಇಂದ್ರರಾಜರಪ್ಪ ನಮ್ಮ ಇಂದ್ರಗೇರಿಯವರು!" ಎಂಬುದಾಗಿ ಅವರ ಕಂಪೌಂಡರ್, ಅರ್ಧ ಹೆಮ್ಮೆಯಿಂದಲೂ ಅರ್ಧ ಉಪಹಾಸದಿಂದಲೂ ಹೇಳಿಕೊಳ್ಳುವುದು ವಾಡಿಕೆಯಾಗಿತ್ತು. ಅದು ಅತಿಶಯೋಕ್ತಿಯೂ ಆಗಿರಲಿಲ್ಲ. ಇಂದ್ರಗೇರಿಯವರು ನಿಜವಾಗಿಯೂ ಅಭಿನವ ಇಂದ್ರನಂತಿದ್ದರು. ಅವರು ರುಚಿ ನೋಡಿದ ಹೆಣ್ಣುಗಳ ಸಂಖ್ಯೆಯಿಷ್ಟೇ ಎಂದು ನಿರ್ದಿಷ್ಟವಾಗಿ ಹೇಳುವುದೂ ಕಷ್ಟದ ಮಾತಾಗಿತ್ತು.

ಪಂಚಪಾಂಡವರಿಗೆ ಬೆಂಬಲವಾಗಿ ಶ್ರೀಕೃಷ್ಣನಿದ್ದ ಹಾಗೆ ಬಸಲಿಂಗನ ಆರುಜನ ವಕೀಲರ ಗುಂಪಿನ ಪಂಚಪ್ರಾಣದ ಹಾಗಿದ್ದರು ಇಂದ್ರಗೇರಿಯವರು. ಡಾಕ್ಟರರ ಸಲಹೆ ಪಡೆದುಕೊಳ್ಳದೆ ಈ ಆರು ಜನ ವಕೀಲರೂ ಯಾವ ಕೆಲಸಕ್ಕೂ ಕೈಹಾಕುತ್ತಿರಲಿಲ್ಲ. ಡಾಕ್ಟರರೂ ಕೂಡಾ ಮಹತ್ವದ ವಿಷಯಗಳಲ್ಲಿ ತಮ್ಮ ಈ ಮಿತ್ರರ ಸಲಹೆ ಪಡೆಯದಿರುತ್ತಿರಲಿಲ್ಲ.

ಡಾಕ್ಟರರಿಗೆ ಈಗ ಐವತ್ತು ವರ್ಷ ವಯಸ್ಸೆಂದರೆ ಯಾರೂ ನಂಬುವ ಹಾಗಿರಲಿಲ್ಲ. ಅಂಥ ಗಟ್ಟಿಮುಟ್ಟಾದ ದೇಹ ಅವರದು. ಅವರ ಮೈ ಬಣ್ಣ ಕರಿಯದಾಗಿರದಿದ್ದಲ್ಲಿ ಓರೆಕೋರೆ ನಗರದಲ್ಲೆಲ್ಲ ಅವರೇ ಸುಂದರಪುರುಷರೆಂದು ಹೆಸರುಪಡೆಯಬಹುದಾಗಿತ್ತು. ಮಾಟವಾದ ನಿಲುವು. ತಿದ್ದಿ ತೀಡಿ ಕಡೆದು ಮಾಡಿದಂತಿದ್ದ ಅವಯವಗಳು. ಕಣ್ಣುಗಳಲ್ಲಿನ ವಿಶಿಷ್ಟವಾದ ಕಾಂತಿಯಿಂದಾಗಿ

ಸದಾ ಪ್ರಸನ್ನವಾಗಿರುತ್ತಿದ್ದ ಮುಖ. ಯಾವಾಗಲೂ ಮುಗುಳ್ನಗುವನ್ನೇ ಚಿಮ್ಮಿಸುವ ಮೋಹಕವಾದ ತುಟಿ. ಗೆಬರ್ಡೀನ್ ಸೂಟ್ ಧರಿಸಿ ಡಾಕ್ಟರರು ಹೊರಟರೆಂದರೆ ಮೂವತ್ತು ವರ್ಷಗಳ ಯುವಕನೊಬ್ಬನನ್ನು ನೋಡಿದಂತೆ ಭಾಸವಾಗುತ್ತಿತ್ತು ಜನರಿಗೆ. ಸಂಭಾಷಣೆಯ ಕಲೆಯಲ್ಲಿಯೂ ಅವರು ಪಳಗಿದವರು. ಮಾತಿನ ರೀತಿಯಿಂದಲೇ ಜನರನ್ನು ಮರುಳುಗೊಳಿಸುವ ಮಂತ್ರಗಾರಿಕೆಯನ್ನೂ ಅವರು ಸಾಧಿಸಿಕೊಂಡಿದ್ದರು. ಅಂತೆಯೇ, ದೀಪದ ಸುತ್ತುಮುತ್ತಲು ಪತಂಗಗಳು ಸುಳಿಯುವಂತೆ ಡಾಕ್ಟರರ ಸುತ್ತುಮುತ್ತಲೂ ಹೆಂಗಸರು ಸುಳಿಯುತ್ತಿದ್ದರು.

ಡಾಕ್ಟರರು ಎಲ್.ಸಿ.ಪಿ.ಎಸ್. ಪದವಿ ಪಡೆಯುವವರೆಗೂ ಅವರಿಗೆ ಹೆಣ್ಣಿನ ವ್ಯಸನವಿರಲಿಲ್ಲವಂತೆ. ಬಡವರ ಮನೆಯಲ್ಲಿ ಹುಟ್ಟಿ, ಕಷ್ಟಪಟ್ಟು ಓದಿ ಎಲ್ಲ ಪರೀಕ್ಷೆಗಳಲ್ಲೂ ಉತ್ತಮದರ್ಜೆಯಲ್ಲಿ ತೇರ್ಗಡೆ ಹೊಂದುತ್ತ ಬಂದು ಕೊನೆಗೆ ಡಾಕ್ಟರ್ ಪದವಿಯನ್ನು ಪಡೆದು ಇಪ್ಪತ್ತೈದು ವರ್ಷಗಳ ಹಿಂದೆ ಓರೆಕೋರೆ ನಗರದ ಸರಕಾರಿ ಆಸ್ಪತ್ರೆಯಲ್ಲಿ ಕೆಲಸಕ್ಕೆ ಸೇರಿದಾಗ ಅವರಿಗೆ ಯಾವ ದುಶ್ಚಟವೂ ಇರಲಿಲ್ಲ. ಅವರು ವಾಸವಾಗಿದ್ದ ಸರಕಾರೀ ಮನೆಗೆ ವಧುಗಳ ಪಾಲಕರು ಹಿಂಡುಹಿಂಡಾಗಿ ಬಂದು ಕಾಡಿಸಿ ಪೀಡಿಸಿದರೂ ಡಾಕ್ಟರರು ಮದುವೆಯ ಅವಸರ ಮಾಡಲಿಲ್ಲ. ನೂರಾರು ವಧುಗಳನ್ನು ನೋಡಿದರೂ ಒಬ್ಬಳನ್ನೂ ಅವರು ಒಪ್ಪಲಿಲ್ಲ. ಅದಕ್ಕೊಂದು ಪ್ರಬಲವಾದ ಕಾರಣವೂ ಇದ್ದೇ ಇತ್ತು.

ತಮ್ಮ ಜೀವನದಲ್ಲಿ ಮೊಟ್ಟ ಮೊದಲ ಬಾರಿ ಡಾಕ್ಟರರು ಮದನ ಬಾಣಗಳಿಂದ ಗಾಸಿಕೊಂಡಿದ್ದರು!

ಅವರ ಬಹ್ಮಚಾರೀ ಹೃದಯವನ್ನು ಕದ್ದುಕೊಂಡವಳು – ಅವರ ಮನೆಯ ಹತ್ತಿರದಲ್ಲೇ ಇದ್ದ, ಅದೇ ಆಸ್ಪತ್ರೆಯಲ್ಲಿ ನರ್ಸ್ ಆಗಿ ಕೆಲಸಮಾಡುತ್ತಿದ್ದ ಸೇವಂತೀಬಾಯಿ! ಅಸಂಖ್ಯಾತ ಸ್ತ್ರೀಯರ ಸಹವಾಸ ಸುಖ ಸವಿದು ಜೀವನದ ಕೊನೆಯ ಘಟ್ಟದ ಗಡಿಯನ್ನು ತಲಪಿದ ಈ ದಿನಗಳಲ್ಲೂ ಅವರು ಸೇವಂತೀಬಾಯಿಯನ್ನು ಮರೆತಿರಲಿಲ್ಲ. ಮರೆಯಲು ಅಸಾಧ್ಯವಾದಂಥ ಪ್ರೇಮಾನುಭವವದು.

ಸೇವಂತೀಬಾಯಿಯ ಅನುರಾಗಕ್ಕಾಗಿ ಡಾಕ್ಟರು ಪ್ರಾಣವನ್ನೂ

ಅರ್ಪಿಸಲು ಸಿದ್ಧರಾಗಿದ್ದರು. ಅವಳು ಮಾತ್ರ ಇವರತ್ತ ದೃಷ್ಟಿ ಹೊರಳಿಸಿರಲಿಲ್ಲ. ಪಾಪ. ಅವಳಾದರೂ ಏನು ಮಾಡಿಯಾಳು? ಇಂದ್ರಗೇರಿಯವರು ಆ ಆಸ್ಪತ್ರೆಗೆ ಬರುವುದಕ್ಕೆ ಮೊದಲೇ ಅಲ್ಲಿ ಸರ್ಜನರಾಗಿದ್ದ ದೇಶಪಾಂಡೆಯವರಿಗೆ ಅವಳು ತನ್ನ ಮನಸ್ಸು ಹೃದಯಗಳೆರಡನ್ನೂ ಅರ್ಪಿಸಿಬಿಟ್ಟಿದ್ದಳು. ಕೆಲದಿನಗಳಲ್ಲಿ ಅವರ ಮದುವೆಯೂ ನಡೆಯುವುದಿತ್ತು.

ಆ ಸಂಗತಿಯನ್ನೆಲ್ಲ ತಿಳಿದೂ ಇಂದ್ರಗೇರಿಯವರು ಅವಳನ್ನೇ ಬಯಸಿದರೆ ಅದು ಯಾರ ತಪ್ಪು? ತಮ್ಮ ತಪ್ಪಂತೂ ಖಂಡಿತವಾಗಿಯೂ ಅಲ್ಲವೆಂದೇ ಇಂದ್ರಗೇರಿಯವರು ಎದೆ ತಟ್ಟಿ ಹೇಳಿಕೊಳ್ಳುತ್ತಿದ್ದರು. "ನೂರಾರು ವಧುಗಳನ್ನು ನೋಡಿದರೂ ಮರುಳಾಗದಿದ್ದ ನನ್ನ ಮನಸ್ಸು ಸೇವಂತಿಯನ್ನೇ ಕಂಡು ಮಾರುಹೋದುದರಲ್ಲಿ ನನ್ನ ತಪ್ಪೇನು? ಇದೆಲ್ಲಾ ವಿಧಿಯ ಆಟ. ಮನ್ಮಥನ ಚಮತ್ಕಾರ! ಸೇವಂತಿ ನನಗೆ ಸಿಕ್ಕದಿದ್ದರೆ ನಾನು ಬದುಕುವ ಹಾಗೇ ಇಲ್ಲ ಅನ್ನಿಸುತ್ತದೆ."

ಹಾಗೆ ಹೇಳಿಕೊಳ್ಳುತ್ತಾ ಇಂದ್ರಗೇರಿಯವರು ಅವಳನ್ನು ವಶಪಡಿಸಿ ಕೊಳ್ಳಲು ಬಗೆಬಗೆಯಾಗಿ ಯತ್ನಿಸಿದರು. ಅವಳಿಗೆ ಕಾಣಿಕೆಗಳನ್ನು ಕಳು ಹಿಸಿದರು; ಅವಳು ಸ್ವೀಕರಿಸಲಿಲ್ಲ. ಆಸ್ಪತ್ರೆಯಲ್ಲಿ ಯಾವುದಾದರೊಂದು ನೆಪದಿಂದ ಅವಳ ಮೈ ಕೈ ಮುಟ್ಟಲು ಯತ್ನಿಸಿದರು; ಅವಳು ಉಪಾಯವಾಗಿ ತಪ್ಪಿಸಿಕೊಂಡಳು. ತಮ್ಮ ಹೃದಯದ ಅಳಲನ್ನೆಲ್ಲ ತೋಡಿಕೊಂಡು ಅವಳಿಗೆ ದೀರ್ಘಕಾಗದಗಳನ್ನು ಬರೆದರು; ಅವಳು ಅವುಗಳನ್ನು ಓದಿ ನೋಡುವ ತೊಂದರೆಯನ್ನು ತೆಗೆದುಕೊಳ್ಳದೆ ಹರಿದು ಬಿಸುಟಳು.

ಸೊಕ್ಕಿದ ಹಕ್ಕಿಯಂತೆ ನೆಗೆಯುತ್ತಿದ್ದ ತಮ್ಮ ಪ್ರೇಮೋದ್ವೇಗವನ್ನು ಅಂಕೆಯಲ್ಲಿಟ್ಟುಕೊಳ್ಳುವುದು ಅಸಾಧ್ಯವಾಗುತ್ತಲೂ ಇಂದ್ರಗೇರಿಯವರು ಕೊನೆಯ ಉಪಾಯ ಯೋಜಿಸಲು ನಿರ್ಧರಿಸಿ ಒಂದು ಸಾಯಂಕಾಲ ಎಂಟು ಎಂಟೂವರೆ ಗಂಟೆಯ ವೇಳೆಗೆ, ಸೇವಂತೀಬಾಯಿ ಒಬ್ಬಳೇ ತನ್ನ ಮನೆಯಲ್ಲಿದ್ದ ಸಂಧಿ ಸಾಧಿಸಿ ಅಲ್ಲಿಗೆ ನುಗ್ಗಿದರು.

"ಇಂಥಾ ವೇಳೆಯೊಳಗೆ ಯಾಕೆ ಬಂದಿರಿ?" ಎಂದು ಸ್ಪಷ್ಟವಾಗಿ ಕೇಳಿದಳು ಸೇವಂತೀಬಾಯಿ.

"ಯಾಕೆ? ಬಂದರೇನಾಯ್ತು? ನಾನೇನು ಅಪರಿಚಿತನೇ?" ಎನ್ನುತ್ತಾ

ತಮ್ಮ ಮುಗುಳ್ನಗುವಿನ ಮೋಹಕತೆಯನ್ನು ಚಿಮ್ಮಿಸುತ್ತಾ ಅವಳ ಬಳಿಸಾರಿದರು ಡಾಕ್ಟರು.

"ಇದೆಲ್ಲಾ ಚಲೋದಲ್ಲ ಡಾಕ್ಟರ್. ನಾನು ಹೆಣ್ಣು ಹೆಂಗಸು ಒಬ್ಬಾಕೆಯೇ ಇರುವಾಗ ನೀವು ಹೀಗೆ ಸಲಿಗೆ ಮಾಡುವುದು ಚಲೋದಲ್ಲ. ದಯಮಾಡಿ ಹೊರಟುಹೋಗಿರಿ," ಎಂದು ಹೇಳುತ್ತಾ ಅವಳು ದೂರ ಸರಿದಳು.

"ಇವೊತ್ತು ಅವಳನ್ನು ಬಿಡಬಾರದು. ಪ್ರಾಣಹೋದರೂ ಚಿಂತೆಯಿಲ್ಲ," ಎಂದು ಗಟ್ಟಿಮಾಡಿಕೊಂಡೇ ಬಂದಿದ್ದ ಡಾಕ್ಟರರು ಅಷ್ಟಕ್ಕೇ ಅಲ್ಲಿಂದ ಹೊರಡುವುದುಂಟೇ?

"ನೀವು ಒಬ್ಬರೇ ಇರುವಿರಂತ ಕನಿಕರ ಬಂದೇ ನನ್ನ ಕಂಪನಿಯನ್ನ ಕೊಡುವದಕ್ಕೆ ಬಂದೀನಿ ನಾನು. ಹೀಗ್ಯಾಕೆ ಮಾಡ್ತೀರಿ ಸೇವಂತೀಬಾಯಿಾ, ಅಶಿಕ್ಷಿತ ಹೆಂಗಸರ ಹಾಗೆ? ನಾನೂ ಎಷ್ಟೋ ನರ್ಸುಗಳನ್ನು ನೋಡೀನಿ. ಎಲ್ಲರೂ ಸೋಶಿಯಲ್ ಆಗಿದ್ದು ಫ್ರೀಯಾಗಿ ಲೈಫ್ ಎಂಜಾಯ್ ಮಾಡುತಾರೆ. ಇದರಲ್ಲೇನು ಅಂಥ ಮಹತ್ವವಿದೆ ಅಂತ ಇಷ್ಟು ಗಾಬರಿಯಾಗುತ್ತೀರಿ?" ಎನ್ನುತ್ತಾ ಅವಳ ಕೈಹಿಡಿಯಲು ಮುಂದೆ ಹೋದರು ಡಾಕ್ಟರು.

ಅವರ ಕೈಯಿಂದ ಹೇಗೆ ತಪ್ಪಿಸಿಕೊಳ್ಳುವುದೆಂದು ಒಂದುಕ್ಷಣ ಯೋಚಿಸುತ್ತಿದ್ದು ಅನಂತರ ಅವಳು ಪ್ರಸಂಗಾವಧಾನ ತಂದುಕೊಂಡು, ಮುಖದ ಮೇಲೆ ಮುಗುಳ್ನಗುವನ್ನು ತರಲು ಯತ್ನಿಸಿದಳು, ಯಶಸ್ವಿಯಾದಳು, ಕುರ್ಚಿಯ ಕಡೆ ಕೈತೋರಿಸಿ ಡಾಕ್ಟರನ್ನು ಕುರಿತು ಹೇಳಿದಳು:

"ಸ್ವಲ್ಪ ಕೂತಾದರೂ ಕೂಡಬಾರದೇ? ಏನವಸರ? ಎಂದೂ ಹೆಣ್ಣನ್ನ ಕಂಡೇ ಇರದವರಂತೆ ಮಾಡುತೀರಲ್ಲ!"

ಅರ್ಧ ಯುದ್ಧವನ್ನು ಗೆದ್ದಂತಾಯಿತೆಂದು ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತಾ ಇಂದ್ರಗೇರಿಯವರು ಅವಳು ತೋರಿಸಿದ ಕುರ್ಚಿಯಲ್ಲಿ ದೇಹ ಚೆಲ್ಲಿದರು.

"ನೀವು ನಂಬಿದರೆ ನಂಬಬಹುದು, ಬಿಟ್ಟರೆ ಬಿಡಬಹುದು. ಆದರೆ, ನಿಜವಾಗಿ ನಾನು ಇದುವರೆಗೂ ಯಾವ ಹೆಣ್ಣಿಗೂ ಮರುಳಾಗಿರಲಿಲ್ಲ ಸೇವಂತೀಬಾಯಿಾ. ನನ್ನ ಮನಸ್ಸು ಕದ್ದ ಮೊದಲನೇ ಬ್ಯೂಟೀ ಅಂದರೆ ನೀವೇ."

ಡಾಕ್ಟರ ಆ ಮಾತಿಗೆ ಪ್ರತಿಯಾಗಿ ಮತ್ತೆ ಮುಗುಳ್ನಕ್ಕು ಸೇವಂತೀಬಾಯಿ

ಚಹಾ ಮಾಡಿಕೊಂಡು ಬರುವ ನೆಪದಿಂದ ಅಡುಗೆಯ ಕೊಟಡಿಯೊಳಗೆ ಜಾರಿಕೊಂಡಳು. ಹಾಗೇ ಹಿತ್ತಿಲು ಬಾಗಿಲಿನಿಂದ ನೆರೆಮನೆಗೆ ಹೋಗಿ ಅವಸರದಿಂದ ಚೀಟಿಯೊಂದನ್ನು ಗೀಚಿ ಸರ್ಜನ್ ದೇಶಪಾಂಡೆಯವರಿಗೆ ತಕ್ಷಣ ತಲಪಿಸುವ ವ್ಯವಸ್ಥೆ ಮಾಡಿ ಮನೆಗೆ ಹಿಂತಿರುಗಿ ಬಂದು ಸ್ಟವ್ ಹೊತ್ತಿಸುತ್ತಾ ಕುಳಿತಳು. ಅದಾವುದರ ಕಲ್ಪನೆಯೂ ಇರದ ಡಾಕ್ಟರ್ ಇಂದ್ರಗೇರಿಯವರು ಕಾಲುಗಳನ್ನು ನೀಳವಾಗಿ ಚಾಚಿ ಸೇವಂತೀಬಾಯಿಯ ಮಿಲನಸುಖವನ್ನು ಕುರಿತು ಕನಸು ಕಾಣುತ್ತ ನೆಮ್ಮದಿಯಿಂದ ಕುಳಿತಿದ್ದರು.

ಹೆಣ್ಣನ್ನು ವಶಪಡಿಸಿಕೊಳ್ಳಲು ನಡೆಯುವ ಸ್ಪರ್ಧೆ ಎಲ್ಲ ಬಗೆಯ ಸ್ಪರ್ಧೆಗಳಲ್ಲೂ ಹೆಚ್ಚು ತೀವ್ರತರವಾದುದು. ಈ ಸ್ಪರ್ಧೆಯಲ್ಲಿ ಭಾಗವಹಿಸಿದ ಭಟರು ಪರಸ್ಪರರನ್ನು ಪೂರ್ತಿಯಾಗಿ ನಾಶಗೊಳಿಸಲು ಹವಣಿಸುತ್ತಾರೆ. ಎದುರಾಳಿ ಜೀವದಿಂದುಳಿದುಕೊಂಡ ಪಕ್ಷಕ್ಕೆ ಒಂದಿಲ್ಲೊಂದು ದಿನವಾದರೂ ಅವನಿಂದ ತೊಂದರೆಯುಂಟಾಗುವ ಸಂಭವವಿರುವುದಷ್ಟೆ. ಅವನನ್ನೇ ಮಣ್ಣುಗಾಣಿಸಿ ಬಿಟ್ಟರೆ ಚಿಂತೆಯೇ ಉಳಿಯುವುದಿಲ್ಲ. ಸೇವಂತೀಬಾಯಿಯ ಮುಖದಿಂದ ಇಂದ್ರಗೇರಿಯವರ ಬಯಕೆಯ ವಿಚಾರ ಕೇಳಿ ತಿಳಿದಿದ್ದ ದೇಶಪಾಂಡೆಯವರೂ ಅಂಥದೊಂದು ಸಂದರ್ಭಕ್ಕಾಗಿ ಹೊಂಚುಹಾಕಿದ್ದರು. ಇಂದ್ರಗೇರಿಯವರನ್ನು ನೇರವಾಗಿ ಯಮಸದನಕ್ಕೆ ಕಳಿಸುವ ವಿಚಾರವೇನೂ ಅವರಿಗಿರದಿದ್ದರೂ ಅವರನ್ನು ನೌಕರಿಯಿಂದ ಡಿಸ್‌ಮಿಸ್ ಮಾಡಿಸಿ ಮನೆಗೆ ಕಳಿಸಿ ಅವಮಾನಗೊಳಿಸುವ ಹವಣಿಕೆ ಮಾತ್ರ ಅವರಿಗಿತ್ತು.

ಸೇವಂತೀಬಾಯಿಯ ಚೀಟಿ ಕೈಸೇರುತ್ತಲೂ, ತಾವು ಬಹು ದಿನಗಳಿಂದ ಎದುರುನೋಡುತ್ತಿದ್ದ ಸುಸಂದರ್ಭ ಬಂದುಬಿಟ್ಟತೆಂದು ಭಾವಿಸಿ ಡಾಕ್ಟರ್ ದೇಶಪಾಂಡೆಯವರಿಗೆ ಸಂತೋಷವೇ ಆಯಿತು. ಒಡನೆಯೇ ಅವರು ಪ್ರತ್ಯುತ್ತರ ಬರೆದು, ತಾವು ತೀವ್ರವೇ ಬರುವುದಾಗಿಯೂ, ಇಂದ್ರಗೇರಿಯವರಿಗೆ ಸೇವಂತೀಬಾಯಿ ಪ್ರೋತ್ಸಾಹವೀಯುವ ನಟನೆ ಮಾಡುತ್ತಿರಬೇಕೆಂದೂ, ತಾವು ಮನೆಯ ಹತ್ತಿರ ಬರುತ್ತಿದ್ದ ಹಾಗೆ ಗದ್ದಲವೆಬ್ಬಿಸಬೇಕೆಂದೂ ಸೂಚಿಸಿದರು. ಆ ಚೀಟಿಯನ್ನು ನೋಡಿಕೊಂಡ ಸೇವಂತೀಬಾಯಿ ಅಡುಗೆಯ ಕೊಟಡಿಯಿಂದ ಹೊರಗೆ ಬಂದು ಇಂದ್ರಗೇರಿಯವರೊಡನೆ ಹರಟುತ್ತ ಕುಳಿತಳು. ದೇಶಪಾಂಡೆಯವರು ಕೊಂಚವೂ ವಿಲಂಬಮಾಡದೆ ತಮ್ಮ ಸಿಬ್ಬಂದಿಯ ನಾಲ್ಕಾರು

ಜನರನ್ನು ಜೊತೆಗೆ ಕರೆದುಕೊಂಡು ಸೇವಂತೀಬಾಯಿಯ ಮನೆಯ ಕಡೆ ಹೊರಟರು.

ಇತ್ತ ಇಂದ್ರಗೇರಿಯವರಿಗೆ ಸ್ವರ್ಗವೇ ಎದುರಿಗೆ ಬಂದಂತಾಗಿ ಮೈಮೇಲಿನ ಅರಿವೂ ಇಲ್ಲದಂತಾಗಿತ್ತು. ಹಲವು ತಿಂಗಳುಗಳಿಂದ ಅವರು ಯಾವಳಿಗಾಗಿ ಹಗಲಿರುಳು ಹಂಬಲಿಸಿದ್ದರೊ ಆ ಲಾವಣ್ಯವತಿ, ಆ ಬಿನ್ನಾಣಗಿತ್ತಿ ಸೇವಂತೀ ಬಾಯಿ ಇಂದು ಅವರ ಮೇಲೆ ಪ್ರಸನ್ನಳಾಗಿದ್ದಳು, ಅವರ ಹತ್ತಿರವೇ ಕುಳಿತು ಕೊಂಡು ನಗುನಗುತ್ತಾ ಹರಟುತ್ತಿದ್ದಳು! ಇಪ್ಪತ್ತು ಇಪ್ಪತ್ತೆರಡು ವರ್ಷಗಳ ಆ ಗೌರಾಂಗಿ. ಆಕರ್ಷಕವಾದ ನಿಲುವು. ಮಾಟವಾದ ಮೈಕಟ್ಟು. ಹಸಿರುಗಪ್ಪು ಬಣ್ಣದ ನಸುವಿಶಾಲ ನೇತ್ರಗಳು. ಕೊರೆದು ಕೂಡಿಸಿದಂತಿದ್ದ ಹುಬ್ಬುಗಳು. ಮುತ್ತುಗಳಂತೆ ಥಳಥಳಿಸುವ ದಂತಪಂಕ್ತಿ. ನಿರಾಭರಣ ಸುಂದರವಾದ ತುಂಬುಗೊರಳು. ಸೊಕ್ಕಿನಿಂದ ಸೆಟೆದು ನಿಂತಂತಿದ್ದ ಸುಪುಷ್ಟವಾದ ಎದೆಗಳು. ನೋಡಿದವರ ಹೃದಯವನ್ನು ಕೊರೆಯುವಂತಿದ್ದ ಕೇಶಭಾರ. ಕೊಂಚ ಓರೆಯಾಗಿ ಬೈತಲೆ ತೆಗೆದು ಎರಡೂ ಕಡೆಗಳಲ್ಲಿ ಕೊಂಚ ಉಬ್ಬುವಂತೆ ಮಾಡಿ ಕಟ್ಟಿದ್ದ ಮೋಹಕ ತುರುಬು. ಆಗತಾನೆ ಆಸ್ಪತ್ರೆಯ ಕೆಲಸದಿಂದ ಹಿಂತಿರುಗಿ ಬಂದಿದ್ದವಳಾದುದರಿಂದ ನರ್ಸಿನ ಸಮವಸ್ತ್ರಗಳಾದ ಬಿಳಿಯ ಸೀರೆ, ಬಿಳಿಯ ರವಕೆಗಳಿನ್ನೂ ಹಾಗೆಯೇ ಇದ್ದುವು ಮೈಮೇಲೆ. ಆ ಶ್ವೇತ ವಸನಗಳಲ್ಲಿ ಅವಳು ಇಂದ್ರಗೇರಿಯವರ ದೃಷ್ಟಿಗೆ ಕಾದಂಬರೀಕಾವ್ಯದ ಮಹಾಶ್ವೇತೆಯ ಹಾಗೆ ಕಾಣಿಸಿದಳು. ಮಹಾಶ್ವೇತೆಯನ್ನು ದೃಷ್ಟಿಸುತ್ತಲೂ ಮೋಹಾಂಧನಾಗಿ ಅವಳ ಮಿಲನಕ್ಕಾಗಿ ಪರಿತಪಿಸಿದ ಪುಂಡರೀಕನ ಹಾಗೇ ಇಂದ್ರಗೇರಿಯವರೂ ಸೇವಂತೀಬಾಯಿಯನ್ನು ಎದೆಗೊತ್ತಿಕೊಳ್ಳಲು ಕಾತರರಾಗಿದ್ದರು. ಅವರ ಉದ್ರೇಕವನ್ನು ಅಧಿಕಗೊಳಿಸುವುದಕ್ಕೋಸ್ಕರವಾಗಿಯೇ ಅವಳು ಕೃತ್ರಿಮವಾದ ರೀತಿಯಲ್ಲಿ ಪ್ರೇಮದ ಹಾವಭಾವಗಳಿಗಾರಂಭಿಸಿದ್ದಳು. ಆದರಿಂದಾಗಿ ಡಾಕ್ಟರರು ವಾಸ್ತವಪ್ರಪಂಚವನ್ನು ಮರೆತು ಕಲ್ಪನಾ ಸಾಮ್ರಾಜ್ಯಕ್ಕೆ ಧಾವಿಸಿ ತಮ್ಮ ಮುಂದೆ ನಟನೆ ಮಾಡುತ್ತಿದ್ದ ಸೇವಂತೀಬಾಯಿಯನ್ನೇ ಅಪ್ಸರಾ ಸ್ತ್ರೀಯೆಂದು ಭಾವಿಸಿ ಗಂಧರ್ವನಂತೆ ಅವಳ ಬೆನ್ನು ಹಿಡಿದು ಹೊರಟಿದ್ದರು.

ಸೇವಂತೀಬಾಯಿ ಚಹ ತೆಗೆದುಕೊಂಡು ಬಂದಳು. ಟೀಪಾಯ್ ಮೇಲೆ

ಒಂದು ಕಪ್ ಇಟ್ಟು ಇನ್ನೊಂದನ್ನು ಡಾಕ್ಟರರಿಗೆ ಕೊಡುತ್ತಿರುವಾಗ ಅವರು ಅವಳ ಕೈ ಹಿಡಿದುಕೊಂಡು ತನ್ನ ಕುರ್ಚಿಯಲ್ಲಿಯೆ ಸ್ಥಳ ಮಾಡಿ ಅವಳನ್ನು ಕೂಡಿಸಿಕೊಂಡರು. ಅವಳೂ ಹುಸಿ ಒಯ್ಯಾರ ನಟಿಸುತ್ತಾ ಆಗಾಗ ಓರೆ ನೋಟದಿಂದ ಅವರನ್ನು ಇರಿಯುತ್ತಾ ಚಹ ಸೇವಿಸತೊಡಗಿದಳು. ಡಾಕ್ಟರರಿಗೆ ಮಾತ್ರ ಚಹದ ನೆನಪೇ ಹಾರಿಹೋಗಿತ್ತು.

"ಮೊದಲು ಚ ಹಾ ಕು ಡೀ ರಿ. ಆ ಱಿ ಹೋ ೕ ಗ್ತ ದೆ," ಎಂದಳು ಸೇವಂತೀಬಾಯಿ.

ಡಾಕ್ಟರರು ಕಪ್ಪನ್ನು ಬಾಯಿಗೆ ಹಿಡಿದು ಒಂದೇ ಗುಟುಕಿಗೇ ಎಲ್ಲ ಚಹವನ್ನು ಕುಡಿದು ಮುಗಿಸಿ ಸೇವಂತೀಬಾಯಿಯನ್ನು ತಬ್ಬಿಕೊಂಡರು, ಅವಳ ತಲೆಗೂದಲಿನ ಮೇಲೆ ಕೈಯಾಡಿಸುತ್ತಾ ಅವಳ ಮುಖದ ಬಳಿ ಮುಖವನ್ನೊಯ್ದು ಚುಂಬಿಸುವುದರಲ್ಲಿದ್ದಾಗಲೇ ಬಾಗಿಲಿನಾಚೆ ಹೆಜ್ಜೆಗಳ ಸದ್ದಾಯಿತು. ಇಂದ್ರಗೇರಿಯವರಿಗೆ ಅತ್ತ ಲಕ್ಷ್ಯವಿದ್ದರೆ ತಾನೆ ಅವರು ಅತ್ತ ಹೊರಳುವುದು?

ಸಿಬ್ಬಂದಿಯವರ ಸಮೇತವಾಗಿ ಸರ್ಜನರು ಒಳಗೆ ಬರುತ್ತಲೂ ಸೇವಂತೀಬಾಯಿ ಶಂಖವಾದ್ಯಕ್ಕಾರಂಭಿಸಿದಳು. ಇಂದ್ರಗೇರಿಯವರು ಚಕಿತರಾಗಿ ಅತ್ತಿತ್ತ ದೃಷ್ಟಿ ಹೊರಳಿಸುತ್ತಿದ್ದಂತೆಯೇ ಅವರ ತಲೆಯ ಮೇಲೆ ದೊಣ್ಣೆಯೇಟು ಬಿದ್ದು ಅವರನ್ನು ಕಲ್ಪನಾ ಸಾಮ್ರಾಜ್ಯದಿಂದ ವಾಸ್ತವಪ್ರಪಂಚಕ್ಕೆಳೆದುತಂದಿತು.

"ಏ, ಏ, ನನ್ನಾನ್ಯಾಕೆ ಹೊಡೀತೀರಿ?" ಎಂದು ಪ್ರತಿಭಟಿಸುತ್ತಾ ಎದ್ದುನಿಂತ ಇಂದ್ರಗೇರಿಯವರ ತಲೆಯ ಮೇಲೆ ಮತ್ತೊಂದು ಏಟು ಬಿದ್ದು ಅವರನ್ನು ಮೂಕವಾಗಿಸಿತು.

"ಗೆಟ್ ಔಟ್ ಯೂ ರ್‍ಯಾಸ್ಕಲ್!" ಎಂದರು ಸರ್ಜನ್.

ಇಂದ್ರಗೇರಿಯವರು ಮತ್ತೆ ಮಾತನಾಡಲಿಲ್ಲ – ಸೇವಂತೀಬಾಯಿಯನ್ನೊಮ್ಮೆ ಕ್ರೂರದೃಷ್ಟಿಯಿಂದ ನಿಟ್ಟಿಸಿನೋಡಿ, ತಲೆತಗ್ಗಿಸಿಕೊಂಡು ಸಿಬ್ಬಂದಿಯವರ ಜೊತೆಗೆ ಹೊರಟುಬಿಟ್ಟರು.

ಕೆಲಸವಂತೂ ಕೆಟ್ಟುಹೋಗಿತ್ತು. ಇನ್ನು ನೌಕರಿಯಿಂದ ಡಿಸ್‌ಚಾರ್ಜ್ ಮಾಡಿಸಿಕೊಂಡು ಮುಖಭಂಗಿತರಾಗಿ ಮನೆಗೆ ಹೋಗುವುದಕ್ಕಿಂತ ರಾಜೀನಾಮೆ ಕೊಟ್ಟು ತಣ್ಣಗಿರುವುದೇ ಮೇಲೆಂದು ಬಗೆದು ಅಂದೇ ಅವರು ರಾಜೀನಾಮೆ ಬರೆದುಹಾಕಿದರು. ಎಲ್.ಸಿ.ಪಿ.ಎಸ್. ಪದವಿ ಪಡೆದ ಡಾಕ್ಟರಾದುದರಿಂದ

ಖಾಸಗೀ ವೃತ್ತಿಯಿಂದ ಸುಖವಾಗಿ ಬದುಕಬಹುದೆಂಬ ಭರವಸೆಯಿತ್ತು. ಸರಿ. ಪೇಟೆಯಲ್ಲಿನ ಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಇಂದ್ರಗೇರಿಯವರು ಆಸ್ಪತ್ರೆ ಹೂಡಿದರು.

ಇಪ್ಪತ್ತೈದು ವರ್ಷಗಳ ಹಿಂದೆ ಊರಿಗೊಬ್ಬರು ಡಾಕ್ಟರರಿದ್ದರಷ್ಟೆ. ಓರೆಕೋರೆ ನಗರವಾದರೋ ಸಣ್ಣಪುಟ್ಟ ಊರೇನೂ ಅಲ್ಲ. ಜಿಲ್ಲೆಯ ಮುಖ್ಯ ಸ್ಥಳ. ಐವತ್ತು ಅರವತ್ತು ಸಾವಿರ ಜನರಿರುವ ಪಟ್ಟಣ. ಇಂದ್ರಗೇರಿಯವರ ಕೋಮಿಗೆ ಸೇರಿದವರ ಸಂಖ್ಯೆಗೂ ಕೊರತೆಯಿರಲಿಲ್ಲ. ಪ್ರತಿಭಾನ್ವಿತ ವಿದ್ಯಾರ್ಥಿ ಯೆಂದು ಹೆಸರು ಗಳಿಸಿ ಸರಕಾರೀ ಆಸ್ಪತ್ರೆಯಲ್ಲಿ ಅನುಭವ ಪಡೆದು ಇದೀಗ ನಗರದ ಜನರಿಗೆ ವೈದ್ಯಕೀಯ ನೆರವು ನೀಡಿ ಅವರ ಆರೋಗ್ಯರಕ್ಷಣೆ ಮಾಡಲು ಕಂಕಣಬದ್ಧರಾಗಿ ಮುಂದೆ ಬಂದ ಇಂಥ ಯುವಕ ಡಾಕ್ಟರರನ್ನು ಅವರ ಮತೀಯರೇ ಆದ ಗಣ್ಯ ನಾಗರಿಕರು ಪ್ರೋತ್ಸಾಹಿಸದಿರಲಿಲ್ಲ. ಅಂಥ ಅಭಿಮಾನಿಗಳ ಸಹಾಯದಿಂದ ಇಂದ್ರಗೇರಿಯವರು ಕೆಲದಿನಗಳಲ್ಲಿಯೇ ಕುಶಲ ಡಾಕ್ಟರರೆಂದು ಹೆಸರು ಗಳಿಸಿದುದಲ್ಲದೆ ಹಣವನ್ನೂ ಗಳಿಸಿಕೊಂಡರು. ಬಾಡಿಗೆಗೆ ಹಿಡಿದಿದ್ದ ಮನೆಯನ್ನೇ ಕೊಂಡುಕೊಂಡು ಅದಕ್ಕೊಂದು ಮಹಡಿಯನ್ನು ಕಟ್ಟಿಸಿ ಅದನ್ನು ಬಾಡಿಗೆಗೆ ಕೊಟ್ಟರು. ಅವರ ಆಸ್ಪತ್ರೆ ಮಾತ್ರ, ಇಪ್ಪತ್ತೈದು ವರ್ಷಗಳ ಹಿಂದೆ ಆರಂಭವಾಗಿದ್ದ ಸ್ಥಳವನ್ನು ಬಿಟ್ಟು ಕದಲಲಿಲ್ಲ.

ಅವರು ವೃತ್ತಿಯನ್ನಾರಂಭಿಸಿದ ಕಾಲವೂ ಅನುಕೂಲವಾದುದಾಗಿತ್ತು. ಈ ನಗರದ ವಿಸ್ತರಣಗಳಲ್ಲಿ ಬಂಗಲೆಗಳನ್ನು ಕಟ್ಟಿಸಿ ಸುಖವಾಗಿ ಕಾಲ ಕಳೆಯು ತ್ತಿದ್ದ ದೇಸಾಯಿಗಳು, ದೇಶಪಾಂಡೆಗಳು, ಇನಾಂದಾರರು, ಪಾಟೀಲರು ಮೊದಲಾದ ಧನಿಕರು ಊರ್ಜಿತಾವಸ್ಥೆಯಲ್ಲಿದ್ದ ಕಾಲ ಅದು. ಇಂಥ ಜನರು ತಮ್ಮ ಕಿಸೆಯಲ್ಲಿದ್ದರೊಳ್ಳೆಯದೆಂದು ಬಗೆದ ಧೂರ್ತ ಬ್ರಿಟಿಷ್ ಸರಕಾರ ಇವರಿಗೆ ರಾವ್‌ಸಾಹೇಬ್, ರಾವ್‌ಬಹದ್ದೂರ್, ದಿವಾನ್‌ಬಹದ್ದೂರ್ ಮೊದಲಾದ ಬಿರುದುಗಳನ್ನು ದಯಪಾಲಿಸಿ ಅವರ ಮೂಗಿಗೆ ತುಪ್ಪ ಹಚ್ಚಿ ಕುಣಿಸುತ್ತಿದ್ದ ಕಾಲ ಅದು. ಈ ಬಿರುದುಗಳನ್ನು ದೊರಕಿಸುವುದಕ್ಕಾಗಿ ದೊಡ್ಡದೊಂದು ಸ್ಪರ್ಧೆಯೇ ನಡೆದ ಹಾಗಿರುತ್ತಿತ್ತು. ಹೆಚ್ಚು ಹೆಚ್ಚು ಘನತೆಯನ್ನು ದೊಡ್ಡಸ್ತಿಕೆ ಯನ್ನು ತೋರಿಸಿದಷ್ಟೂ ಬಿರುದುಗಳು ಸಿಕ್ಕುವುದು ಸುಲಭವಾಗುವುದೆಂದು ಅವರು ಭಾವಿಸಿಕೊಂಡಿದ್ದರು. ಅಂತೆಯೆ, ಗವರ್ನರರು ಕಲೆಕ್ಟರರೇ ಮೊದಲಾದ

ಉಚ್ಚ ಅಧಿಕಾರಿಗಳನ್ನನುಕರಿಸಿ ಇವರೂ 'ಫ್ಯಾಮಿಲಿ ಡಾಕ್ಟರು'ಗಳನ್ನು ನಿಯಮಿಸಿಕೊಳ್ಳುವ ಪರಿಪಾಠವಿರಿಸಿಕೊಂಡಿದ್ದರು. ಈ ದೊಡ್ಡಮನುಷ್ಯರ ಮನೆಯಲ್ಲಿ ಇಡೀ ವರ್ಷ ಯಾರಿಗೂ ಕಾಹಿಲೆ ಬರದಿದ್ದರೂ ಪರವಿಲ್ಲ, ಗೊತ್ತು ಪಡಿಸಿದ ದಿನಗಳಲ್ಲಿ ಇವರ 'ಫ್ಯಾಮಿಲಿ ಡಾಕ್ಟರು' ಮಾತ್ರ ಮನೆಗೆ ಭೆಟ್ಟಿ ಕೊಡಲೇಬೇಕು, ಮನೆಯವರೆಲ್ಲರ ಯೋಗಕ್ಷೇಮ ವಿಚಾರಿಸಬೇಕು, ಯಾರ ಮುಖದ ಮೇಲಾದರೂ ಕಳೆ ಕಂಡುಬರದಿದ್ದರೆ 'ಟಾನಿಕ್' ಶಿಫಾರಸು ಮಾಡಬೇಕು, ಯಾರಿಗಾದರೂ ಅಜೀರ್ಣಬಾಧೆಯಾಗಿದ್ದರೆ ಔಷಧ ಕೊಡಬೇಕು· ಡಾಕ್ಟರರ ಕೆಲಸವೆಂದರೆ ಅಷ್ಟೆ. ಆದರೂ ಅವರಿಗೆ ಈ ಅಲ್ಪ ಕೆಲಸಕ್ಕೆಂದು ಪ್ರತಿವರ್ಷವೂ ಐದುನೂರು ರೂಪಾಯಿಗಳವರೆಗೂ ಫೀ ಮುಟ್ಟುತ್ತಿತ್ತು. ರೈತನ ಲಾವಣಿಯಲ್ಲಿ ಒಂದು ರೂಪಾಯಿಯನ್ನೂ ಬಿಟ್ಟುಬಿಡಲು ಸಿದ್ಧರಾಗದ ಈ ದೊಡ್ಡಮನುಷ್ಯರು ತಮ್ಮ ದೊಡ್ಡಸ್ತಿಕೆಯನ್ನು ಕಾದುಕೊಳ್ಳುವ ಈ ಹವ್ಯಾಸಕ್ಕಾಗಿ ಇಷ್ಟು ಹಣವನ್ನು ಮತ್ತೊಂದು ವಿಚಾರವಿಲ್ಲದೆ ಸುರಿಯುತ್ತಿದ್ದರು. "ನಮಗೂ ಒಬ್ಬ ಫ್ಯಾಮಿಲಿ ಡಾಕ್ಟರಿದಾರೆ," ಎಂದು, ಬಂದ ಅತಿಥಿಗಳೆದುರಿಗೆಲ್ಲ ಹೇಳಿಕೊಳ್ಳುವುದು ಅವರಿಗೊಂದು ಹೆಮ್ಮೆಯ ವಿಷಯವಾಗಿತ್ತು.

ಇಂದ್ರಗೇರಿಯವರು ವೃತ್ತಿಗಾರಂಭಿಸುತ್ತಲೂ ಅವರ ಸುದೈವದಿಂದಾಗಿ ಅವರ ಮತೀಯರೇ ಆದ ಇಂಥ ಹತ್ತಿಪ್ಪತ್ತು ಜನ ಬಿರುದಿನವರ ಆಶ್ರಯ ಲಭಿಸಿತು. ಸ್ಟೆತಸ್ಕೋಪನ್ನು ಕೋಟಿನ ಕಿಸೆಗೆ ಸಿಕ್ಕಿಸಿ, ಸೈಕಲ್ ಹಿಡಿದುಕೊಂಡು ಒಳ್ಳೆಯ ಠೀವಿಯಿಂದಲೇ ಈ ದೊಡ್ಡವರ ಮನೆಗಳನ್ನು ಸುತ್ತತೊಡಗಿದರು ಇಂದ್ರಗೇರಿಯವರು. ಸೇವಂತೀಬಾಯಿಯ ಮನೆಯಲ್ಲಿ ಅವಮಾನಿತರಾದಂದಿನಿಂದ ಹೆಣ್ಣಿನ ವಿಚಾರವಾಗಿ ಅವರ ಮನಸ್ಸು ಬಹಳ ಕಹಿಯಾಗಿತ್ತು. "ನನ್ನಂಥ ಸುಶಿಕ್ಷಿತ ಡಾಕ್ಟರನ್ನು ಈ ರೀತಿ ಫಜೀತಿ ಮಾಡಿತಲ್ಲವೇ ಆ ಯಃಕಶ್ಚಿತ್ ಹೆಣ್ಣು! ಇಂಥ ಸಾವಿರ ಹೆಣ್ಣುಗಳು ನನ್ನ ಕಾಲಿಗೆ ಬಿದ್ದು ನನ್ನ ಅನುರಾಗ ಯಾಚಿಸುವಂತೆ ಮಾಡದಿದ್ದರೆ ನನ್ನ ಹೆಸರು ಇಂದ್ರಗೇರಿ ಅಲ್ಲ. ಏನೋ ಸ್ವಲ್ಪ ಗುಲಾಬಿ ಬಣ್ಣ, ಎದ್ದುಕಾಣುವ ಮೊಲೆ, ಚಂದಾದ ಮುಖ ಇದ್ದ ಮಾತ್ರಕ್ಕೇ ತಾವು ಸ್ವರ್ಗಲೋಕದ ಅಪ್ಸರಿಯರೆಂತ ಗರ್ವ ಈ ಹೆಂಗಸರಿಗೆ. ನಾವು ಗಂಡಸರು ಇವರಿಗೆ ಯಾವದರಲ್ಲಿ ಕಡಿಮೆಯವರು? ನಾವಿಲ್ಲದಿದ್ದರೆ ಇವರಿಗೆ ಹೊಟ್ಟೆಗೆ ಅನ್ನವಾದರೂ ಎಲ್ಲಿ ಸಿಗುತ್ತಿತ್ತು?

ಇನ್ನು ಮುಂದೆ ಯಾವ ಹೆಂಗಸನ್ನೂ ಯಾತಕ್ಕೂ ಯಾಚಿಸುವುದಿಲ್ಲ. ಅವರೇ ನನ್ನನ್ನು ಯಾಚಿಸುವಂತೆ ಮಾಡುತ್ತೇನೆ. ಸೇವಂತಿಗಿಂತ ಸಾವಿರಪಾಲು ಹೆಚ್ಚು ಸುಂದರಿಯರಾದ ಹೆಂಗಸರನ್ನು ಅನುಭೋಗಿಸಿ ನನಗಾದ ಅವಮಾನ ವನ್ನು ಮರೆಯಲು ಯತ್ನಿಸುತ್ತೇನೆ," ಎಂದು ಅವರು ತಮ್ಮಷ್ಟಕ್ಕೆ ತಾವೇ ಅನೇಕ ಬಾರಿ ಹೇಳಿಕೊಂಡು ಉರಿಯುತ್ತಿದ್ದ ಎದೆಯನ್ನು ತಣ್ಣಗಾಗಿಸಲು ಯತ್ನಿಸುತ್ತಿದ್ದರು.

ಜಮೀನ್ದಾರರು ಇನಾಂದಾರರು ದೇಸಾಯಿಗಳ ಮನೆಯ ಹೆಣ್ಣು ಮಕ್ಕಳೆಂದರೆ ಸುಂದರಿಯರೂ ವಿಲಾಸಪ್ರಿಯರೂ ಆಗಿರುವುದು ಸಹಜವಷ್ಟೆ. 'ಫ್ಯಾಮಿಲಿ ಡಾಕ್ಟರ'ರೆಂಬ ನೆಪದಿಂದ ಇಂದ್ರಗೇರಿಯವರು ಈ ಸ್ತ್ರೀಯರ ಮೈ ಕೈ ಮುಟ್ಟನೋಡಿ ಹಲವಾರು ಉಪಾಯಗಳಿಂದ ಅವರಲ್ಲಿ ಅನೇಕರನ್ನು ತಮ್ಮ ಬಲೆಗೆ ಸಿಕ್ಕಿಸಿಕೊಳ್ಳಲು ತಡವಾಗಲಿಲ್ಲ. ಈ ಡಾಕ್ಟರರ ನಡತೆ ಇಂಥದಿದ್ದರೂ ಅವರ ವಿಚಾರವಾಗಿ ಆ ದೊಡ್ಡ ಮನುಷ್ಯರಿಗೆ ಮಾತ್ರ ಯಾವ ಸಂಶಯವೂ ಇರಲಿಲ್ಲ. ಡಾಕ್ಟರರೆಂದರೆ ಪಾಪವಾಸನೆಯೇ ಇಲ್ಲದ ಸಭ್ಯಗೃಹಸ್ಥ ಎಂಬ ನಂಬುಗೆ ಇವರದು. ಗಂಡು ಹೆಣ್ಣು ಎರಡೂ ಡಾಕ್ಟರರ ದೃಷ್ಟಿಯಲ್ಲಿ ಒಂದೇ ಎಂಬ ತಿಳಿವಳಿಕೆಯೂ ಸರ್ವಸಾಮಾನ್ಯವಾದುದೇ. ವೃತ್ತಿಸಹಜವಾದ ವಿಶುದ್ಧ ದೃಷ್ಟಿಯಿಂದ ಸ್ತ್ರೀಯರ ಅಂಗಾಂಗಗಳನ್ನು ಪರೀಕ್ಷಿಸುವುದು ಎಲ್ಲ ಡಾಕ್ಟರು ಗಳಿಗೂ ಸಾಧ್ಯವಲ್ಲವೆಂಬ ಅಂಶವನ್ನು ಮಾತ್ರ ಹೆಚ್ಚು ಜನರು ಗಮನಿಸುವುದಿಲ್ಲ.

ಅಂತೆಯೇ, ಬಿರುದಿನವರ ಅಹಲ್ಯೆಯರ ಮೇಲೆ ಇಂದ್ರಗೇರಿಯವರು ಪ್ರಯೋಗಿಸುತ್ತಿದ್ದ ಇಂದ್ರಗಾರಿಕೆಯನ್ನು ಅವರಾರೂ ಗಮನಿಸಲಿಲ್ಲ.

ಈ ಬಿರುದಿನವರಲ್ಲಿ ಅನೇಕರಿಗೆ ಎಷ್ಟೋ ವರ್ಷಗಳವರೆಗೆ ಮಕ್ಕಳಾಗಿರ ಲಿಲ್ಲ. ಸಿರಿವಂತರಿಗೆ ಮಕ್ಕಳಾಗದಿದ್ದರೆ ಅದೊಂದು ಚಿಂತೆಯೇ ಅಲ್ಲವೆ? ಅವರ ಪಶ್ಚಾತ್ ಅವರ ಆಸ್ತಿಪಾಸ್ತಿಗಳನ್ನು ಯಾರು ಉಪಭೋಗಿಸಬೇಕು? ಅವರ ಇತಿಹಾಸ ಪ್ರಸಿದ್ಧ ವಂಶ ಜಗತ್ತಿನ ಅಂತ್ಯಕಾಲದವರೆಗೆ ಮುಂದುವರಿಯುವುದು ಅವಶ್ಯಕವಲ್ಲವೆ? ನಿಪುತ್ರಕರಾಗಿದ್ದ ಇಂಥ ಧನಿಕರು ಸಹಜವಾಗಿಯೆ ಆ ವಿಚಾರವಾಗಿ ತಮ್ಮ ಫ್ಯಾಮಿಲಿ ಡಾಕ್ಟರರಾದ ಇಂದ್ರಗೇರಿಯವರ ಸಲಹೆ ಕೋರಿದರು. ಅವರ ಸ್ತ್ರೀಯರೂ ಡಾಕ್ಟರರೆದುರಿಗೆ ಕಣ್ಣೀರು ಸುರಿಸಿ ತಮ್ಮನ್ನು ಪುತ್ರವತಿಯರನ್ನಾಗಿಸಬೇಕೆಂದು ಬೇಡಿಕೊಂಡರು. ಅಂಥವರಿಗೆಲ್ಲ ಡಾಕ್ಟರರು

ಅಭಯವಿತ್ತು ಅವರಿಗೆ ಮಕ್ಕಳಾಗುವ ದಾರಿ ತೋರಿಸಿಕೊಟ್ಟರು. ಈ ಸಿರಿವಂತರ ಮನೆಗಳಲ್ಲಿ ಗುಪ್ತವಾದ ರೀತಿಯಲ್ಲಿ ಪ್ರಣಯ ವ್ಯವಹಾರ ಸಾಗಿಸುವ ವಿಧವೆಯರಿಗೂ ಕುಮಾರಿಕೆಯರಿಗೂ ಕೊರತೆಯಿರಲಿಲ್ಲ. ಅಂಥವರೆಲ್ಲರೂ, ಒಂದು ತಿಂಗಳು ಮುಟ್ಟು ನಿಂತುಹೋದರೆ ಅಥವಾ ಕೊಂಚ ವಿಲಂಬವಾದರೆ ಗಾಬರಿಗೊಂಡು ತಮ್ಮ ಮನೆಯ ಗಂಡಸರಿಗೆ ಗೊತ್ತಾಗದಂತೆ ಡಾಕ್ಟರರ ಆಸ್ಪತ್ರೆಗೆ ಧಾವಿಸತೊಡಗಿದರು. ಇಂಥ ಗುಪ್ತ ವಿಷಯಗಳನ್ನು ಪರೀಕ್ಷಿಸುತ್ತಾ ಆ ಸ್ತ್ರೀಯರ ಭೀತಿಯನ್ನೂ ಬಯಕೆಗಳನ್ನೂ ಅರಿತುಕೊಂಡು ಅವರ ಜುಟ್ಟು ಗಳನ್ನು ತಮ್ಮ ಕೈಯಲ್ಲಿಟ್ಟುಕೊಂಡರು ಡಾಕ್ಟರು. ಅವರ ರಹಸ್ಯಗಳನ್ನು ಬಯಲಿಗೆಳೆಯುವುದಿಲ್ಲವಾಗಿ ಭರವಸೆಯಿತ್ತು ಅವರನ್ನು ತಾತ್ಕಾಲಿಕ ಗಂಡಾಂತರದಿಂದ ದೂರಗೊಳಿಸಿದರು. ಹೆಂಗಸಿನಂಥ ಕೃತಜ್ಞಭಾವದ ಪ್ರಾಣಿ ಪ್ರಪಂಚದಲ್ಲಿಯೇ ಬೇರೊಂದಿಲ್ಲ. ತಮ್ಮ ಫ್ಯಾಮಿಲಿ ಡಾಕ್ಟರರೆಂದರೆ ಪ್ರತ್ಯಕ್ಷ ದೇವರ ಅವತಾರವೆಂದೇ ಭಾವಿಸಿ ಆ ಸ್ತ್ರೀಯರೆಲ್ಲರೂ ಅವರ ಭಕ್ತೆಯರಾದರು.

ಭಕ್ತನಾದವನಿಗೆ ಒಮ್ಮೆ ದೇವರಲ್ಲಿ ಗಾಢಭಕ್ತಿ ಹುಟ್ಟಿದರಾಯಿತು, ತನ್ನ ದೇವರ ಎಲ್ಲ ಕೃತಿಗಳೂ ಅವನಿಗೆ ಪ್ರಿಯವೆನಿಸುತ್ತವೆ. ಈ ಭಕ್ತೆಯರಿಗೂ ಹಾಗೇ ಆಯಿತು. ಡಾಕ್ಟರರ ರೂಪ, ಹಾವಭಾವ, ಮಾತುಕತೆ, ನಗು ಎಲ್ಲವೂ ಅವರಿಗೆ ಪ್ರಿಯವಾಯಿತು. ಎಷ್ಟು ಬೇಡಿಕೊಂಡರೂ ತುಟಿಯಲುಗಿಸದೆ ಕುಳಿತಿರುವ ಗುಡಿಯಲ್ಲಿನ ಕಲ್ಲುದೇವರುಗಳನ್ನು ಕಡೆಗಣಿಸಿ, ಮಕ್ಕಳಾಗದ ಮಹಿಳೆಯರು ಕುಮಾರಿಕೆಯರು ವಿಧವೆಯರು ಈ ಡಾಕ್ಟರ್‌ದೇವರ ಸುತ್ತ ಸುಳಿದಾಡತೊಡಗಿದರು. ಇಷ್ಟೆಲ್ಲ ನಡೆದರೂ ಈ ಮಹಿಳೆಯರ ಮನೆಗಳ ಗಂಡಸರಿಗೆ ಮಾತ್ರ ಯಾವ ಸುದ್ದಿಯೂ ತಿಳಿಯಲಿಲ್ಲ. ಮಕ್ಕಳನ್ನು ಬಯಸಿದ್ದ ವರಿಗೆಲ್ಲ ಡಾಕ್ಟರರ ಕೃಪೆಯಿಂದ ಮಕ್ಕಳಾಗುತ್ತಲೂ ಆ ಮನೆಗಳ ಗಂಡಸರೂ ಅವರನ್ನು ಹೆಚ್ಚಿನ ಪ್ರೀತ್ಯಾದರಗಳಿಂದ ಕಾಣತೊಡಗಿದರು. ಅಂಥ ಮನೆಗಳಲ್ಲಿ ಡಾಕ್ಟರರ ಸ್ಥಾನಮಾನಗಳೂ ಹೆಚ್ಚಿ ಅವರು 'ಫ್ಯಾಮಿಲಿ ಫ್ರೆಂಡ್' ಎಂಬ ಅಭಿಧಾನವನ್ನೂ ದೊರಕಿಸಿದರು.

ಇಷ್ಟೆಲ್ಲ ಆದ ತರುವಾಯ, ನಗರದಲ್ಲಿ ತಮ್ಮ ಸ್ಥಾನ ಭದ್ರವಾಯಿತೆಂಬ ಆತ್ಮವಿಶ್ವಾಸ ಮೂಡಿದ ತರುವಾಯ ಡಾಕ್ಟರರು ತಮ್ಮ ಬಲೆಯನ್ನು ಹೆಚ್ಚು ದಿಟ್ಟತನದಿಂದ ಬೀಸುವುದಕ್ಕಾರಂಭಿಸಿದರು. ಮಕ್ಕಳಿಲ್ಲದವರನ್ನು ಗುಣಪಡಿಸಿ

ಮಕ್ಕಳಾಗುವಂತೆ ಮಾಡುವ ಡಾಕ್ಟರೆಂದು ಅವರ ಖ್ಯಾತಿ ಹಬ್ಬುತ್ತಲೂ ನಗರದ ನಿಪುತ್ರಕ ಸ್ತ್ರೀಯರೆಲ್ಲರೂ ಅವರ ಆಸ್ಪತ್ರೆಗೆ ಧಾವಿಸತೊಡಗಿದರು. ಅವರ ಗದ್ದಲವನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕಾಗಿಯೇ ಒಬ್ಬ ಆಳನ್ನು ನಿಯಮಿಸಿಕೊಳ್ಳಬೇಕಾದ ಅಗತ್ಯ ಕಂಡುಬಂತು. ಡಾಕ್ಟರರ "ಕನ್ಸಲ್ಟಿಂಗ್ ರೂಮಿನ" ಹಿಂಬದಿಯಲ್ಲಿದ್ದ ಕೊಟಡಿಯಲ್ಲಿ ಒಂದು ಮಂಚ, ಒಂದು ಹಾಸಿಗೆ ಸಜ್ಜುಗೊಳಿಸಲ್ಪಟ್ಟವು. ಆಳು ಒಬ್ಬೊಬ್ಬ ಸ್ತ್ರೀಯನ್ನೇ ಒಳಗೆ ಬಿಡುತ್ತಿದ್ದ. ಡಾಕ್ಟರರು ಅವಳ ದೇಹದಲ್ಲಿನ ನ್ಯೂನತೆಗಳನ್ನು ಪರೀಕ್ಷಿಸುವುದಕ್ಕಿಂತ ಹೆಚ್ಚಾಗಿ ಅವಳ ಸ್ವಭಾವವನ್ನು ಪರೀಕ್ಷಿಸಿ ಸುಲಭವಾಗಿ ಬಲೆಗೆ ಬೀಳುವಂಥವಳನ್ನು ಗುರುತಿಸಿ,

"ಹೀಗೆ ಅವಸರದಲ್ಲಿ ಏನು ಹೇಳಲೂ ಶಕ್ಯವಿಲ್ಲ. ನೀವು ಸ್ವಲ್ಪ ಬಿಡುವು ಮಾಡಿಕೊಂಡು ಬರಬೇಕು. ತಾಸೆರಡು ತಾಸು ಪರೀಕ್ಷೆ ಮಾಡಬೇಕಾದೀತು," ಎಂದು ಹೇಳುವರು.

"ಆಗಲಿ, ಡಾಕ್ಟರೇ. ಅದಕ್ಕೇನು, ಯಾವಾಗ ಬರಲಿ ?" ಎಂದು ಅವಳು ಕೇಳುವಳು.

ಡಾಕ್ಟರರು ಅವಳಿಗೊಂದು ಸಮಯ ಗೊತ್ತುಪಡಿಸಿ ಕಳಿಸುವರು. ಆ ಸಮಯದಲ್ಲಿ ಆಸ್ಪತ್ರೆಗೆ ಇನ್ನಾರೂ ಬರದಂತೆ ನೋಡಿಕೊಂಡು ಬಾಗಿಲು ಕಾಯುವ ಆಳಿಗೆ ಯೋಗ್ಯ ಸೂಚನೆಗಳನ್ನಿತ್ತು ಅವಳನ್ನು ಬರಮಾಡಿಕೊಂಡು ಮಂಚವಿದ್ದ ಕೊಟಡಿಗೆ ಕರೆದೊಯ್ದು ಹಾಸಿಗೆಯ ಮೇಲೆ ಕೂಡ್ರಿಸಿ,

"ಶರೀರದಲ್ಲಿ ಏನಾದರೂ ದೋಷವಿದ್ದರೇನೇ ಮಕ್ಕಳಾಗುವದಿಲ್ಲ. ಆ ದೋಷವೇನು ಅನ್ನುವದನ್ನ ನಾವು ಮೊದಲು ತಿಳಿದುಕೋಬೇಕಾಗುತ್ತದೆ. ನಮ್ಮ ಮುಂದೆ ನೀವು ನಾಚಿಕೋಬಾರದು, ಇಲ್ಲವಷ್ಟೆ ?" ಎನ್ನುವರು.

ಅವಳು ನಗುತ್ತಾ 'ಇಲ್ಲ'ವೆಂದು ತಲೆಯಾಡಿಸುವಳು. ಡಾಕ್ಟರರ ಮುಂದೆ ಅವಳಾದರೂ ಯಾಕೆ ನಾಚಿಕೊಂಡಾಳು ?

"ಶರೀರದ ಎಲ್ಲಾ ಅವಯವಗಳನ್ನೂ ನಾವು ಪರೀಕ್ಷೆ ಮಾಡಬೇಕಾಗ್ತದೆ. ನೀವು ಮಲಗಿಕೊಂಡು ಬಿಡಿರಿ. ನಾಚಿಕೆ ಅನ್ನಿಸಿದರೆ ಕಣ್ಣು ಮುಚ್ಚಿಕೊಳ್ಳಿರಿ," ಎನ್ನುವರು ಡಾಕ್ಟರು.

ಅವಳು ಹಾಸಿಗೆಯ ಮೇಲೊರಗಿಕೊಳ್ಳುತ್ತಲೂ ಬಳಿಸಾರಿ ಅವಳನ್ನು

ವಿವಸ್ತ್ರಳನ್ನಾಗಿ ಮಾಡಿ, ಮೊದಲೇ ಹೇಳಿದಂತೆ ಅವಳ ಅವಯವಗಳೆಲ್ಲವನ್ನೂ ಪರೀಕ್ಷಿಸುವರು. ಹರಯದ ಗಂಡಸೊಬ್ಬ ಏಕಾಂತದಲ್ಲಿ ಹಾಗೆ ಗುಪ್ತ ಅಂಗಾಂಗಗಳನ್ನು ಸ್ಪರ್ಶಿಸುತ್ತಿರುವಾಗ ಯಾವ ಹೆಂಗಸಿಗಾದರೂ ಉದ್ರೇಕ ವಾಗುವುದು ಸ್ವಾಭಾವಿಕವಷ್ಟೆ. ಅವಳನ್ನು ಅಂಥ ಉದ್ರಿಕ್ತ ಸ್ಥಿತಿಗೇರಿಸಿದ ಬಳಿಕ ಡಾಕ್ಟರರು ತಮ್ಮ ಎರಡನೆಯ ಅಸ್ತ್ರವನ್ನು ಹೊರದೆಗೆಯುವರು.

" ನಿಜವಾಗಿ ನಿಮ್ಮ ಶರೀರದಲ್ಲೇನೂ ದೋಷವಿಲ್ಲ. ನಿಮಗೆ ಮಕ್ಕಳಾಗಲೇ ಬೇಕು."

" ಆದರೂ, ಆಗಲೊಲ್ಲವಲ್ಲ ಡಾಕ್ಟರೇ ?"

" ಆಗುವದಾದರೂ ಹ್ಯಾಗೆ? ಮಕ್ಕಳನ್ನು ಹಡೆಯುವವಳು ಹೆಂಗ ಸಾದರೂ ಅವು ಆಗುವುದು ಗಂಡಸಿನಿಂದಲೇ ಅಲ್ಲವೇ? ಗಂಡನ ಬೀಜ ಗಟ್ಟಿಯಾಗಿದ್ದರೆ ಹೆಂಡತಿಗೆ ಮಕ್ಕಳಾದಾವು."

" ಹಾಗಾದರೆ ನಮ್ಮವರಲ್ಲೇ ದೋಷವಿರಬೇಕು ಅಂತೀರಾ ?"

" ಸಂಶಯವೇ ಇಲ್ಲ. ನಾ ಅವರನ್ನು ಪರೀಕ್ಷಿಸಿದ್ದೇನಲ್ಲ? ಅವರಲ್ಲೇ ದೋಷವಿರೂದು. ಪಾಪ. ಮಕ್ಕಳಾಗಲಿಲ್ಲ ಅಂತ ನಿಮ್ಮನ್ನ ಅಂದರೆ ನೀವೇನು ಮಾಡೀರಿ ?"

" ಹಾಗಾದರೆ ಅವರಿಗೇ ಔಷಧ ಕೊಟ್ಟು ನೋಡಬಹುದಲ್ಲ ?"

" ಔಷಧ ಕೊಟ್ಟರೆ ಗುಣವಾಗುವ ರೋಗವಿದಲ್ಲರೀ."

" ಮತ್ತೆ ? ಉಪಾಯವೇ ಇಲ್ಲ ಅಂತೀರಾ ?"

" ಇಲ್ಲ ಯಾಕೆ? ಇದೆ ನಿಮ್ಮಲ್ಲೇ ಇದೆ ಉಪಾಯ." ಡಾಕ್ಟರರು ನಗುತ್ತಾ ಬಲು ಮಾರ್ಮಿಕವಾಗಿ ಹೇಳುವರು.

" ನಿಮ್ಮ ಗಂಡನಿಂದಲಂತೂ ನಿಮಗೆ ಮಕ್ಕಳಾಗುವಂತಿಲ್ಲ. ಆ ಆಸೆಯನ್ನೇ ಬಿಟ್ಟುಬಿಡಿರಿ. ಇನ್ನು ದತ್ತು ತಗೊಳ್ಳುವದು, ಯಾರದೋ ಒಂದು ಕೂಸನ್ನು ದತ್ತು ತಗೊಂಡರೆ ಅದು ನಿಮ್ಮದಾಗುವದೇನು? ನಿಮ್ಮ ಹೊಟ್ಟೆಯಿಂದ ಮಗು ಹುಟ್ಟಿದಾಗಲೇ ನಿಮಗೆ ಸುಖ ಅಲ್ಲವೇನು? ಈಗ ನಿಮಗೆ ಮಕ್ಕಳಾಗಬೇಕಾದರೆ ಪರಪುರುಷನಿಂದಾಗಬೇಕು. ಹ್ಯಾಗಾದರೂ ಆಗಿ ಒಂದು ಮಗು ಆದರೆ ನೆಟ್ಟಗಲ್ಲವೇನು? ಅದು ತನ್ನಿಂದಲೇ ಆದದ್ದು

ಅಂತ ನಿಮ್ಮ ಗಂಡನೂ ತಿಳಿದುಕೋಬಹುದು. ಅವರಿಗೂ ತೃಪ್ತಿ, ನಿಮಗೂ ತೃಪ್ತಿ. ಆಂ? ಏನಂತೀರಿ?"

ಅದೇ ಬಗೆಯ ವಿಚಾರಗಳನ್ನೆ ಅನೇಕ ದಿನಗಳಿಂದ ಮೆಲುಕುಹಾಕುತ್ತ ಬಂದಿದ್ದರೂ ಅಂಥ ಹೆಜ್ಜೆಯಿಡಲು ಧೈರ್ಯ ಸಾಲದೆ ಸುಮ್ಮನಿದ್ದ ಆ ಹೆಂಗಸು ಡಾಕ್ಟರರ ಇಂಥ ಮಾತುಗಳಿಂದ ಸುಲಭವಾಗಿಯೇ ಹಳ್ಳಕ್ಕೆ ಬೀಳುತ್ತಿದ್ದಳು. ಯಾರಿಗೂ ಸಂಶಯಕ್ಕಾಸ್ಪದವಾದಂತೆ, ಕೊಂಚವೂ ಬೊಬ್ಬಾಟವಾಗದಂತೆ ತನಗೆ ಮಕ್ಕಳನ್ನು ನೀಡಲು ಡಾಕ್ಟರರೇ ಸಮರ್ಥರಾಗಿರುವಾಗ ಬೇರೆಯವರನ್ನು ಹುಡುಕಿಕೊಳ್ಳುವ ಸಾಹಸಕ್ಕೆ ಅವಳೇಕೆ ಪ್ರವೃತ್ತಳಾದಾಳು? ಸರಿ. ಪುರಾಣ ಕಾಲದ ವಾಯು ರವಿ ಇಂದ್ರ ಚಂದ್ರಾದಿ ದೇವತೆಗಳು ಭೂಲೋಕದ ರಾಣಿಯರಿಗೆ ಮಕ್ಕಳನ್ನು ದಯಪಾಲಿಸಿದಂತೆ ಈ ಓರೆಕೋರೆ ನಗರದ ಇಂದ್ರದೇವರು ತಮ್ಮ ಭಕ್ತೆಯರಿಗೆ ಮಕ್ಕಳನ್ನು ನೀಡತೊಡಗಿದರು.

ಹೀಗೆ ಒಂದೆರಡು ವರ್ಷಗಳ ಕಾಲ ಚೆಲ್ಲಾಟ ನಡೆಸಿದ ಬಳಿಕ ಡಾಕ್ಟರರ ಮದುವೆಯೂ ಜರುಗಿತು. ಒಳ್ಳೆಯ ಮನೆತನದ ಸುಂದರ ಸುಶೀಲ ಹೆಣ್ಣು ಕೈಹಿಡಿದು ಬಂದರೂ ಡಾಕ್ಟರರ ಹೊರಚಾಳಿ ಮಾತ್ರ ನಿಲ್ಲಲಿಲ್ಲ. ಹಾದಿಯಲ್ಲಿ ಸಿಕ್ಕಿದವರನ್ನೆಲ್ಲ ಕಚ್ಚುತ್ತ ಹೊರಡುವ ಹುಚ್ಚುನಾಯಿಯ ಹಾಗೆ ಅವರು ತಮ್ಮ ಹತ್ತಿರ ಬರುವ ಸ್ತ್ರೀರೋಗಿಗಳಲ್ಲಿ ಅನೇಕರನ್ನು ಕೆಡಿಸುತ್ತ ಹೊರಟರು. ದಿನ ಕಳೆದ ಹಾಗೆ ಅವರ ಬ್ಯಾಂಕ್‌ಲೆಕ್ಕವೂ ಬೆಳೆಯತೊಡಗಿತು. ನಗರದ ಅನೇಕ ಕಡೆಗಳಲ್ಲಿ ಮನೆಗಳನ್ನೂ ಚಾಳಗಳನ್ನೂ ಕಟ್ಟಿಸಿ 'ಲ್ಯಾಂಡ್‌ಲಾರ್ಡ್' ಆದುದೂ ಆಯಿತು. ಇಷ್ಟೆಲ್ಲ ಆದ ಬಳಿಕ ನಗರದ 'ಗಣ್ಯವ್ಯಕ್ತಿ'ಗಳಲ್ಲಿ ಅವರ ಹೆಸರೂ ಸೇರದಿದ್ದೀತೇ? ಸಾರ್ವಜನಿಕ ಕಾರ್ಯಕಲಾಪ ಸಭೆ ಸಮಾರಂಭ ಏಸಿದ್ದರೂ ಡಾಕ್ಟರು ಇರಲೇಬೇಕು. ಅವರಿಲ್ಲವಾದರೆ ಶೋಭೆಯೇ ಬರುವುದಿಲ್ಲ ಎನ್ನುವಂತಾಯಿತು. ಇಷ್ಟು ಪ್ರಸಿದ್ಧಿ ಪಡೆದರೂ ಅವರು ಚುನಾವಣೆಯ ರಂಗಕ್ಕಿಳಿಯುವ ಮೂರ್ಖತನ ಮಾತ್ರ ಮಾಡಲಿಲ್ಲ. ನಗರಸಭೆಗೆ ತಾವೇ ಅನೇಕ ಜನರನ್ನು ಹುರಿಯಾಳುಗಳಾಗಿ ನಿಲ್ಲಿಸಿ ಅವರನ್ನು ಆರಿಸಿತಂದರು. ಅದರಿಂದಾಗಿ ದೊಡ್ಡಸ್ತಿಕೆ ಪಡೆಯಬಯಸುವವರೆಲ್ಲರೂ ಡಾಕ್ಟರರನ್ನು ಹುಡುಕಿಕೊಂಡು ಅಲೆಯುವಂತಾಯಿತು.

ಅವರ ರಸಿಕತನದ ಬಾಳೂ ಎಂದಿನಂತೆಯೇ ಸಾಗಿತ್ತು. ಮನೆಯ

ಹೆಂಡತಿಯಲ್ಲೂ ಹೆಣ್ಣು ಗಂಡು ಮಕ್ಕಳು ಹುಟ್ಟಿದುವು. "ಡಾಕ್ಟರರಿಗೆ ಯಾವುದರ ಕೊರತೆಯೂ ಇಲ್ಲವಪ್ಪಾ!" ಎಂದು ಜನರೆಲ್ಲ ಆಡುವಂತಾಗಿದ್ದರೂ ಡಾಕ್ಟರರಿಗೇ ಆ ಮಾತು ಒಪ್ಪಿಗೆಯಾಗುತ್ತಿರಲಿಲ್ಲ. ಏನೋ ಕೊರತೆಯಿದೆ ತಮ್ಮ ಬಾಳಿನಲ್ಲಿ ಎಂದು ಮತ್ತೆ ಮತ್ತೆ ಅವರಿಗೆನ್ನಿಸುವುದು. ಆ ಕಳವಳ ಅವರ ಎದೆಯನ್ನು ಕಲಕಿದಾಗಲೆಲ್ಲ ಅವರು ಹೊಸ ಹೊಸ ಹೆಣ್ಣುಗಳ ಬೇಟೆಗಾರಂಭಿಸುವರು. ಮದ್ಯದ ವ್ಯಸನವನ್ನಂತೂ ಎಂದೋ ರೂಢಿಸಿಕೊಂಡಿದ್ದರು. ಅದರಿಂದಲೂ ತೃಪ್ತಿ ಲಭಿಸಿರಲಿಲ್ಲ ಆ ಜೀವಕ್ಕೆ.

ತಮ್ಮ ವೃತ್ತಿಯಲ್ಲಿಯೂ ಅವರು ಹಿಂದುಳಿಯಲಿಲ್ಲ. ಹಲವಾರು ರೋಗಗಳ ಮೇಲೆ ವಿಶೇಷ ಪ್ರಯೋಗ ನಡೆಸಿ ವಿಶಿಷ್ಟ ಉಪಚಾರ ವಿಧಾನ ಕಂಡುಹಿಡಿದು ಅನೇಕರನ್ನು ಗುಣಪಡಿಸಿ ನುರಿತ ಡಾಕ್ಟರರೆಂಬ ಕೀರ್ತಿಯನ್ನು ಗಳಿಸಿದರು. ಎಂಥ ಕಠಿನ ರೋಗವಿದ್ದರೂ ಇಂದ್ರಗೇರಿಯವರ ಕೈಯೆದುರಿಗೆ ಅದು ನಿಲ್ಲಲಾರದೆಂಬುದು ಅನುಭವಕ್ಕೆ ಬಂದ ಮಾತಾಯಿತು. ಅದರಲ್ಲಿಯೂ ಯಾರಾದರೂ ಸತ್ತುಹೋದರೆ ಅದು ಡಾಕ್ಟರರ ದೋಷವೆಂದು ಪರಿಗಣಿಸಲ್ಪಡದೆ ಸತ್ತವರ ಕರ್ಮವೆಂದು ತಿಳಿಯಲ್ಪಡುತ್ತಿತ್ತು, ಅಷ್ಟೆ. ಹಾಗೆ ಅವರ ಕೀರ್ತಿ ಬೆಳೆದು ಸಿವಿಲ್ ಸರ್ಜನರೂ ಕೂಡಾ ಅವರ ಸಲಹೆ ಪಡೆಯುವಂತಾಯಿತು.

ಇಂಥ ಮೊದಲನೆಯ ವರ್ಗದ ಡಾಕ್ಟರರ ಫೀಜು ಹಣವೂ ಅವರ ಯೋಗ್ಯತೆಗೆ ತಕ್ಕಂತೆ ಭಾರಿಯಾಗಿಯೇ ಇರಬೇಕಾದುದು ಅಗತ್ಯವಷ್ಟೆ? ಅವರಿಗೆ ಫೀ ಕೊಡುವುದೆಂದರೆ ಸಾಮಾನ್ಯ ಜನರಿಗೆ ಸಿಲುಕದ ಮಾತು. ಬಡ ಬಗ್ಗರು ಅವರ ಆಸ್ಪತ್ರೆಯಲ್ಲಿ ಅಡಿಯಿರಿಸುವಂತಿರಲಿಲ್ಲ. ನೂರಾರು ರೂಪಾಯಿ ಸುರಿಯುವ ಸಿರಿವಂತರನ್ನು ನೋಡುವುದಕ್ಕೆ ಸಮಯವಿಲ್ಲದಿರುವಾಗ ಡಾಕ್ಟರರು ಬಡವರನ್ನು ಭೆಟ್ಟಿಯಾಗಲು ಸಾಧ್ಯವಾಗುವುದಾದರೂ ಹೇಗೆ? ತಮ್ಮ ಹತ್ತಿರ ಬರುವ ಇಂಥ ಚಿಲ್ಲರೆ ಜನಗಳನ್ನೆಲ್ಲ ಸಣ್ಣಪುಟ್ಟ ಡಾಕ್ಟರರ ಕಡೆ ಕಳಿಸುವ ಹೊಸ ಉಪಕ್ರಮವೊಂದನ್ನು ಇಂದ್ರಗೇರಿಯವರು ಆರಂಭಿಸಿದರು. ಅಂಗಡಿ ಬಾಡಿಗೆ, ಕಂಪೌಂಡರ ಸಂಬಳಗಳನ್ನು ಕೊಡಲು ಶಕ್ತಿಯಿಲ್ಲದೆ ಒದ್ದಾಡಿಕೊಳ್ಳುತ್ತಿದ್ದ ಬಡ ಡಾಕ್ಟರುಗಳನೇಕರು ಇಂದ್ರಗೇರಿಯವರ ಕೃಪಾಛತ್ರದಲ್ಲಿ ನಾಲ್ಕುಕಾಸು ಸಂಪಾದಿಸಿಕೊಂಡರು. ಇಂದ್ರಗೇರಿಯವರಿಂದ ಕಳಿಸಲ್ಪಡುವ ಬಡರೋಗಿಗಳನ್ನು ದೊರಕಿಸಲು ಈ ಮರಿ ಡಾಕ್ಟರುಗಳಲ್ಲಿ ಒಂದು ಸ್ಪರ್ಧೆಯೇ

ನಡೆದಂತಾಯಿತು. ಇಂದ್ರಗೇರಿಯವರು ಮಾತ್ರ ಯಾರ ಬಗೆಗೂ ವಿಶೇಷ ಪಕ್ಷಪಾತ ತೋರಿಸದೆ ಎಲ್ಲರನ್ನು ಒಂದೇ ರೀತಿಯಿಂದ ಕಾಣುತ್ತ ಬಂದು ಎಲ್ಲರಿಗೂ ಪ್ರಿಯರಾದರು.

ಇಂದ್ರಗೇರಿಯವರ ಈ ಯೋಜನೆಯಿಂದಾಗಿ ಸಿರಿವಂತರೂ ಸಿರಿವಂತರೆಂದು ಮೆರೆಯುವ ಅಭಿಲಾಷೆಯುಳ್ಳವರೂ ಬೇರಾವ ಡಾಕ್ಟರರ ಬಳಿಗೂ ಹೋಗದೆ ಇವರ ಹತ್ತಿರವೇ ಬರುವಂತಾಯಿತು. ಇಂದ್ರಗೇರಿಯವರ ಹತ್ತಿರ ಹೋಗುವುದೆಂದರೆ ಅದೂ ಒಂದು ಗೌರವದ ವಿಷಯವೆಂದು ಭಾವಿಸುವ ಮಹಾನುಭಾವರೂ ಇದ್ದರು. ಇಂಥವರಿಂದಾಗಿ ಇಂದ್ರಗೇರಿಯವರ ಬೊಕ್ಕಸವೂ ದಿನೇದಿನೇ ಭಾರವಾಗುತ್ತ ಬಂತು.

ಮೋಜಣ್ಣವರ್ ವಕೀಲರಿಗೆ ಗನೋರಿಯಾ ರೋಗ ಬಂದು ತೊಂದರೆ ಪಟ್ಟುಕೊಳ್ಳುವಂತಾಗುತ್ತಲೂ 'ಉಚ್ಚದರ್ಜೆ'ಯ ಗೃಹಸ್ಥರಾದ ಅವರು ಇಂದ್ರಗೇರಿಯವರ ಆಸ್ಪತ್ರೆಗೆ ಪಾದ ಬೆಳಸಬೇಕಾದ ಪ್ರಸಂಗ ಬಂತು. ರೋಗ ಗುಣವಾಗುವುದರೊಳಗಾಗಿ ಒಂದೇ ಜಾತಿಯ ಹಕ್ಕಿಗಳಾದ ಅವರಿಬ್ಬರಿಗೂ ಸ್ನೇಹ ಬೆಳೆದು ಆತ್ಮೀಯತೆಯೂ ತಲೆದೋರಿತು. ಆಗಲೇ ಡಾಕ್ಟರರು ಮೋಜಣ್ಣವರ ಮನೆಗೂ ಹೋಗಿ ಬರತೊಡಗಿದರು. ಒಂದು ದಿನ ಆ ರೋಗದ ವಿಚಾರವಾಗಿಯೇ ಮಾತು ನಡೆದಿದ್ದಾಗ ಡಾಕ್ಟರರು ಹೇಳಿದರು :

"ಅಲ್ಲ, ವಕೀಲರೆ, ನಿಮಗೇನೋ ಗುಣವಾಯ್ತು. ನೀವು ಪಾರಾದಿರಿ. ಆದರೆ, ನೀವು ಚಿಕಿತ್ಸೆಗಾಗಿ ನನ್ನ ಹತ್ತರ ಬರೂದಕ್ಕೆ ಮೊದಲು ಈ ರೋಗ ನಿಮ್ಮ ಪತ್ನಿಯವರಿಗೂ ಅಂಟಿಕೊಂಡಿರಬಹುದಲ್ಲ, ನಿಮ್ಮಿಂದ ?"

"ಹೌದೌದು. ಹಾಗೂ ಆಗಿರಬಹುದು," ಎಂದರು ಮೋಜಣ್ಣವರ್.

"ಈಗ ನೀವು ಅವರೊಡನೆ ಸಂಬಂಧ ಮಾಡಿದ ಕೂಡಲೆ ಮತ್ತೆ ನಿಮಗೆ ಆ ರೋಗ ಅಂಟಿಕೊಳ್ತದೆ. ನಾನು ಚಿಕಿತ್ಸೆ ಮಾಡಿದ್ದೆಲ್ಲಾ ವ್ಯರ್ಥವಾಗ್ತದೆ."

"ಹೌದೌದು. ಹಾಗೂ ಆಗ್ತದೆ," ಎಂದು ಒಪ್ಪಿಕೊಂಡರು ಮೋಜಣ್ಣವರ್.

"ಅದಕ್ಕೆ ಈಗಲೇ ಏನಾದರೂ ಉಪಾಯ ಮಾಡುವದು ನೆಟ್ಟಗಲ್ಲವೇನು ?"

"ಹೌದೌದು. ಹಾಗೇ ಮಾಡಬೇಕು," ಎಂದರು ಮೋಜಣ್ಣವರ್. "ನಮ್ಮ ಮಿಸೆಸ್‌ಗೂ ಚಿಕಿತ್ಸೆಯಾಗಬೇಕು ಅಂತೀರಿ ಅಲ್ಲವೇನು?"

"ಹೌದು ಆಗಲೇಬೇಕು. ಇದು ಬಹಳ ಭಯಂಕರ ರೋಗ. ಹೀಗೇ ಬಿಟ್ಟರೆ ವಂಶವಂಶಗಳ ತನಕ ತನ್ನ ವಿಷ ಪಸರಿಸ್ತದೆ. ನಿಮ್ಮ ಪತ್ನಿಯವರಿಗೂ ಈಗಿಂದೀಗ ಚಿಕಿತ್ಸೆ ಮಾಡೋಣ."

"ಓಹ್ಹೊ. ಯಾಕಾಗಲೊಲ್ಲದು?" ಎಂದರು ಮೋಜಣ್ಣವರ್.

"ನಾಳೆ ಮುಂಜಾನೆ ಎದ್ದ ಕೂಡಲೆ ಅವರು ತಮ್ಮ ಮೂತ್ರವನ್ನ ಬಾಟಲಿಯಲ್ಲಿ ಹಿಡಿದಿಟ್ಟುಕೊಂಡು ನನ್ನ ಹತ್ತರ ಬರಲಿ. ಆಮೇಲೆ ನಾನು ಪರೀಕ್ಷಿಸಿ ಹೇಳುತೀನಿ. ಮುಂದೆ ಚಿಕಿತ್ಸೆಯ ಮಾತು," ಎಂದರು ಡಾಕ್ಟರು.

"ಆಯ್ತು – ನಾಳೆ ಅವಳನ್ನ ಕಳಿಸಿಕೊಡ್ತೀನಿ," ಎಂದು ಹೇಳಿ ಮೋಜಣ್ಣನರು ಮನೆಗೆ ಬಂದರು. ಮೂತ್ರವನ್ನು ಹಿಡಿದುಕೊಂಡು ಡಾಕ್ಟರ ರಲ್ಲಿಗೆ ಹೋಗಿ ಬರುವ ವಿಚಾರವನ್ನು ತಿಳಿದು ಗೌರೀದೇವಿ ಮೂಗುಮುರಿದಳು.

"ನೀವೇ ಬೇಕಾದರೆ ತಗೊಂಡು ಹೋಗಿರಿ. ನಾನೇನು ಅಲ್ಲಿಗೆ ಹೋಗುವದಿಲ್ಲ," ಎಂದು ಸ್ಪಷ್ಟವಾಗಿ ಹೇಳಿದಳು ಆ ಗರತಿ.

ಮೋಜಣ್ಣವರಂಥ ಉಚ್ಚದರ್ಜೆಯ ಸದ್ಗೃಹಸ್ಥರು ಹೆಂಡತಿಯ ಮೂತ್ರದ ಸೀಸೆ ಹಿಡಿದುಕೊಂಡು ಹೋಗುವುದು ಅವರ ಘನತೆಗೆ ಕುಂದಲ್ಲವೆ? ಅವರು ಮತ್ತೊಂದು ಮಾತನಾಡದೆ ಅಲ್ಲಿಂದೆದ್ದು ಕ್ಲಬ್ಬಿಗೆ ನಡೆದರು.

ಕೆಲವು ದಿನಗಳು ಹಾಗೇ ಕಳೆದುವು. ರೋಗದ ಬಾಧೆ ತಡೆಯ ಲಾರದಷ್ಟು ಬೆಳೆಯುತ್ತಲೂ ಲೀಲಾದೇವಿಯ ಹತ್ತಿರ ತನ್ನ ಗೋಳನ್ನು ತೋಡಿಕೊಂಡಳು ಗೌರೀದೇವಿ. ಲೀಲಾದೇವಿ ಅವಳ ಅಂಜಿಕೆಯನ್ನು ತೆಗೆದು ಹಾಕಿ ಡಾಕ್ಟರರ ಆಸ್ಪತ್ರೆಯ ದಾರಿಗೆ ತಂದುಬಿಟ್ಟಳು. ಗೌರೀದೇವಿಯಲ್ಲಿ ಉಳಿದಿದ್ದ ಅಲ್ಪಸ್ವಲ್ಪ ಸಂಕೋಚವನ್ನು ಅಳಿಸಿ ಅವಳನ್ನು ತಮ್ಮ ಜಾಲದಲ್ಲಿ ಸಿಲುಕಿಸಿಕೊಳ್ಳಲು ಡಾಕ್ಟರರಿಗೆ ಅಂಥ ಕಷ್ಟವೇನೂ ಆಗಲಿಲ್ಲ.

ಗನೋರಿಯಾ ರೋಗವೆಂದರೇನು ಅಂಥಿಂಥ ರೋಗವೇ? ಒಂದೆರಡು ದಿನಗಳಲ್ಲಿ ಗುಣವಾಗುವಂಥ ರೋಗವೇ? ಔಷಧೋಪಚಾರಕ್ಕೆಂದು ಹತ್ತು ಹದಿನೈದು ದಿನಗಳವರೆಗೆ ಅವಳು ಡಾಕ್ಟರರ ಆಸ್ಪತ್ರೆಗೆ ಹೋಗಿಬರಬೇಕಾಯಿತು. ಈ ಮಧ್ಯೆ ಅವಳ ತಂದೆಯವರು ನಗರಕ್ಕೆ ಬಂದವರು ಮಗಳ ಕಾಹಿಲೆಯ

ವಿಚಾರ ತಿಳಿದು ಕಳವಳಗೊಂಡರು. ತಮ್ಮಂಥ ದೊಡ್ಡ ಗೌಡರ ಮಗಳು ದಿನವೂ ತಾನೇ ಆಸ್ಪತ್ರೆಗೆ ಹೋಗಿ ಔಷಧಿ ತರುವುದುಂಟೇ? ಛೆ. ಎಂಥ ಅವಮಾನಕಾರಕ ಸಂಗತಿ! ಅಳಿಯನಂತೂ ಬಡವ. ಆಳುಗಳನ್ನಿಟ್ಟುಕೊಳ್ಳುವ ಶಕ್ತಿಯಿಲ್ಲ. ವಕೀಲನಾಗಿರುವ ತನ್ನ ಅಳಿಯನೂ ಔಷಧಿಗಾಗಿ ಅಲೆದಾಡುವುದು ಸರಿಯಲ್ಲ.

"ಮಗಳೇ, ನಾಳಿನಿಂದ ನೀ ಆಸ್ಪತ್ರಿಗೆ ಹೋಗಬ್ಯಾಡ. ಡಾಕ್ಟರೇ ಇಲ್ಲಿಗೆ ಬಂದು ಹೋಗಲಿ. ತಮ್ಮ ಆಳಿನ ಕೈಯಿಂದ ಔಷಧ ಕಳಿಸಲಿ," ಎಂದರು ಗೌಡರು.

"ಡಾಕ್ಟರು ದಿನಾ ಬಂದು ಹೋಗೂದಂದರೆ ನೂರಾರು ರೂಪಾಯಿ ಫೀ ಆಗ್ತದಪ್ಪಾ."

"ಫೀ ಹೆಚ್ಚೋ, ನಿನ್ನ ಮರ್ಯಾದೆ ಹೆಚ್ಚೋ? ಅದೆಷ್ಟಾದರೂ ಚಿಂತಿಲ್ಲ. ನಾ ಕೊಡ್ತೇನಿ. ನೀ ಮಾತ್ರ ನಾಳಿನಿಂದ ಅಲ್ಲಿ ಹೋಗಬ್ಯಾಡವ್ವಾ. ನೀ ನಮ್ಮಲ್ಲೇ ಇದ್ದಾಗ ನಿನಗ ಇಂಥ ಜಡ್ಡಾಗಿದ್ದರೆ ನಾ ಛೋಗಗೊಡುತಿದ್ದೆನೇನು ನಿನ್ನ? ನನಗಾದರೂ ಏನು ಕಡಮಿಯಾಗ್ಯೆತಿ? ಯುದ್ಧ ಸುರು ಆದಂದಿನಿಂದ ನಮ್ಮ ಉತ್ಪನ್ನ ಹತ್ತು ಪಟ್ಟು ಬೆಳೆದೈತಿ. ಸೇಂಗಾಕ್ಕ ಹತ್ತುಸಾವಿರ ಬಂದರೆ ಹತ್ತಿಗೆ ಇಪ್ಪತ್ತು ಸಾವಿರ ಬರುತೈತಿ. ನಿನ್ನ ಡಾಕ್ಟರ ಫೀಗಾಗಿ ಒಂದು ನೂರು, ಮನಿಯ ಖರ್ಚಿಗಾಗಿ ಒಂದೂವರೆ ನೂರು ರೂಪಾಯಿ ಹಿಡಿದರೂ ವರ್ಷಕ್ಕ ಮೂರುಸಾವಿರ ಆದೀತು. ಇಷ್ಟೇ ಹೌದಲ್ಲೋ? ಹೋಗಲಿ ಬಿಡು. ನಿನ್ನ ಅಣ್ಣ ಲಿಂಗನಗೌಡಗೂ ನಿನ್ನ ಮ್ಯಾಲ ಬಹಾಳ ಪ್ರೀತಿ. ಯಾವಾಗಲೂ ನಿನ್ನ ಚಿಂತೀನೇ ಮಾಡುತಾನೆ. ಒಂದು ಹಬ್ಬ ಬರಲಿ, ಚಲೋ ಬೆಳೀ ಬರಲಿ, ಹೆಚ್ಚಿನ ಧಾರಣಿ ಬರಲಿ, ತಂಗಿಯಿಲ್ಲಲ್ಲಾ ಅಂತ ನಿನ್ನ ನೆನೀತಾನೆ. ನೀನೇನೂ ಚಿಂತೀ ಮಾಡಬ್ಯಾಡವ್ವಾ ರೂಪಾಯಿಗೆ. ಊರಿಗೆ ಹೋದ ಕೂಡಲೆ ಕಳಿಸಿಕೊಡ್ತೇನಿ," ಎಂದು ಹೇಳಿ ಹೋದ ಗೌಡರು ಹೇಳಿದ ಪ್ರಕಾರ ಹಣವನ್ನು ಕಳಿಸಿಕೊಟ್ಟರು.

ಸರಿ. ಡಾಕ್ಟರರಲ್ಲಿಗೆ ಗೌರೀದೇವಿ ಹೋಗುವುದು ತಪ್ಪಿ, ಡಾಕ್ಟರರೇ ಅವಳಲ್ಲಿಗೆ ಬರುವಂತಾಯಿತು. ಅಂದಿನಿಂದ ಅವರು ಮೋಜಣ್ಣವರಿಗೂ 'ಫ್ಯಾಮಿಲಿ ಡಾಕ್ಟರ'ರಾದರು.

ಬೆಳಗಿನ ಸಮಯದಲ್ಲಿ ರೋಗಿಗಳ ಗದ್ದಲ ಮುಗಿದ ಬಳಿಕ ಕಾರು

ಬಿಟ್ಟುಕೊಂಡು ಡಾಕ್ಟರರು ತಮ್ಮ ಕಾಯಂ ಗಿರಾಕಿಗಳ ಮನೆಗಳಿಗೆ ಭೆಟ್ಟಿ ಕೊಡಲು ಹೊರಡುವ ಪರಿಪಾಠವಿತ್ತು. ಅನೇಕ ಮನೆಗಳನ್ನು ಸುತ್ತಿ ಅವರು ಮೋಜಣ್ಣನವರ ಮನೆಗೆ ಬಂದು ಮುಟ್ಟುವಾಗ ಹನ್ನೆರಡು ಗಂಟೆಯಾಗಿರುತ್ತಿತ್ತು. ಅರ್ಥಾತ್ ಆ ಸಮಯದಲ್ಲಿ ವಕೀಲರು ಮನೆಯಲ್ಲಿರುತ್ತಿರಲಿಲ್ಲ. ಖಟ್ಲೆಗಳಿರಲಿ, ಇಲ್ಲದಿರಲಿ, ಮಧ್ಯಾಹ್ನ ಮನೆಯಲ್ಲಿರುವುದೆಂದರೆ ವಕೀಲ ಎಂಬ ಬಿರುದಿಗೇ ಕಲಂಕಪ್ರಾಯವೆಂದು ಮೋಜಣ್ಣನವರ ಮತ. ಅಂತೆಯೆ ಅವರು ಹನ್ನೊಂದು ಗಂಟೆಗೆ ಮನೆಯಿಂದ ಹೊರ ಹೊರಟು ಲೀಲಾದೇವಿಯವರನ್ನು ಕಂಡು, ಕೋರ್ಟಿನ ಅಂಗಳದಲ್ಲಿ ಅಲೆದು, ಕ್ಲಬ್ಬಿಗೆ ಹೋಗಿ ರಾತ್ರಿಯ ಎಂಟು ಒಂಭತ್ತು ಗಂಟೆಯ ಹೊತ್ತಿಗೆ ಊಟಕ್ಕೆ ಹೊರಡುತ್ತಿದ್ದರು. ಮಧ್ಯಾಹ್ನ ಹನ್ನೆರಡು ಗಂಟೆಯ ಹೊತ್ತಿಗೆ ಅವರ ಮನೆಗೆ ಬರುತ್ತಿದ್ದ ಇಂದ್ರಗೇರಿಯವರು ಹೊರಡುವ ಅವಸರ ಮಾಡದೆ ತಾಸೆರಡು ತಾಸು ನಿಂತು ಗೌರೀದೇವಿಯ ಆದರಾತಿಥ್ಯದಿಂದ ಸಂತುಷ್ಟರಾಗಿ ಎರಡು ಎರಡೂವರೆ ಗಂಟೆಯ ವೇಳೆಗೆ ಕಾರು ಏರುತ್ತಿದ್ದರು. ಡಾಕ್ಟರರು ಅಷ್ಟು ಹೊತ್ತು ಅಲ್ಲಿರುತ್ತಿದ್ದುದರ ಬಗೆಗೆ ನೆರೆಹೊರೆಯ ಜನರು ಪಿಸು ಮಾತನಾಡಿಕೊಳ್ಳಲು ಆರಂಭಿಸಿದ್ದರಾದರೂ ಗೌರೀದೇವಿಯ ಎದುರಿಗಾಗಲಿ ಮೋಜಣ್ಣನವರ ಎದುರಿಗಾಗಲಿ ಚಕಾರವೆತ್ತುವ ಧೈರ್ಯ ಅವರಿಗಿರಲಿಲ್ಲ. ಬಾಜೀರಾಯರ ಪತ್ನಿ ತಾರಾಬಾಯಿಯವರಿಗೂ ಡಾಕ್ಟರರ ಬಗೆಗೆ ಸಂದೇಹ ಬರುತ್ತಿದ್ದಿತಾದರೂ ಬಾಡಿಗೆದಾರರ ಸಂಸಾರಕ್ಕೆ ಸಂಬಂಧಪಟ್ಟ ವಿಚಾರ ಹೆಚ್ಚು ಯೋಚಿಸುವುದೇ ತರವಲ್ಲವೆಂದು ಬಗೆದು ಅವರೂ ಮೌನ ತಳೆದಿದ್ದರು.

ಡಾಕ್ಟರರ ಸಂಗದಲ್ಲಿ ವ್ಯಭಿಚಾರದ ರುಚಿಯುಂಡ ಗೌರೀದೇವಿ ಅವರೊಬ್ಬರಿಂದಲೇ ತೃಪ್ತಿ ಪಡೆಯದೆ ಬೇರೆ ಗಂಡಸರನ್ನು ಹುಡುಕುವಂತಾಯಿತು. ಅವಳ ತಲೆಯಲ್ಲಿ ಸ್ವೇಚ್ಛಾಚಾರದ ವಿಚಾರಗಳನ್ನು ಬಿತ್ತಲು ಲೀಲಾದೇವಿಯೂ ಸಾಕಷ್ಟು ಶ್ರಮಿಸುತ್ತಿದ್ದಳು.

“ನಿನ್ನ ಗಂಡ ನೂರಾರು ಹೆಂಗಸರ ರುಚಿ ನೋಡುತಾನೆ. ನೀನ್ಯಾಕೆ ಹತ್ತಿಪ್ಪತ್ತು ಮಂದಿ ಗಂಡಸರನ್ನು ನೋಡಿಕೋಬಾರದು?” ಎಂದು ಲೀಲಾದೇವಿ ವಾದಿಸಿದಾಗ ಮನಸ್ಸಿನಲ್ಲಿಯೇ ಆ ಮಾತನ್ನು ಮೆಲುಕುಹಾಕುವಳು ಗೌರೀದೇವಿ.

ಮನಸ್ಸಿನಲ್ಲಿ ಬಂದ ಮಾತು ಕೃತಿಯಲ್ಲಿ ಬರುವುದಕ್ಕೂ ವಿಲಂಬವಾಗಲಿಲ್ಲ. ತಾನು ಅಡ್ಡದಾರಿ ಹಿಡಿದು ಹೊರಟ ಸಂಗತಿ ಗಂಡನಿಗೆ ಗೊತ್ತಾದರೆ ಎಲ್ಲಿ

ತೊಂದರೆಯಾಗುವುದೋ ಎಂದು ಒಳಗೊಳಗೇ ದಿಗಿಲುಗೊಂಡಿದ್ದ ಲೀಲಾದೇವಿ, ಗಂಡನ ಬಾಯಿ ಮುಚ್ಚಿಸುವುದಕ್ಕೆಂದು ಅವನಿಗೂ ಹೊಸ ಹೆಣ್ಣು ಹುಡುಕಿ ಕೊಡುವ ಹೊಂಚು ಹೂಡಿದ್ದಳು. ಗೌರೀದೇವಿಯನ್ನು ತನ್ನ ಗಂಡನ ಬಲೆಗೆ ಸೇರಿಸಿದರೆ ಅವನ ಜುಟ್ಟು ತನ್ನ ಕೈಯಲ್ಲುಳಿದು ಅವಳೂ ತನ್ನ ಕೈಯಲ್ಲುಳಿಯುವ ಳೆಂದು ಲೆಕ್ಕ ಹಾಕಿಕೊಂಡ ಆ ಸಾಧ್ವೀಮಣಿ, ಗೌರೀದೇವಿ ಮತ್ತೆ ಮತ್ತೆ ತಮ್ಮ ಮನೆಗೆ ಬರುವಂತೆ ಮಾಡಿ ಒಂದು ದಿನ ಕೆಲಸವನ್ನೂ ಸಾಧಿಸಿಬಿಟ್ಟಳು. ಗೌರೀದೇವಿಯ ಸಹಜಸೌಂದರ್ಯವನ್ನು ಕಂಡು ಬಹಳ ದಿನಗಳಿಂದ ಜೊಲ್ಲು ಸುರಿಸುತ್ತಲಿದ್ದ ಹರಕಸೆಟ್ಟಿಯವರಿಗೂ ತೃಪ್ತಿಯಾಯಿತು, ತನ್ನ ಗಂಡನ ಮೇಲಿ ಸೇಡು ತೀರಿಸಿಕೊಂಡೆನೆಂದು ಗೌರೀದೇವಿಗೂ ತೃಪ್ತಿಯಾಯಿತು, ತನ್ನ ಹೊಂಚು ಫಲಿಸಿತೆಂದು ಲೀಲಾದೇವಿಗಂತೂ ಪೂರ್ಣತೃಪ್ತಿಯಾಯಿತು.

ಅಂದಿನಿಂದ ಒಂದು ಮೋಜಿನ ಉಪಕ್ರಮವೇ ಮೊದಲಾಯಿತು. ಹರಕಸೆಟ್ಟಿಯವರು ಮನೆಯಲ್ಲಿದ್ದು ಲೀಲಾದೇವಿ ಇಲ್ಲದಿರುವಾಗ ಗೌರೀದೇವಿ ಅವರ ಮನೆಗೂ, ಅದೇ ವೇಳೆಯಲ್ಲಿ ಮೋಜಣ್ಣವರು ಮನೆಯಲ್ಲಿರುವಾಗ ಲೀಲಾದೇವಿ ಅವರ ಮನೆಗೂ ಹೋಗಿಬರುವುದಕ್ಕಾರಂಭವಾಯಿತು. ಎಂಟು ಹತ್ತು ದಿನಗಳ ಕಾಲ ಈ ಜೋಡಿಗಳು ಈ ರೀತಿಯಾಗಿ ಮೋಜು ಮಾಡಿದ ಬಳಿಕ ಇಬ್ಬರು ಗಂಡಸರಿಗೂ ತಮ್ಮ ತಮ್ಮ ಪತ್ನಿಯರ ವಿಷಯವಾಗಿ ಸಂದೇಹ ಮೂಡಿತು.

"ಎಂಟು ದಿನಗಳಿಂದ ಮಧ್ಯಾಹ್ನ ಎಲ್ಲಿ ಹೋಗುತ್ತಿದ್ದಿಯೇ?" ಎಂದು ಕೇಳಿದರು ಮೋಜಣ್ಣವರು – ಗೌರೀದೇವಿಯನ್ನು.

"ಎಂಟು ದಿನದಿಂದ ಮಧ್ಯಾಹ್ನ ನಾ ಹೊರಗೆ ಹೋದಾಗ ಇಲ್ಲಿ ಯಾರು ಬಂದಿರುತಾರೆ?" ಎಂಬ ಮರುಪ್ರಶ್ನೆ ಒಡನೆಯೇ ಬಂತು.

"ಯಾರಾದರೂ ಬರಲಿ. ನೀ ಎಲ್ಲಿ ಹೋಗುತ್ತೀ ಅನ್ನುವದನ್ನ ಮೊದಲು ಹೇಳು." ಎಂದು ಗದರಿಸಿದರು ಮೋಜಣ್ಣವರು. ಹೆಂಡತಿಯೆದುರಿಗೆ ಇಂಥ ಧೈರ್ಯದಿಂದ ಈ ಮೊದಲೆಂದೂ ಅವರು ಮಾತನಾಡಿರಲಿಲ್ಲ. ಅವರ ಅಪೂರ್ವ ಸಾಹಸವನ್ನು ಕಂಡು ಗೌರೀದೇವಿಗೂ ಕೌತುಕವೆನ್ನಿಸುತ್ತಿತ್ತು.

"ನೀವು ಹೀಗೆಲ್ಲಾ ನನಗೆ ಅನ್ನೂದಾದರೆ ಈಗಿಂದೀಗ ತವರುಮನೆಗೆ

ಹೋಗಿ ಬಿಡ್ತೀನಿ. ಮತ್ತೊಮ್ಮೆ ಎಂದೂ ಈ ದರಿದ್ರ ಮನಿಯಾಗ ಕಾಲು ಹಾಕೂದಿಲ್ಲ," ಎಂದು ಅವಳು ಧ್ವನಿಯನ್ನೆರಿಸಿ ಹೇಳಿದಳು.

ಮತ್ತೊಂದು ಶಬ್ದವೂ ಹೊರಬರಲಿಲ್ಲ ಮೋಜಣ್ಣವರ ಬಾಯಿಂದ. ಅವಳು ತವರುಮನೆಗೆ ಹೊರಟುಹೋಗಿ ಬಿಟ್ಟರೆ ಇಲ್ಲಿ ಇವರ ಮನೆ ನಡೆಯುವುದು ಹೇಗೆ? ವಕೀಲರಿಗೆ ಊಟ ಸಿಕ್ಕುವುದು ಹೇಗೆ? ತಂದೆಯ ಮನೆಯಿಂದ ಹಣ ತಂದು ತನ್ನ ಹೊಟ್ಟೆಗೆ ಹಾಕುವ ಅನ್ನದಾತೆಯನ್ನು ಅವರು ತಾವಾಗಿಯೆ ಕಳೆದು ಕೊಳ್ಳುವುದುಂಟೇ? "ಏನಾದರೂ ಮಾಡಿಕೊಳ್ಳಲಿ. ನಾನೂ ಮಾಡುವ ದಿಲ್ಲವೇನು? ಅವಳದೂ ಜೀವವಲ್ಲವೇನು, ಪಾಪ. ಅವಳೂ ಸ್ವಲ್ಪ ಚೈನಿ ಹೊಡೆಯಲಿ," ಎಂದು ತಮ್ಮಷ್ಟಕ್ಕೆ ತಾವೇ ಹೇಳಿಕೊಂಡು ವಕೀಲರು ಆ ವಿಷಯವನ್ನು ಅಷ್ಟಕ್ಕೇ ಬಿಟ್ಟುಕೊಟ್ಟರು. ಮುಂದೆ ಅವರ ದಾರಿ ಅವರಿಗೆ, ಇವಳ ದಾರಿ ಇವಳಿಗಾಯಿತು. ಆ ವಿಷಯವನ್ನು ಎಂದಿಗೂ ಚರ್ಚಿಸ ಕೂಡದೆಂದು ಇಬ್ಬರೂ ಮನಸ್ಸಿನಲ್ಲಿಯೇ ಒಪ್ಪಂದ ಮಾಡಿಕೊಂಡಂತಾಯಿತು.

ಹರಕಸೆಟ್ಟಿಯವರ ಮನೆಯಲ್ಲಾದುದೂ ಹಾಗೆಯೇ.

"ನೀವು ನೂರಾರು ಸೂಳೇರ ಹತ್ತಿರ ಹೋಗಿ ನಮಗೆ ಕೆಟ್ಟ ಕೆಟ್ಟ ರೋಗ ತಂದಿಟ್ಟರೂ ನಡೀತದೆ. ನಾವು ನಿಮ್ಮ ಗೆಳೆಯರ ಕೂಡ ಸ್ವಲ್ಪ ಮಾತಾಡಿದರೂ ನಿಮಗೆ ಸಂಶಯ. ಇಬ್ಬರು ಹೆಂಡರನ್ನ ಕಟ್ಟಿಕೊಂಡವರ ಹಣೇಬರಹನೇ ಇಷ್ಟು. ನಿಮಗೆ ಬ್ಯಾಡಾದರೆ ಹೇಳಿಬಿಡಿರಿ. ನನಗೇನು ತವರುಮನೆಯಾಗ ಕಡಮೆಯಿಲ್ಲ. ಹೊರಟುಹೋಗಿಬಿಡ್ತೀನಿ, ಮುಂದೆ ನೀವು ಅರಾಮಾಗಿ ಇದ್ದೀರಂತೆ ನಿಮ್ಮ ಸಾವಿರ ಸೂಳೇರನ್ನ ಕಟ್ಟಿಕೊಂಡು!" ಎಂದು ಲೀಲಾದೇವಿ ಕೂಗಾಡುತ್ತಲೂ ಸೆಟ್ಟರು ಕೈ ಜೋಡಿಸಿಕೊಂಡು ನಿಂತು ದೀನವಾಣಿಯಲ್ಲಿ ಬಿನ್ನವಿಸಿಕೊಂಡು ಅವಳ ವಾಗ್ಬಾಣಗಳನ್ನು ನಿಲ್ಲಿಸಬೇಕಾಯಿತು.

ಅಂದಿನಿಂದ ಲೀಲಾದೇವಿ ಯಾವ ಭಯವನ್ನು ಇಟ್ಟುಕೊಳ್ಳದೆ ಇಷ್ಟ ಬಂದ ಕಡೆ ಹೋಗಿಬರುವುದಕ್ಕಾರಂಭಿಸಿದಳು. ಎಷ್ಟೋ ಬಾರಿ ಅವಳು ಗೌರೀದೇವಿ ಕೂಡಿಕೊಂಡೇ ಬೀದಿಗಳಲ್ಲಿ ಹೊರಡುವರು. ದಿನಗಳೆದ ಹಾಗೆ ಈ ಜೋಡಿ ನಗರದ ಜನರಿಗೆಲ್ಲ ಚಿರಪರಿಚಿತವಾದುದಾಯಿತು. ಅವರಿಬ್ಬರೂ ಕೂಡಿ ನಗರದ ಬೀದಿಗಳಲ್ಲಿ ಹೋಗುವಾಗ ಅವರಿಗೆ ಕೇಳಿಸುವಂಥ ಧ್ವನಿಯಲ್ಲಿಯೆ ಕಿಲಾಡಿಗಳು,

"ಯಾರನ್ನ ಮೋಸಗೊಳಿಸಿ ಎಷ್ಟು ರೂಪಾಯಿ ಹಾರಿಸಿಕೊಂಡು ಹೊರಟನೋ!" ಎನ್ನುವುದೂ ಆರಂಭವಾಯಿತು.

ಅಂಥ ಮಾತುಗಳಿಂದಲೂ ಅವರಿಗೆ ನಾಚಿಕೆಯೆನ್ನಿಸುತ್ತಿರಲಿಲ್ಲ. ಹಾಗೆ ಆಡಿದವರತ್ತ ತಿರುಗಿ ಮುಗುಳ್ನಕ್ಕು ಅವರು ಮುಂದೆ ಸಾಗುವರು. "ನಿನಗೂ ಧೈರ್ಯ ಇದ್ದರೆ ನೀನೂ ಬಾ ನಮ್ಮ ಹಿಂದೆ. ಹೀಗ್ಯಾಕೆ ಹಿಂದೆ ಕೂತು ಹೆಂಗಸಿನಂತೆ ಮಾತಾಡುತ್ತೀ!" ಎಂಬ ಆಹ್ವಾನವಿರುತ್ತಿತ್ತು ಆ ನಗುವಿನಲ್ಲಿ. "ಥೂ! ಇಂಥ ಹೊಲಸು ಹೆಂಗಸರ ಉಸಾಬರಿಯಾದರೂ ಯಾಕೆ?" ಎಂದುಕೊಂಡು ಆ ಕಿಲಾಡಿಗಳೂ ಸುಮ್ಮನಾಗುವರು. ಈ ಹೆಂಗಸರ ಬೇಟಿ ಒಂದು ಓಣಿಯಲ್ಲಿ ನಡೆಯುತ್ತಿದ್ದರೆ ಅವರ ಗಂಡಂದಿರ ಬೇಟಿ ಇನ್ನೊಂದು ಓಣಿಯಲ್ಲಿ ನಡೆಯುವುದು, ಗಂಡಂದಿರ ಕಾರ್ಯಕ್ರಮಗಳ ವಿಚಾರ ಹೆಂಡಂದಿರಿಗೂ ಹೆಂಡಂದಿರದು ಗಂಡಂದಿರಿಗೂ ಮೊದಲೇ ತಿಳಿದಿರುತ್ತಿದ್ದಿತಾದರೂ ಎರಡು ರಾಜ್ಯಗಳಿಗೆ ಸೇರಿದ ಪೋಲೀಸರಂತೆ ಈ ದಂಪತಿಗಳು ಒಬ್ಬರ ಲೀಲಾರಂಗದಲ್ಲಿ ಇನ್ನೊಬ್ಬರು ಪ್ರವೇಶಿಸುತ್ತಿರಲಿಲ್ಲ.

ಗೌರೀದೇವಿ ಮುನಿದುಕೊಂಡರೆ ಮೋಜಣ್ಣವರ ಆಟ ಹೇಗೆ ನಡೆಯದಂತಾಗುತ್ತಿತ್ತೋ ಹಾಗೇ ಲೀಲಾದೇವಿ ಕೋಪಿಸಿಕೊಂಡರೆ ಹರಕಸೆಟ್ಟಿಯವರ ವಕೀಲವೃತ್ತಿಗೇ ಪೆಟ್ಟುಬೀಳುವ ಸಂಭವವಿತ್ತು. ಲೀಲಾದೇವಿಯ ಅಣ್ಣಂದಿರಿಬ್ಬರು ಓರೆಕೋರೆ ಜಿಲ್ಲೆಯಲ್ಲಿಯೆ 'ತಲಾಟಿ' ಕೆಲಸ ಮಾಡುತ್ತಿದ್ದರು. 'ತಲಾಟಿ' ಎಂದರೆ ಶಾನುಭೋಗರ ಕೆಲಸಕ್ಕಾಗಿ ಕಂದಾಯಖಾತೆಯಿಂದ ನೇಮಕಹೊಂದಿದ ನೌಕರರು. ಹಳ್ಳಿಯ ಅಜ್ಞ ಜನರಲ್ಲಿ ಪಕ್ಷಪಂಗಡಗಳನ್ನೂ ವ್ಯಾಜ್ಯಗಳನ್ನೂ ಹುಟ್ಟಿಸಿ, ಹೊಲಮನೆಗಳ ದಾಖಲೆಗಳಲ್ಲಿ ಲಂಚ ತೆತ್ತುವರ ಹೆಸರು ಹಾಕಿ ಹಾಹಾಕಾರವೆಬ್ಬಿಸಿ ಏನಕೇನಪ್ರಕಾರೇಣ ಹಳ್ಳಿಗರನ್ನು ವಕೀಲರ ಕಡೆಗೆ ಕಳಿಸುವುದು ಈ ತಲಾಟಿಗಳ ಅಡ್ಡಗಸುಬು. ಲೀಲಾದೇವಿಯ ಸಹೋದರರೂ ಈ ಕಸುಬಿನಲ್ಲಿ ಪಾರಂಗತರೇ ಆಗಿದ್ದರು. ಅವರು ಕಳಿಸುತ್ತಿದ್ದ ಕಕ್ಷಿಗಾರರಿಂದಲೇ ಹರಕಸೆಟ್ಟಿಯವರ ಸಂಸಾರ ನಡೆಯುತ್ತಿತ್ತು. ಅಂತೆಯೆ, ವಕೀಲರ ದೃಷ್ಟಿಯಲ್ಲಿ ಲೀಲಾದೇವಿಯೇ ಲಕ್ಷ್ಮಿಯಾಗಿದ್ದಳು. ಲಕ್ಷ್ಮಿ ಮುನಿದುಕೊಳ್ಳುವಂತೆ ವರ್ತಿಸಲು ಅವರೇನು ಮೂರ್ಖರಾಗಿರಲಿಲ್ಲ.

ಹರಕಸೆಟ್ಟಿಯವರಿಗೆ ಆಗ ಮೂವತ್ತು ಮೂವತ್ತೆರಡು ವರ್ಷ ವಯಸ್ಸು. ಮಧ್ಯಮವಾದ ಎತ್ತರ. ತುಸು ಸಾದಗಪ್ಪು ಬಣ್ಣ. ತೆಳ್ಳನೆಯದೂ ಅಲ್ಲ ದಪ್ಪನೆಯದೂ ಅಲ್ಲವೆಂಬಂತಿದ್ದ ಗಾತ್ರ. ಕೊಂಚ ಅಸಹ್ಯವಾಗಿ ಎದ್ದು ಕಾಣುವ ಉದ್ದಮೂಗು, ಚಂಚಲವಾದ ಕಣ್ಣು, ಅತೃಪ್ತಿ ತುಂಬಿದ ತುಟಿಗಳು, ಆ ತುಟಿಗಳನ್ನು ನೂಕಿ ಮುಂದೆ ಕಾಣುವ ಹಲ್ಲುಗಳು. ಅಂತೂ ಯಾವ ರೀತಿಯಲ್ಲಿಯೂ ಅವರು ಸುಂದರ ಪುರುಷರ ಸಾಲಿಗೆ ಸೇರುವಂಥವರಾಗಿರಲಿಲ್ಲ. ಆದರೂ ತಾನೊಬ್ಬ ಮನ್ಮಥನೆಂದೇ ಅವರ ನಂಬುಗೆ. ತಾನು ಸ್ಫುರದ್ರೂಪಿಯಲ್ಲ ವಾದರೆ ಲೀಲಾದೇವಿಯಂಥ ಹೆಣ್ಣು ತನ್ನನ್ನು ಮದುವೆಯಾಗುತ್ತಿದ್ದಳೇ? ಗೌರೀದೇವಿಯಂಥ ಚೆಲುವೆ ತನ್ನ ಪ್ರೇಯಸಿಯಾಗುತ್ತಿದ್ದಳೇ? ಎಂದು ಅವರ ಪ್ರಶ್ನೆ.

ಲೀಲಾದೇವಿಯ ಚೆಲುವಿಕೆಯದೂ ಒಂದು ವೈಶಿಷ್ಟ್ಯವೇ. ಅವಳಿಗೆ ಸುಮಾರಾಗಿ ೨೨-೨೩ ವರ್ಷದ ಪ್ರಾಯ. ವಯಸ್ಸಿಗೆ ಅಸಹಜವೆನ್ನಿಸುವಂತೆ ಕೊಬ್ಬಿ ಬೆಳೆದ ದೇಹ. ಅವಳ ಸವತಿ ಪಾರ್ವತೀದೇವಿಯದು ಮಾತ್ರ ವಯಸ್ಸಿಗೆ ತಕ್ಕುದಾದ ತೆಳ್ಳನೆಯ ಗಾತ್ರ. ಅವಳ ದೇಹ ಕಲ್ಲಿನಂತೆ ಬಿರುಸಾದುದಾಗಿದ್ದರೆ ಲೀಲಾದೇವಿಯದು ಬೂರಲರಳೆಯ ದಿಂಬಿನಂಥದು; ನೋಡಲು ದೊಡ್ಡ ದಾದರೂ ಹಿಸುಕಿದರೆ ಮುದ್ದೆಯಾಗುವಂಥದು. ಇನ್ನೂ ತಾಯಿಯಾಗುವ ಯೋಗ ಬಂದಿರಲಿಲ್ಲವಾದರೂ ಅಷ್ಟರಲ್ಲಿಯೇ ಲೀಲಾದೇವಿಯ ಎದೆ 'ವಾಲೀ ಬಾಲ್'ಗಳನ್ನು ಹೋಲುವಂತೆ ಊದಿಕೊಂಡಿದ್ದುವು. ಅವಳು ಬೀದಿಯಲ್ಲಿ ನಡೆಯುತ್ತ ಹೊರಟರೆ ಒಂದು ಗುಡ್ಡವೇ ನಡೆದಂತಾಗುತ್ತಿತ್ತು. ಅಸಹ್ಯ ವೆನ್ನಿಸುವ ಆ ಬೊಜ್ಜನ್ನು ಮರೆತರೆ ಅವಳು ಚೆಲುವೆಯೆಂದೇ ಹೇಳಬಹುದು. ಕಣ್ಣು ಮೂಗು ತುಟಿ ಬಾಯಿ ಕೂದಲು ಎಲ್ಲವೂ ಮೋಹಕವಾಗಿದ್ದುವು. ಆದರೆ ಆ ಮೋಹಕತೆಯೆಲ್ಲವನ್ನೂ ಆ ರಾಕ್ಷಸಬೊಜ್ಜು ಮರೆಮಾಡಿಬಿಡುತ್ತಿತ್ತು.

ಬೊಜ್ಜು ಬೆಳೆದುದರಲ್ಲಿ ಅವಳದಾದರೂ ಏನು ತಪ್ಪು? ಮನೆಯಲ್ಲಿ ಮಾಡಲು ಕೆಲಸವೇ ಇಲ್ಲದಿರುವಾಗ ಮೈ ಉಬ್ಬಿಕೊಳ್ಳದಿರುತ್ತದೆಯೆ? ಎಲ್ಲಾ ಕೆಲಸಗಳ ಗುತ್ತಿಗೆಯನ್ನು ಅವಳ ಸವತಿಯೇ ವಹಿಸಿಕೊಂಡಾಗ ಲೀಲಾದೇವಿ ಯಾದರೂ ಏನು ಮಾಡಿಯಾಳು! ನಾಲ್ಕು ಹೊತ್ತು ತಿನ್ನುವುದು, ಮಂಚದ ಮೇಲೆ ಬಿದ್ದುಕೊಂಡು ಕಾದಂಬರಿ ಓದುವುದು, ಅವರಿವರೊಡನೆ ಹರಟೆ

ಕುಟ್ಟುವುದು, ಗೌರೀದೇವಿಯೊಡನೆ ಓಣಿ ಓಣಿ ತಿರುಗುವುದು, ಅದರಿಂದಾಗಿ ದಣಿದು ನಿದ್ದೆಮಾಡುವುದು, ಇವುಗಳಲ್ಲಿಯೇ ಅವಳ ಹಗಲು ಕಳೆದು ಇರುಳಾಗುತ್ತಿತ್ತು.

ಲೀಲಾದೇವಿಯನ್ನು ಮದುವೆ ಮಾಡಿಕೊಂಡು ನಗರಕ್ಕೆ ಕರೆದುಕೊಂಡು ಬಂದ ಹೊಸದರಲ್ಲಿ ಅವಳ ಜೊತೆಯಲ್ಲಿ ಊರಲ್ಲಿ ಸುತ್ತುವುದೊಂದು ಹೆಮ್ಮೆಯ ವಿಷಯವೆನ್ನಿಸಿತ್ತು ಹರಕಸೆಟ್ಟಿಯವರಿಗೆ. ಆದರೆ, ಕಪ್ಪೆಯನ್ನು ನುಂಗಿದ ಹೆಬ್ಬಾವಿನಂತೆ ಅವಳು ಊದಿಕೊಳ್ಳತೊಡಗುತ್ತಲೂ ವಕೀಲರು ಅವಳೊಡನೆ ಪೇಟೆ ಸುತ್ತುವುದನ್ನು ನಿಲ್ಲಿಸಿಬಿಟ್ಟರು. ಅದರಿಂದಾಗಿ ಲೀಲಾದೇವಿಗೆ ಅಂಥ ಹಾನಿಯೇನೂ ಆಗಲಿಲ್ಲ. ಪ್ರತಿಯಾಗಿ ಲಾಭವೇ ಆಯಿತೆನ್ನಬೇಕು. ಗೌರೀದೇವಿಯನ್ನು ಜೊತೆಗೆ ಕಟ್ಟಿಕೊಂಡು ಸ್ವೇಚ್ಛೆಯಾಗಿ ತಿರುಗುವುದಕ್ಕೆ ಅವಕಾಶ ಲಭಿಸಿತಲ್ಲವೆ?

## ಏಳು... ಮಡಿವಾಳ ಮತ್ತು ಸುಮಿತ್ರಾ

ಹರಕಸೆಟ್ಟಿಯವರ ಸಂಸಾರದ ಸ್ಥಿತಿ ಒಂದು ರೀತಿಯದಾದರೆ ಮಡಿವಾಳ ವಕೀಲರದು ಇನ್ನೊಂದು ರೀತಿಯದು. ಅವರೂ ಅವರ ಶ್ರೀಮತಿ ಸುಮಿತ್ರೆಯೂ ವರ್ಣಮಯ ಜೀವನದಲ್ಲಿ ಇನ್ನಾರಿಗೂ ಕಡಮೆಯವರಾಗಿರಲಿಲ್ಲ.

ಜೀವನದ ಕೊನೆಯವರೆಗೂ ಬ್ರಹ್ಮಚಾರಿಯಾಗಿಯೇ ಉಳಿಯುವುದೆಂದು ಸಂಕಲ್ಪಿಸಿಕೊಂಡಿದ್ದ, ಆಂಜನೇಯನ ಭಕ್ತರಾದ ಮಡಿವಾಳ ವಕೀಲರು ಸುಮಿತ್ರಾದೇವಿಯ ಕೈಹಿಡಿದ ಪ್ರಕರಣವೂ ಸ್ವಾರಸ್ಯಕರವಾದುದೇ ಸರಿ.

ವಕೀಲಿ ಪರೀಕ್ಷೆಯನ್ನು ಮುಗಿಸಿ ಅವರು ಈ ನಗರಕ್ಕೆ ಬಂದು ತಮ್ಮ ವೃತ್ತಿಯ ಬೋರ್ಡು ಹಚ್ಚಿದ ಆರು ತಿಂಗಳುಗಳಲ್ಲಿಯೆ ಒಂದು ಕಾಸಿನ ಸಂಪಾದನೆಯೂ ಇಲ್ಲದೆ ಉಪವಾಸ ಬೀಳುವ ಪ್ರಸಂಗ ಬಂತು. ವಿದ್ಯಾರ್ಥಿಗಳಿಗೆ 'ಟ್ಯೂಶನ್' ಕೊಟ್ಟು ಕೂಡಿಸಿಟ್ಟದ್ದ ಪುಟ್ಟ ಗಂಟು ಕರಗುತ್ತಲೂ ಅವರು ಬೇರೆ ದಾರಿ ಕಾಣದೆ ಒಂದು ಹೈಸ್ಕೂಲಿನಲ್ಲಿ ಶಿಕ್ಷಕನ ಕೆಲಸ ದೊರಕಿಸಿ ಅನ್ನದ ವ್ಯವಸ್ಥೆ ಮಾಡಿಕೊಳ್ಳಬೇಕಾಯಿತು. ಆ ಆಧಾರವೂ ಬಹಳ ಕಾಲ ಬಾಳಲಿಲ್ಲ. ಮೊದಲಿನಿಂದಲೂ ಮಡಿವಾಳರದು ಒಂದು ತರದ ವಿಚಿತ್ರ ಹಟದ ಸ್ವಭಾವ. ಹೈಸ್ಕೂಲಿನ ಹೆಡ್‌ಮಾಸ್ತರರಿಗೂ ಇವರಿಗೂ ಯಾವುದೋ ಒಂದು ಕ್ಷುಲ್ಲಕ ಕಾರಣದಿಂದ ವಾದವಿವಾದ ನಡೆಯಿತು. ಆ ಪ್ರಕರಣವನ್ನು ಅಲ್ಲಿಗೇ ಮುಗಿಸಿಬಿಡಬೇಕೆಂದು ಅವರ ಸಹಶಿಕ್ಷಕರೆಲ್ಲ ಬುದ್ಧಿಹೇಳಿದರೂ ಮಡಿವಾಳರ ಮೊಂಡ ಮೆದುಳಿಗೆ ಬಿಸಿ ಹತ್ತಲಿಲ್ಲ. ತಮ್ಮ ಮಾತೇ ಸರಿಯಾದುದೆಂದು ಕೊನೆಯವರೆಗೂ ಸಾಧಿಸಿ ಆ ಹೆಡ್‌ಮಾಸ್ತರರ ಕೈಕೆಳಗೆ ಕೆಲಸ ಮಾಡುವುದು ತಮ್ಮ ಯೋಗ್ಯತೆಗೆ ಕುಂದೆಂದು ಬಗೆದು ಶಿಕ್ಷಕನ ಕೆಲಸಕ್ಕೆ ರಾಜೀನಾಮೆ

ಕೊಟ್ಟು "ಜೈ ಬಜರಂಗ ಬಲಿ!" ಎಂದು ತಮ್ಮ ಇಷ್ಟದೇವತೆಯನ್ನು ಮನಸ್ಸಿನಲ್ಲಿಯೇ ಧ್ಯಾನಿಸುತ್ತ ಮತ್ತೆ ಮನೆ ಸೇರಿ ಕುಳಿತರು.

ನೌಕರಿಯಲ್ಲಿದ್ದ ಎಂಟು ಹತ್ತು ತಿಂಗಳುಗಳಲ್ಲಿ ನೂರಿನ್ನೂರು ರೂಪಾಯಿಗಳನ್ನು ಉಳಿಸಿಕೊಂಡುದುದರಿಂದ ಅವರು ತಕ್ಷಣ ಉಪವಾಸ ಬೀಳುವ ಪ್ರಸಂಗ ಮಾತ್ರ ಬರಲಿಲ್ಲ. ವಕೀಲವೃತ್ತಿಯ ಬೋರ್ಡಿನ ಮೇಲೆ ಕುಳಿತಿದ್ದ ದೂಳನ್ನೊರಸಿ ಮತ್ತೆ ಬಾಗಿಲಿನ ಎದುರಿಗೆ ಕಟ್ಟಿದುದಾಯಿತು. ಯಾವ ಕಕ್ಷಿಗಾರನ ಲಕ್ಷ್ಯವನ್ನು ಅದು ಸೆಳೆಯಲಿಲ್ಲ. ವಕೀಲರು ಬೇರೆ ಯೋಚನೆ ಮಾಡಬೇಕಾಗಿ ಬಂತು. ಹೈಸ್ಕೂಲಿನಲ್ಲಿದ್ದ ಅವಧಿಯಲ್ಲಿ ಪರಿಚಿತರಾಗಿದ್ದ ವಿದ್ಯಾರ್ಥಿಗಳನ್ನು ಹಿಡಿದು ಅವರಿಗೆ ಖಾಸಗಿಯಾಗಿ ಶಿಕ್ಷಣ ಕೊಟ್ಟು ಊಟದ ಚಿಂತೆಯನ್ನಾದರೂ ದೂರಗೊಳಿಸುವುದೆಂದುಕೊಂಡು ಅದಕ್ಕಾಗಿ ಯತ್ನಿಸಿದರು. ಆದರೆ, ಹೆಡ್‌ಮಾಸ್ತರರ ದ್ವೇಷ ಕಟ್ಟಿಕೊಂಡು ಶಾಲೆಯಿಂದ ಹೊರಬಿದ್ದ ಮಾಸ್ತರರ ಹತ್ತಿರ ತಾವು ಹೋದರೆ ಪರೀಕ್ಷೆಯಲ್ಲಿ ಪಾಸಾಗುವ ಆಸೆಯನ್ನೂ ತ್ಯಜಿಸಬೇಕಾದೀತೆಂದು ತಿಳಿದ ಆ ಜಾಣ ವಿದ್ಯಾರ್ಥಿಗಳು ಹಲವಾರು ಸುಳ್ಳು ನೆಪಗಳನ್ನು ಮುಂದೆ ಮಾಡಿ ಮಡಿವಾಳರ ಕೈಗೆ ಸಿಗದೆ ಜಾರಿಕೊಂಡರು.

ಇನ್ನೇನನ್ನು ತಾನೆ ಮಾಡಲು ಸಾಧ್ಯ? ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲವೆಂಬ ಗಾದೆಯನ್ನು ಅವರೂ ಬಲ್ಲವರೇ. 'ಮಾರುತಿರಾಯ ಕೃಪೆ ಮಾಡಿದರೆ ಏನಾಗಲಿಕ್ಕಿಲ್ಲ!' ಎಂದು ಹೇಳಿಕೊಂಡು ಹೇಗೋ ದಿನಗಳೆಯುತ್ತ ಬಂದರು.

ಮಾರುತಿರಾಯನ ಕೃಪೆಯೋ ಮನ್ಮಥರಾಯನ ಕೃಪೆಯೋ, ಅಂತೂ ಮಡಿವಾಳ ವಕೀಲರ ತೊಂದರೆಗಳು ತಪ್ಪಿಹೋಗುವ ಪ್ರಸಂಗವೊಂದು ಬಂತು.

ಒಂದು ದಿನ ಅವರು ಹರಕಸೆಟ್ಟಿ ವಕೀಲರ ಮನೆಯಲ್ಲಿ ದೈನಂದಿನ ಪತ್ರಿಕೆಯನ್ನೋದುತ್ತ ಕುಳಿತಿದ್ದಾಗ "ವರ ಬೇಕು" ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗಿದ್ದ ಒಂದು ಜಾಹೀರಾತು ಅವರ ಲಕ್ಷ್ಯ ಸೆಳೆಯಿತು. ಬ್ರಹ್ಮಚಾರಿಗಳಿಗೆಲ್ಲ ಸಹಜವಾದ ಆಸಕ್ತಿಯಿಂದ ವಕೀಲರು ಅದನ್ನು ಓದಿದರು.

"ವರ ಬೇಕು

ತಿಂಗಳಿಗೆ ನೂರಿಪ್ಪತ್ತು ರೂಪಾಯಿ ಸಂಬಳ ಪಡೆಯುತ್ತಿರುವ ಸುಶಿಕ್ಷಿತ ಸುಂದರ ಸುಧಾರಕ ಮನೋವೃತ್ತಿಯ ಶಿಕ್ಷಿಕೆಗೆ ಯೋಗ್ಯ ವರ ಬೇಕು. ವಧುವಿನ

ವಯಸ್ಸು ೨೩. ವರನ ವಯಸ್ಸು ೨೫ ರಿಂದ ೩೫ ರವರೆಗೆ ಇದ್ದರೆ ನಡೆದೀತು. ಹಿಂದೂಧರ್ಮದ ಯಾವುದೇ ಉಚ್ಚ ಜಾತಿಯವನಾಗಿದ್ದರೂ ಅಡ್ಡಿಯಿಲ್ಲ. ಆಸಕ್ತಿಯುಳ್ಳವರು ಫೋಟೋ ಕಳಿಸಿ ಪತ್ರವ್ಯವಹಾರ ಮಾಡಬೇಕು."

ಜಾಹೀರಾತಿನಲ್ಲಿನ ಇನ್ನಿತರ ಅಂಶಗಳನ್ನು ವಿಶೇಷವಾಗಿ ಗಮನಿಸದಿದ್ದರೂ ನೂರಿಪ್ಪತ್ತು ರೂಪಾಯಿ ಸಂಬಳದ ಅಂಶವೊಂದು ಮಡಿವಾಳರ ಮನಸ್ಸನ್ನಾಕರ್ಷಿಸಿತು. ತಾವು ಈ ಶಿಕ್ಷಿಕೆಯನ್ನು ಮದುವೆಯಾಗಿಬಿಟ್ಟರೆ ತಮ್ಮ ಆರ್ಥಿಕ ತೊಂದರೆ ತಪ್ಪಿಹೋಗುವುದು. ಅವಳ ಸಂಪಾದನೆಯ ಆಧಾರದಿಂದ ತಾವು ಸುಖವಾಗಿ ಕಾಲ ಕಳೆಯಲು ಸಾಧ್ಯವಾಗಬಹುದು. "ಜಾಹೀರಾತಿಗೆ ಉತ್ತರ ಕೊಟ್ಟು ನೋಡಲೇ?" ಎಂದು ಅವರು ತಮ್ಮನ್ನು ತಾವೇ ಕೇಳಿಕೊಂಡರು. ಒಡನೆಯೇ ಒಂದು ನಿರ್ಣಯಕ್ಕೆ ಬರಲು ಅವರ ಮನಸ್ಸು ಸಿದ್ಧವಾಗಲಿಲ್ಲ.

ಆರ್ಥಿಕ ತೊಂದರೆಯೇನೋ ತಪ್ಪಬಹುದು. ಸರಿಯೆ. ಆದರೆ, ಅದರೊಂದಿಗೆ ಸಾಂಸಾರಿಕ ತೊಂದರೆಗಳ ಹಿಂಡಿಗೆ ಹಿಂಡೇ ಬಂದು ತಮ್ಮನ್ನು ಮುತ್ತಿಕೊಳ್ಳಬಹುದಲ್ಲವೆ? ಆಜನ್ಮ ಪರ್ಯಂತರ ಬ್ರಹ್ಮಚಾರಿಯಾಗಿರಬೇಕೆಂದು ಸಾವಿರಬಾರಿಯಾದರೂ ಸಂಕಲ್ಪಿಸಿಕೊಂಡವರು ತಾವು; ಹನುಮದೇವರ ಪಾದ ಮುಟ್ಟಿ ಬ್ರಹ್ಮಚರ್ಯದ ಪ್ರತಿಜ್ಞೆ ಸ್ವೀಕರಿಸಿದವರು ಈಗ ಯಃಕಶ್ಚಿತ್ ದುಡ್ಡಿನ ಮೋರೆ ನೋಡಿ ಅಂಥ ಭೀಷ್ಮ ಪ್ರತಿಜ್ಞೆಯನ್ನು ಮುರಿಯುವುದೇ? ಇಷ್ಟು ವರ್ಷಗಳ ಕಾಲ ಕಠೋರವ್ರತದಿಂದ ಬೆಳಸಿದ ಈ ಕಟ್ಟುಮಸ್ತಾದ ದೇಹವನ್ನು ಹಣದಾಸೆಗಾಗಿ ಯಾವುದೋ ಒಂದು ಹೆಣ್ಣಿನ ಕೈಗೆ ಕೊಡುವುದೇ?

ಮಡಿವಾಳರು ಯೋಚಿಸುತ್ತಲೇ ಇದ್ದರು. ಎಷ್ಟು ಯೋಚಿಸಿದರೂ ಯೋಚನೆ ಮುಗಿಯಲಿಲ್ಲ.

ಎಂಟು ಹತ್ತು ನಿಮಿಷಗಳ ಕಾಲ, ಕೈಯಲ್ಲಿ ಪತ್ರಿಕೆ ಹಿಡಿದುಕೊಂಡು ಶೂನ್ಯದೃಷ್ಟಿಯಿಂದ ಅದನ್ನು ನಿಟ್ಟಿಸುತ್ತ ಕುಳಿತಿದ್ದ ಮಡಿವಾಳರನ್ನು ಕಂಡು ಲೀಲಾದೇವಿಗೆ ಸೋಜಿಗವೆನ್ನಿಸದಿರಲಿಲ್ಲ.

"ಏನ್ರೀ, ಹೀಗ್ಯಾಕೆ ಕೂತೀರಿ ದೆವ್ವ ಬಡಿದವರ ಹಾಗೆ? ಪತ್ರಿಕೆಯೊಳಗ ಏನಾದರೂ ಭಯಂಕರ ಸುದ್ದಿ ಬಂದದೋ ಏನು?"

ಗಡಬಡಿಸಿಕೊಂಡು ಮಡಿವಾಳರು ಯೋಚನಾಲೋಕದಿಂದೀಚೆಗೆ

ಬಂದರು, ತಮ್ಮ ಮನಸ್ಸನ್ನು ಗೊಂದಲಕ್ಕೀಡುಮಾಡಿದ್ದ ಜಾಹೀರಾತನ್ನು ಲೀಲಾದೇವಿಗೆ ತೋರಿಸುತ್ತ,

"ನೀವೇ ಹೇಳಿರಿ ನಾನೇನು ಮಾಡಬೇಕು?" ಎಂದರು.

ಲೀಲಾದೇವಿ ನಗುನಗುತ್ತಾ ಅದನ್ನೋದಿ ಮುಗಿಸಿ ಮನಸ್ಸಿನಲ್ಲಿಯೇ ಒಂದು ನಿರ್ಧಾರಕ್ಕೆ ಬಂದು,

"ಹೇಳುವದೇನು ವಕೀಲರೆ. ಇಂಥಾ ಬಂಗಾರದಂಥಾ ಸಂಧಿ ಬಂದಾಗ ಕಳಕೊಳ್ಳೊದು ಮೂರ್ಖತನ," ಎಂದಳು.

"ಹಾಗಾದರೆ ನಾ ಪತ್ರವ್ಯವಹಾರ ಮಾಡಬೇಕು ಅಂತೀರಾ?"

"ಮತ್ತ್ಯಾಕೆ ಹಿಂದೆ ಮುಂದೆ ನೋಡೂದು? ಶುಭಸ್ಯ ಶೀಘ್ರಂ. ಈ ಮಾಸ್ತರತಿಯ ಕೈಹಿಡಿದರೆ ನೀವು ಮಹಾರಾಜನಂತೆ ಮಜಾ ಮಾಡಬಹುದು. ಜಾಹೀರಾತಿನೊಳಗೆ ಹೇಳಿರುವ ಯೋಗ್ಯತಾ ಕೂಡಾ ನಿಮಗದೆ. ವಯಸ್ಸೂ ಅದೆ. ಇನ್ನೇನು ಬೇಕು?"

"ಆದರೂ...." ಎಂದು ಮಡಿವಾಳರು ಹೇಳುತ್ತಿದ್ದ ಹಾಗೆಯೇ ಕೊಟಡಿಯಲ್ಲಿ ಪ್ರವೇಶಿಸಿದ ಹರಕಸೆಟ್ಟಿಯವರು ತಮ್ಮ ಪತ್ನೀರತ್ನವನ್ನು ದಿಟ್ಟಿಸುತ್ತ ಕೇಳಿದರು:

"ಏನದು? ಏನು ನಡದದೆ?"

"ಮಡಿವಾಳ ವಕೀಲರಿಗೊಂದು ಹೆಣ್ಣು ಬಂದದೆ," ಎಂದು ಹೇಳಿ ಲೀಲಾದೇವಿ ಆ ಜಾಹೀರಾತನ್ನು ತೋರಿಸಿದಳು.

"ಇವರು ಯಾಕೋ ಅನುಮಾನ ಮಾಡ್ತಿದಾರೆ. ಅಲ್ರೀ, ಹೆಣ್ಣು ತಾನಾಗೇ ಕರೀತಿರುವಾಗ ಗಂಡಿಗೆ ಮಲರೋಗ ಬಂದರೆ ಹ್ಯಾಗೆ? ನಾನಂತೂ ಆಗಲೇ ನಿಶ್ಚಯ ಮಾಡಿಬಿಟ್ಟಿದೀನಿ. ಈ ಮಾಸ್ತರತಿಗೂ ನಿಮಗೂ ಗಂಟು ಹಾಕೇ ಬಿಡೂದೂ ಅಂತ. ನಿಮಗೆ ಸಂಕೋಚ ಅನ್ನಿಸುತ್ತಿದ್ದರೆ ಹೇಳಿರಿ. ನೀವೇ ಸ್ವತಃ ಪತ್ರವ್ಯವಹಾರ ಮಾಡೂದೂ ಬೇಡ. ನಿಮ್ಮ ಕಡೆಗೆ ನಾನೇ ಯಜಮಾನಿಯಾಗಿ ಎಲ್ಲಾ ನಡಸಿಕೊಡ್ತೀನಿ."

"ಹಾಗೇ ಮಾಡು ಲೀಲಾ. ಈ ತಿಂಗಳಲ್ಲೇ ಇವರ ತಲೆಯ ಮ್ಯಾಲ ಅಕ್ಕೀಕಾಳು ಹಾಕಿಬಿಡೂಣು. ಎಷ್ಟು ವರ್ಷ ಅಂತ ಒಂಟಿಯಾಗಿರುತಾರೆ ಇವರಾದರೂ!" ಎಂದರು ಹರಕಸೆಟ್ಟಿಯವರು.

“ಸ್ವಲ್ಪ ನನ್ನ ಮಾತಾದರೂ ಕೇಳಿರಿ,” ಎಂದು ಮಡಿವಾಳರು ಧ್ವನಿಯೆತ್ತಿದರು. ಲೀಲಾದೇವಿ ಅವರನ್ನು ಮುಂದೆ ಮಾತನಾಡಲೂ ಬಿಡದೆ,

“ಇನ್ನು ಯಾವ ಮಾತೂ ಇಲ್ಲ. ನಿಮ್ಮ ಫೋಟೋ ತಂದು ನನ್ನ ಕೈಯಾಗ ಕೊಡಿರಿ. ಇವತ್ತೇ ಪತ್ರ ಬರೆದುಬಿಡ್ತೇನಿ,” ಎಂದಳು.

“ಅಲ್ಲ ಲೀಲಾ, ಪತ್ರವ್ಯವಹಾರದಲ್ಲಿ ದಿನ ಕಳೆಯೂದಾದರೂ ಯಾಕೆ? ಒಂದು ಟೆಲಿಗ್ರಾಂ ಕೊಟ್ಟು ವಧುವನ್ನು ಇಲ್ಲಿಗೇ ಕರಸಿಕೊಂಡು ಮಾತು ಮುಗಿಸಿಬಿಡೋಣವೇನು?” ಎಂದರು ಹರಕಸೆಟ್ಟಿಯವರು.

ಗಂಡನನ್ನು ತೀಕ್ಷ್ಣದೃಷ್ಟಿಯಿಂದ ಇರಿಯುತ್ತಾ ಅಣಕಬೆರೆತ ಧ್ವನಿಯಲ್ಲಿ ಲೀಲಾದೇವಿಯೆಂದಳು :

“ಟೆಲಿಗ್ರಾಂ ಕೊಡಲಿಕ್ಕೆ ಇಲ್ಲೇನು ಭಾಷಣವಾಗೂದದೆ ಏನು? ನೀವು ನಡುವೆ ಬಾಯಿಹಾಕಬ್ಯಾಡ್ರಿ.”

“ಹಾಗೇ ಆಗಲಿ ಮಹಾರಾಯ್ತಿ. ನೀನೇ ಮ್ಯಾನೇಜರಾಗು ಈ ಮದುವೆಗೆ!”

ಲೀಲಾದೇವಿ ಸೂತ್ರಧಾರಿಣಿಯಾದ ಬಳಿಕ ಮದುವೆಯಾಗದಿರುತ್ತದೆಯೆ? ಗೊಬ್ಬೂರಿನ ನಗರ ಸಭೆಯ ಹೈಸ್ಕೂಲಿನಲ್ಲಿ ಸಂಗೀತ ಶಿಕ್ಷಿಕೆಯಾಗಿದ್ದ ಸುಮಿತ್ರಾದೇವಿ, ಮಡಿವಾಳ ವಕೀಲರ ಧರ್ಮಪತ್ನಿಯಾಗಲು ವಿಲಂಬವಾಗಲಿಲ್ಲ. ಹೆಚ್ಚು ಗದ್ದಲವಿಲ್ಲದೆ ಹೊಸ ಪದ್ಧತಿಯಂತೆ ಮದುವೆ ನಡೆಯಿತು. ಅದೇ ಸಮಯದಲ್ಲಿಯೆ ಮಡಿವಾಳರಿಗೆ ಬಸಲಿಂಗನ ಇನ್ನಿತರ ವಕೀಲರೊಡನೆ ಗಾಢ ಪರಿಚಯ ಬೆಳೆಯಿತು. ಲಗ್ನದ ಖರ್ಚುಗಳಿಗೆಂದು ಸುಮಿತ್ರಾದೇವಿಯೇ ಎರಡುನೂರು ರೂಪಾಯಿಗಳನ್ನು ಲೀಲಾದೇವಿಯವರ ಕೈಗೊಪ್ಪಿಸಿದಳು. ಮದುವೆಯ ಮೇಜವಾನಿಯ ಕಾಲಕ್ಕೆ ಡಾಕ್ಟರ್ ಇಂದ್ರಗೇರಿಯವರೂ ಉಪಸ್ಥಿತರಿದ್ದರು.

“ನಮ್ಮ ಮಡಿವಾಳ ವಕೀಲರಿಗೆ ನೀವೊಂದು ಉಪಕಾರ ಮಾಡಬೇಕ್ರೀ ಡಾಕ್ಟರರೇ,” ಎಂದು, ಊಟಕ್ಕೆ ಬಡಿಸುತ್ತಿದ್ದ ಲೀಲಾದೇವಿ ಮಾತು ತೆಗೆದಳು.

“ಏನು? ನನ್ನಿಂದೇನಾಗಬೇಕೋ ಅಪ್ಪಣೆಯಾಗಲಿ.”

“ಸುಮಿತ್ರಾದೇವಿಯವರು ನಮ್ಮ ವಕೀಲರ ಕೈ ಹಿಡಿದದ್ದಂತೂ ಆಯ್ತಲ್ಲ. ಇನ್ನು ಮ್ಯಾಲ ಅವರು ಗಂಡನ ಹತ್ತರವೇ ಇರಬೇಕಾಗುತ್ತದೆ ಹೌದಲ್ಲೋ?”

“ ಮತ್ತೆ? ಅವರೇನು ಗೊಬ್ಬೂರಲ್ಲೇ ಇರುವವರೋ ಏನು? ಮಡಿವಾಳ ವಕೀಲರೇ ಅಲ್ಲಿ ಹೋಗಿ ಇರುವವರೋ?”

“ ಅವರ್‍ಯಾಕೆ ಹೋಗಬೇಕ್ರೀ! ಗಂಡ ಇದ್ದಲ್ಲಿ ಹೆಂಡತಿ ಇರೂದೇ ಚೆಂದ.”

“ ನೂರಿಪ್ಪತ್ತು ರೂಪಾಯಿ ಸಂಬಳದ ನೌಕರಿ ಬಿಟ್ಟು ಸುಮಿತ್ರಾದೇವಿ ಯಾಕೆ ಬಂದಾರು ಇಲ್ಲಿಗೆ?” ಎಂದರು ಮೋಜಣ್ಣವರು.

“ ಅದನ್ನೇ ನಾನೂ ಹೇಳೂದು. ಡಾಕ್ಟರು ಮನಸು ಮಾಡಿದರೆ ಇಲ್ಲೂ ಯಾವದಾದರೊಂದು ಹೈಸ್ಕೂಲಿನೊಳಗೆ ಸಂಗೀತ ಶಿಕ್ಷಕಿಯ ಕೆಲಸ ಕೊಡಿಸ ಬಹುದು ಸುಮಿತ್ರಾದೇವಿಯವರಿಗೆ,” ಎಂದಳು ಲೀಲಾದೇವಿ.

“ ಹೌದೌದು. ಹಾಗೇ ಮಾಡಬೇಕು,” ಎಂದಳು ಗೌರೀದೇವಿ.

“ ಹೌದ್ರೀ, ಡಾಕ್ಟರೇ. ನೀವು ಎಲ್ಲಾ ಕೆಲಸ ಬಿಟ್ಟು ಮೊದಲು ಈ ಕೆಲಸ ಮೊದಲು ಮಾಡಿಕೊಡಬೇಕ್ರೀ,” ಎಂದರು ಹರಕಸೆಟ್ಟಿಯವರು.

“ ಅಷ್ಟು ಮಾಡಿದರೆ ಬಹಳ ಉಪಕಾರವಾಗ್ತದೆ,” ಎಂದರು ಮಡಿವಾಳರು.

“ ನನಗೇನಾದರೂ ಪ್ರತ್ಯುಪಕಾರವಾಗುವ ಹಾಗಿದ್ದರೆ ಇವತ್ತೇ ಮಾಡ ಬಹುದು,” ಎಂದು ಮನಸ್ಸಿನಲ್ಲೇ ಹೇಳಿಕೊಳ್ಳುತ್ತ ಡಾಕ್ಟರರೆಂದರು:

“ ನೋಡೋಣ. ಪ್ರಯತ್ನ ಮಾಡ್ತೀನಿ.”

“ ಪ್ರಯತ್ನ ಇಲ್ಲ, ಏನಿಲ್ಲ. ನೀವು ಈ ಕೆಲಸ ಮುಗಿಸೇಬಿಡಬೇಕ್ರೀ,” ಎಂದರು ಮೋಜಣ್ಣವರು.

“ ಆಗಲಿ. ಮುಗಿಸೇಬಿಡ್ತೀನಿ,” ಎಂದು ಹೇಳಿಕೊಂಡು ಮನಸ್ಸಿನಲ್ಲಿಯೇ ನಕ್ಕರು ಡಾಕ್ಟರು. ವಧುವಿನ ವೇಷದಲ್ಲಿದ್ದ ಸುಮಿತ್ರಾದೇವಿಯನ್ನು ನೋಡಿ ದಾಗಲೇ ಅವರ ವಿಲಾಸೀ ಮನಸ್ಸು ಅವಳನ್ನು ಬಯಸಲು ಮೊದಲುಮಾಡಿತ್ತು. ಮಡಿವಾಳರ ಸ್ನೇಹ ಬೆಳಸಿ, ಮೆಲ್ಲನೆ ಅವರ ಮನೆಯಲ್ಲೂ ಪ್ರವೇಶ ದೊರಕಿಸಿ ಸುಮಿತ್ರಾದೇವಿಯನ್ನು ವಶಪಡಿಸಿಕೊಳ್ಳುವುದೆಂದು ಅವರು ಆಗಲೇ ಯೋಚಿಸಿ ಕೊಂಡಿದ್ದರು. ಆ ಸಂದರ್ಭ ಇಷ್ಟು ಬೇಗ ಬಂದೀತೆಂದು ಮಾತ್ರ ಅವರು ಭಾವಿಸಿರಲಿಲ್ಲ. ಸುಮಿತ್ರಾದೇವಿಗೆ ನೌಕರಿ ಕೊಡಿಸುವುದೆಂದರೆ ಅವಳ ಕೂದಲೇ ತಮ್ಮ ಕೈಯಲ್ಲಿ ಸಿಕ್ಕಿದ ಹಾಗೆ. ತಮ್ಮ ಹಂಗಿನೊಳಗಾದ ಆ ಪ್ರಾಣಿ ತಾವು ಹೇಳಿದ ಹಾಗೆ ಕುಣಿಯುವುದೇನೂ ದೊಡ್ಡ ವಿಷಯವಲ್ಲ.

"ಸಿಕ್ಕಿತು ಬೇಟೆ!" ಎಂದು ತಮ್ಮಷ್ಟಕ್ಕೇ ಅಂದುಕೊಂಡು ಡಾಕ್ಟರರು ಊಟ ಮುಗಿಸಿ ಎದ್ದರು.

"ಏನಂದಿರಿ ಡಾಕ್ಟರರೇ?" ಎಂದು ಮತ್ತೆ ಪ್ರಶ್ನಿಸಿದಳು ಲೀಲಾದೇವಿ.

"ನೀವೆಲ್ಲಾ ಹೇಳುತ್ತೀರಂದಮ್ಯಾಲ ಇಲ್ಲ ಅನ್ನುತ್ತೇನೆಯೇ ನಾ? ಸಂಘದ ಹೈಸ್ಕೂಲಿನೊಳಗೆ ಮ್ಯೂಜಿಕ್ ಟೀಚರ್ ಕೆಲಸ ಖಾಲಿ ಇದ್ದ ಹಾಗೆ ಕಾಣ್ತದೆ. ಸಂಘದ ಚೇರ್ಮನ್ನರೂ ಇವತ್ತು ನನ್ನ ಹತ್ತಿರ ಬರುವವರಿದಾರೆ, ಸಾಯಂಕಾಲ ಐದು ಗಂಟೆಗೆ. ಸುಮಿತ್ರಾದೇವಿಯವರೂ ಆ ವೇಳೆಗೆ ನಮ್ಮ ಆಸ್ಪತ್ರೆಗೆ ಬಂದರೆ ಚೇರ್ಮನ್ನರಿಗೆ ಪರಿಚಯ ಮಾಡಿಸಿಕೊಟ್ಟು ನೌಕರಿಯ ಮಾತನ್ನೂ ಮುಗಿಸಿಬಿಡಬಹುದು. ಏನು ಮಡಿವಾಳರೇ, ನಿಮ್ಮದೇನು ಅಭಿಪ್ರಾಯ?"

"ಸುಮಿತ್ರಾ ಬರುತ್ತಾಳೆ. ಕೆಲಸ ಕೊಡಿಸಿ ಉಪಕಾರ ಮಾಡಿರಿ ಡಾಕ್ಟರೇ."

"ಆಗಲಿ. ಆಗಲಿ. ನಿಮ್ಮಂಥ ಗೆಳೆಯರಿಗೆ ನೆರವಾಗದಿದ್ದರೆ ಇನ್ನಾರಿಗೆ ನೆರವಾಗುವದು? ಈಗಲೇ ಒಂದು ಅರ್ಜಿ ತಯಾರಿಸಿ ನನ್ನ ಹತ್ತಿರ ಕೊಟ್ಟು ಬಿಡಿರಿ ಸುಮಿತ್ರಾದೇವಿ!" ಎಂದರು ಡಾಕ್ಟರರು, ಅವಳನ್ನು ಭೇದಕದೃಷ್ಟಿಯಿಂದ ನೋಡುತ್ತ.

ಆ ದೃಷ್ಟಿಯ ಹಿಂದೆ ಅವಿತಿದ್ದ ಭಾವವನ್ನು ಒಡನೆಯೆ ಅರ್ಥ ಮಾಡಿಕೊಂಡ ಚಾಣಾಕ್ಷಳಾದ ಸುಮಿತ್ರಾದೇವಿ ತನ್ನಲ್ಲಿ ತಾನೆ ಹೇಳಿಕೊಂಡಳು: "ಅಯ್ಯೋ ಮಂಕ ನನ್ನ ಮಗನೆ! ನಾನೆಂದರೆ ಏನೂ ಅರೀದ ಮುಗ್ಧ ಬಾಲೆ ಅಂತ ತಿಳಿದೀಯೇನು? ಇಂಥಾದ್ದರಲ್ಲಿ ನಿನಗಿಂತ ಹೆಚ್ಚು ಅನುಭವ ಪಡೆದಿದ್ದೀನಿ."

ಸುಮಿತ್ರಾದೇವಿ ಸುಂದರಿಯೂ ಅಲ್ಲ, ಕುರೂಪಿಯೂ ಅಲ್ಲ. ಕಾಮುಕರಾದವರು "ಪರವಾಯಿಲ್ಲ,"ವೆನ್ನಬಹುದಾದಂಥ ಹೆಣ್ಣು. ಗೊಬ್ಬೂರಿನ ಅನಾಥ ಬಾಲಿಕಾಶ್ರಮದಲ್ಲಿ ಬೆಳೆದು, ತಾನು ದುಡಿದು ಬದುಕಬಹುದಾದಷ್ಟು ವಿದ್ಯೆ ಕಲಿತು ಅವರಿವರ ಸಹಾಯದಿಂದ ಶಿಕ್ಷಿಕೆಯ ಕೆಲಸ ದೊರಕಿಸಿದುದಕ್ಕೆ ನಾಲ್ಕು ವರ್ಷ ಕಳೆದು ಹೋಗಿದ್ದುವು. ಆ ಅನಾಥೆಗೆ ಅವಳವರೆನ್ನುವವರು ಈ ಜಗತ್ತಿನಲ್ಲಿ ಅದುವರೆಗೆ ಯಾರೂ ಇರಲಿಲ್ಲ. ತಾನೊಬ್ಬಳೇ ದಿಟ್ಟತನದಿಂದ

ಬದುಕುತ್ತ ಬಂದು ಗೊಬ್ಬೂರಿನಂಥ ನಗರದಲ್ಲಿ ಸ್ವತಂತ್ರ ಮನೆ ಮಾಡಿ ನೆಲಸಿದ್ದಳು. ಸಂಬಳದ ಹಣದಲ್ಲಿ ಅರ್ಧಕ್ಕಿಂತಲೂ ಹೆಚ್ಚಾಗಿಯೇ ಉಳಿಸುತ್ತ, ಹಾಗೆಯೇ ಕೆಲವು ಮನೆಗಳಲ್ಲಿ ಪಾಠ ಹೇಳಿ ಅಲ್ಪ ಸ್ವಲ್ಪ ಗಳಿಸುತ್ತ ಬಂದು ಮೂರು ಸಾವಿರದಷ್ಟು ಹಣವನ್ನು ಒಟ್ಟುಗೂಡಿಸಿದ ತರುವಾಯ ಜೀವನ ಸಂಗಾತಿಯ ಬೇಟೆಗೆ ಹೊರಟು ವಕೀಲ ಗಂಡನನ್ನು ದೊರಕಿಸಿದ್ದಳು. ಅಷ್ಟು ದಿನಗಳ ಕಾಲ ನಾಯಿಗಳಂತೆ ಬಂದು ಮೂಸಿ ನೋಡಿ ಕಚ್ಚಿ ಹೋಗುತ್ತಿದ್ದ ಬಿಡಾಡಿ ಗಂಡಸರಿಂದ ಬಿಡುಗಡೆಯಾಯಿತೆಂದು ಅವಳಿಗೆ ತುಂಬ ಸಮಾಧಾನ ವಾಗಿತ್ತು. ಆ ಸಮಾಧಾನಕ್ಕೆ ಇನ್ನೊಂದು ಕಾರಣವೂ ಇತ್ತು. ಅವಳ ಬಲದೊಡೆಯ ಹಿಂಭಾಗದಲ್ಲಿ ಬಿಳಿಯತ್ತೊನ್ನು ಅಂಟಿಕೊಂಡು, ತನ್ನನ್ನು ಮದುವೆ ಯಾಗಲು ಯಾವ ಗಂಡಸೂ ಸಿದ್ಧನಾಗಲಾರನೆಂಬ ಅಂಜಿಕೆಯನ್ನು ಅವಳಲ್ಲಿ ಹುಟ್ಟಿಸಿತ್ತು. ಅಂತೆಯೇ ಅವಳು ಜಾಣತನದಿಂದ ಜಾಹಿರಾತಿಗೆ ಮೊರೆ ಹೋಗಿದ್ದಳು. ಅವಳ ತೊನ್ನುರೋಗದ ವಿಷಯ ಯಾರಿಗೂ ಗೊತ್ತಾಗದೆ ಮದುವೆಯೂ ನಡೆದುಹೋಗಿತ್ತು. "ಆಹಾ! ಗೆದ್ದೆ. ಕೃತಕೃತ್ಯಳಾದೆ!" ಎಂದು ಮತ್ತೆ ಮತ್ತೆ ಎಷ್ಟೋ ಬಾರಿ ಮನಸ್ಸಿನಲ್ಲಿಯೇ ಹೇಳಿಕೊಂಡು ಹರ್ಷದಿಂದ ನಲಿದಿದ್ದಳು ಸುಮಿತ್ರಾದೇವಿ.

ಎಲ್ಲರ ಊಟವೂ ಕೊನೆಗೊಂಡ ತರುವಾಯ ಸುಮಿತ್ರಾದೇವಿಯ ಹಸ್ತಾಕ್ಷರಗಳಿಂದ ಒಂದು ಅರ್ಜಿ ಸಿದ್ಧವಾಗಿ ಡಾಕ್ಟರರ ಕೈ ಸೇರಿತು. ಅವರು ಅದನ್ನು ಅತ್ತಿತ್ತ ತಿರುಗಿಸಿ, ಎರಡು ಮೂರು ಬಾರಿ ಓದಿ ತಲೆದೂಗಿಸಿದರು, ಸುಮಿತ್ರಾದೇವಿಯ ಹಸ್ತಾಕ್ಷರಗಳ ಅಂದಚೆಂದವನ್ನು ಪ್ರಶಂಸಿಸಿದರು.

"ಚೇರ್ಮನ್ನರೂ ಕೂಡ ನಿಮ್ಮ ಮುತ್ತಿನಂಥಾ ಕೈಬರಹ ನೋಡಿ ಮೆಚ್ಚಿ ಕೊಳ್ಳುವದು ಖಂಡಿತ. ನನಗಂತೂ ಏನೂ ಸಂಶಯವಿಲ್ಲ," ಎಂದು ಹೇಳಿ ಡಾಕ್ಟರರು ಅಲ್ಲಿಂದ ಹೊರಡಲು ಅಣಿಯಾದರು. "ಐದು ಗಂಟೆಗೆ ಸರಿಯಾಗಿ ಬರಬೇಕು ಹಂ," ಎಂದು ನುಡಿದು ಮತ್ತೊಂದು ಬಾರಿ ಅವಳನ್ನು ಭೇದಕ ದೃಷ್ಟಿಯಿಂದ ನೋಡಲೂ ಮರೆಯಲಿಲ್ಲ.

ಡಾಕ್ಟರರು ಹೊರಟುಹೋದ ತರುವಾಯ ಅಲ್ಲಿಯೆ ಉಳಿದ ಐದು ಜನ ವಕೀಲರು ಆ ಮಾತು ಈ ಮಾತು ಆಡುತ್ತಾ ಸ್ವಾರಸ್ಯವಾದ ಹರಟೆಗೆ ತೊಡಗಿದರು. ಕೆಲಸವೇ ಇಲ್ಲದಿರುವ ಐವರು ವಕೀಲರು ಒತ್ತಟ್ಟಿಗೆ ಕೂಡಿದಾಗ

ನಡೆಯುವ ಹರಟೆಯಾದರೂ ಎಂಥದು? ನಗರದ ಗಣ್ಯ ವಕೀಲರನ್ನು ಬಯ್ದು ದಾಯಿತು, ವಕೀಲರ ಜಾತಿಯನ್ನೇ ಉದ್ಧಾರ ಮಾಡಿದುದಾಯಿತು. ರಾಜ ಕಾರಣದ ಪ್ರಸ್ತಾಪ ಬರುತ್ತಲೂ ನಾಡಿನ ನಾಯಕರನ್ನೆಲ್ಲ ಕಟುವಾಗಿ ಟೀಕಿಸಿ ಅವರೆಲ್ಲರೂ ಅಯೋಗ್ಯರೆಂದು ತೀರ್ಮಾನಿಸಿದುದಾಯಿತು. ಎರಡು ಗಂಟೆಗೆ ಆರಂಭವಾದ ಆ ಮಹಾ ಹರಟೆ ಐದು ಗಂಟೆಯವರೆಗೂ ಸರಾಗವಾಗಿ ಸಾಗಿತ್ತು. ಡಾಕ್ಟರರಲ್ಲಿಗೆ ಹೊರಡುವ ಸಮಯವನ್ನೇ ನಿರೀಕ್ಷಿಸುತ್ತಿದ್ದ ಸುಮಿತ್ರಾದೇವಿ ನಾಲ್ಕೂವರೆಗೇ ಎದ್ದು ಸೀರೆ ಬದಲಿಸಿ, ಮುಖದ ಮೇಲಿನ ಅರಿಸಿಣವನ್ನಳಿಸಿ ಪೌಡರ್ ಬಳಿದುಕೊಂಡು, ಕೈಯಲ್ಲಿ ಬಿಂಕದ ಚೀಲ ಹಿಡಿದು ಸಿದ್ಧಳಾಗಿದ್ದಳು. ಅವಳ ಸೂಚನೆಯಂತೆ ಗೌರೀದೇವಿ ಒಂದು ಟಾಂಗಾ ಗಾಡಿಯನ್ನು ಕೂಗಿ, ಹರಟೆಗಾರರ ಕೊಟಡಿಗೆ ಬಂದು ಹೇಳಿದಳು:

"ಮಡಿವಾಳ ವಕೀಲರೆ, ಸುಮಿತ್ರಾದೇವಿಯವರು ಡಾಕ್ಟರರಲ್ಲಿಗೆ ಹೊರಟು ನಿಂತಾರೆ. ಅವರು ಹಿಂತಿರುಗಿ ಬರುವತನಕ ನೀವು ಇಲ್ಲೇ ಇರಬೇಕಂತ ಹೇಳುತ್ತಾರೆ."

"ಅವೇನು, ಅವರು ಬಂದು ಹೇಳಲಿಕ್ಕೆ ನಾಚಿಕೆಯೇನೇ?" ಎಂದು ನಗುತ್ತ ಕೇಳಿದರು ಮೋಜಣ್ಣವರು.

"ಹೌದು ಮತ್ತೆ! ನಿನ್ನೆಯಷ್ಟೇ ಮದುವೆಯಾದದ್ದು. ನಾಚಿಕೆಯಾಗ ದಿರ್ತದೇನು?"

ಆ ವೇಳೆಗೆ ಲೀಲಾದೇವಿ ಅಲ್ಲಿಗೆ ಬಂದು ಹೇಳಿದಳು:

"ನೀವ್ಯಾರೂ ಇವತ್ತು ಎಲ್ಲೂ ಹೋಗಬಾರದು. ರಾತ್ರಿಯ ಊಟಾ ಮುಗಿಸಿಕೊಂಡೇ ಹೋಗುವದು."

"ಸರಿಯಪ್ಪ. ಯಜಮಾನಿಯ ಹುಕುಂ ಆದಮ್ಯಾಲ ಯಾರೂ ಅತ್ತಿತ್ತ ಅಲುಗಾಡುವಂತೇ ಇಲ್ಲ," ಎಂದರು ಹರಕಸೆಟ್ಟಿಯವರು.

ಹರಟೆಯನ್ನು ನಿಲ್ಲಿಸಿ ಅವರು ಇಸ್ಪೀಟಿನಾಟಕ್ಕಾರಂಭಿಸಿದರು.

ಟಾಂಗಾದಲ್ಲಿ ಕುಳಿತು ಸುಮಿತ್ರಾದೇವಿ ಡಾಕ್ಟರರ ಆಸ್ಪತ್ರೆಗೆ ಹೊರಟಳು.

ಮಧ್ಯಾಹ್ನ, ಅವಳ ಅರ್ಜಿಯನ್ನು ಕಿಸೆಯಲ್ಲಿಟ್ಟುಕೊಂಡು ಕಾರು ಏರಿದ ಡಾಕ್ಟರರು ನೇರವಾಗಿ ಹೈಸ್ಕೂಲಿಗೆ ಹೋಗಿ ಹಿರಿಯ ಗುಮಾಸ್ತೆಯನ್ನು ಕಂಡು, ಸಂಗೀತ ಶಿಕ್ಷಿಕೆಯ ಸ್ಥಳ ತೆರವಾಗಿದ್ದುದರ ಬಗೆಗೆ ಖಚಿತಪಡಿಸಿಕೊಂಡ

ತರುವಾಯ ಸಂಘದ ಚೇರ್ಮನ್ನರ ಮನೆಗೇ ಹೋಗಿ ಅವರನ್ನು ಭೆಟ್ಟಿಯಾಗಿ ಸುಮಿತ್ರಾದೇವಿಯ ವಿಷಯ ತಿಳಿಸಿ ಅವಳನ್ನೇ ಆ ಸ್ಥಾನಕ್ಕೆ ನೇಮಕಮಾಡಿ ಕೊಳ್ಳುವ ಬಗೆಗೆ ಅವರ ಒಪ್ಪಿಗೆ ದೊರಕಿಸಿ, ನೇಮಕದ ಆಜ್ಞೆಯೂ ತಕ್ಷಣ ಹೊರಡುವಂತೆ ಮಾಡಿದರಲ್ಲದೆ ಅದರದೊಂದು ಪ್ರತಿಯನ್ನು ದೊರಕಿಸಿಕೊಂಡು ತಮ್ಮ ಆಸ್ಪತ್ರೆಗೆ ಬಂದು, ಸಮಾಧಾನದ ಉಸಿರುಬಿಡುತ್ತಾ ಹಿಂಬದಿಯ ಕೊಟಡಿ ಯಲ್ಲಿನ ಮಂಚದ ಮೇಲೊರಗಿ ಕೊಂಚ ವಿಶ್ರಮಿಸಿಕೊಂಡರು, ಹತ್ತು ನಿಮಿಷಗಳ ತರುವಾಯ ಎದ್ದು ಮುಖ ತೊಳೆದು, ಬಟ್ಟೆ ಬದಲಿಸಿ, ಕರಿಯ ಮೋರೆಗೆ ಅಷ್ಟು ಸ್ನೋ ಪೌಡರು ಸವರಿಕೊಂಡರು, ತಲೆಗೂದಲಿಗೆ ಪೊಮೇಡ್ ಹಚ್ಚಿ ಬಾಚಿ ಕೊಂಡರು. ಕನ್ನಡಿಯಲ್ಲಿ ಮತ್ತೆ ಮತ್ತೆ ಮುಖ ನೋಡಿಕೊಳ್ಳುತ್ತ, ಮನಸ್ಸಿ ನಲ್ಲಿಯೇ ಪ್ರಣಯಗೀತೆಯೊಂದನ್ನು ಗುಣುಗುಣಿಸುತ್ತ ಸುಮಿತ್ರಾದೇವಿಯ ಆಗಮನವನ್ನೆ ಎದುರುನೋಡುತ್ತ ನಿಂತರು.

ಆಸ್ಪತ್ರೆಯ ಗಡಿಯಾರದಲ್ಲಿ ಢಣಾ ಢಣ್ ಎಂದು ಐದರ ಗಂಟೆ ಬಾರಿಸುವು ದಕ್ಕೂ ಆಸ್ಪತ್ರೆಯ ಮುಂದೆ ಟಾಂಗಾ ಬಂದು ನಿಲ್ಲುವುದಕ್ಕೂ ಸರಿಹೋಯಿತು. ಕಾವಲುಗಾರ ಸುಮಿತ್ರಾದೇವಿಯನ್ನು ಆದರದಿಂದ ಬರಮಾಡಿಕೊಂಡು ಡಾಕ್ಟರರ ಕೊಟಡಿಗೆ ಕಳುಹಿಸಿದ.

"ನಮಸ್ಕಾರ ಡಾಕ್ಟರ್ ಸಾಹೇಬರೆ!" ಎನ್ನುತ್ತಾ ಒಳ ಬಂದ ಸುಮಿತ್ರಾ ದೇವಿಯನ್ನು ಕಂಡೊಡನೆ ವಿಟಸಾರ್ವಭೌಮರಿಗೆಲ್ಲ ಸಹಜವಾದ ವಿಶಿಷ್ಟ ನಗು ನಕ್ಕು,

"ಶಹಬ್ಬಾಸ್! ವೇಳೆಯ ಮಹತ್ವ ಅಂದರೇನು ಅನ್ನೂದನ್ನ ಚೆನ್ನಾಗಿ ತಿಳಕೊಂಡೀರಿ ನೀವು ಸುಮಿತ್ರಾದೇವಿ! ಐದು ಗಂಟೆ ಅಂದರೆ ಐದೇ ಗಂಟೆ. ಒಂದು ಮಿನಿಟು ಮುಂದಿಲ್ಲ, ಒಂದು ಮಿನಿಟು ಹಿಂದಿಲ್ಲ. ಐ ಲೈಕ್ ಇಟ್. ಬರ್‍ರಿ. ಬರ್‍ರಿ. ಕೂಡ್ರಿ," ಎನ್ನುತ್ತಾ ಅವಳ ಕೈಯನ್ನು ಬಲವಾಗಿ ಕುಲುಕಿ, ಅವರ ಹೆಗಲ ಮೇಲೆ ಕೈಯಿಟ್ಟು ಕುರ್ಚಿಯಲ್ಲಿ ಕೂಡಿಸಿದರು.

ಸುಮಿತ್ರಾದೇವಿಯ ಪೂರ್ವಚಾರಿತ್ರ್ಯವೇನೂ ಕಲಂಕರಹಿತವಾದುದಾಗಿರ ಲಿಲ್ಲವಾದರೂ ಈಗ ತಾನೊಬ್ಬ ವಿವಾಹಿತ ಸ್ತ್ರೀಯೆಂಬುದರ ವಿಚಾರ ಬಂದೊಡನೆ ಡಾಕ್ಟರರ ಈ ವರ್ತನೆಯಿಂದಾಗಿ ಅವಳಿಗೆ ಕೊಂಚ ಅಸಹ್ಯವೆನ್ನಿಸದಿರಲಿಲ್ಲ. ಅದೂ ಅಲ್ಲದೆ, ಮುನ್ನಾ ದಿನವಷ್ಟೆ ಅವಳ ಮದುವೆಯಾದುದು. ಕೈ ಹಿಡಿದ

ಗಂಡನೊಡನೆ ಕೂಡಾ ಇನ್ನೂ ಸಮಾಗಮ ನಡೆದಿರಲಿಲ್ಲ. ಗಂಡನಿಗಿಂತ ಮೊದಲೇ ಈ ಡಾಕ್ಟರರಿಗೆ ತಾನು ದೇಹವೊಪ್ಪಿಸಬೇಕಾಗಿ ಬಂದಿತಲ್ಲಾ ಎಂಬ ವಿಚಾರ ಬಂದೊಡನೆ ಅವಳಿಗೆ ನಗುವುಕ್ಕಿ ಬರದಿರಲಿಲ್ಲ. ಡಾಕ್ಟರರ ಸಲುಗೆಯ ವರ್ತನೆಯ ಬಗೆಗೆ ಅವಳು ಆಕ್ಷೇಪವೆತ್ತುವಂತೆಯೂ ಇರಲಿಲ್ಲ. ಅವರು ಪ್ರಸನ್ನ ರಾದರೆ ತಾನೆ ತನಗೆ ಈ ಊರಿನಲ್ಲಿ ನೌಕರಿ ದೊರಕುವುದು?

ಸುಮಿತ್ರಾದೇವಿ ತನ್ನನ್ನು ತಾನೆ ಸಂತೈಸಿಕೊಂಡು ಮತ್ತೆ ಯೋಚಿಸಿದಳು. ಈ ಹಿಂದೆ ಅನೇಕ ಗಂಡಸರು ತನ್ನ ಶರೀರಸುಖ ಪಡೆದು ತೃಪ್ತರಾದ ಬಳಿಕ ತನ್ನ ತೊನ್ನಿನ ಬಿಳುಪನ್ನು ಕಂಡೊಡನೆ ಹೇಸಿಕೊಂಡು ಹೋದವರು ಮತ್ತೊಮ್ಮೆ ತನ್ನ ಹತ್ತಿರ ಸುಳಿದಿರಲಿಲ್ಲ. ತನ್ನ ಗಂಡನಿಗೂ ಈ ರಹಸ್ಯ ತಿಳಿದಬಳಿಕ ಅವರೂ ಹಾಗೇ ಮಾಡಬಹುದೋ ಏನೋ. ಇಂದ್ರಗೇರಿಯವರಾದರೋ ಹೆಸರಾಂತ ಡಾಕ್ಟರು. ತನಗೆ ತೊನ್ನು ಅಂಟಕೊಂಡ ಸಂಗತಿ ಈಗಲೇ ಅವರಿಗೆ ಗೊತ್ತಾದರೆ ತನಗೆ ಉಪಕ್ಕಾರವೇ ಆದೀತು. ಯಾವುದೊಂದು ಔಷಧಿಯನ್ನಾಗಲಿ ಇಂಜಕ್ಶನ್ ಆಗಲಿ ಕೊಟ್ಟು ಅವರು ತನ್ನ ರೋಗವನ್ನು ಗುಣಪಡಿಸಬಹುದು. ಒಂದು ವೇಳೆ ಗುಣವಾಗದಿದ್ದ ಪಕ್ಷಕ್ಕೆ ಅದು ಸಾಂಸರ್ಗಿಕ ರೋಗವೇನೂ ಅಲ್ಲ ವೆಂಬ ಸತ್ಯಸಂಗತಿಯನ್ನೇ ತನ್ನ ಗಂಡನಿಗೆ ತಿಳಿಸಿ ಆತ ತನ್ನಿಂದ ದೂರವಿರದಂತೆ ಮಾಡಲು ನೆರವಾಗಬಹುದು. ಅಂತೂ ಈ ಮಹಾನುಭಾವನಿಂದ ತನಗೆ ಅಪಕಾರದ ಬದಲು ಉಪಕಾರವೇ ಹೆಚ್ಚೆಂದು ಕಾಣುತ್ತದೆ.

ಈ ಯೋಚನೆ ಹೊಳೆಯುತ್ತಲೂ ಡಾಕ್ಟರರಿಗೆ ತನ್ನ ಸರ್ವಸ್ವವನ್ನೂ ಅರ್ಪಿಸಲು ಸಂತೋಷದಿಂದ ಸಿದ್ಧಳಾದಳು ಸುಮಿತ್ರಾದೇವಿ.

"ನನ್ನಿಂದ ನಿಮಗೆ ತೊಂದರೆಯಲ್ಲವೇ ಡಾಕ್ಟರ್ ಸಾಹೇಬರೆ?"

"ತೊಂದರೆ? ನಿನ್ನಿಂದ ತೊಂದರೆ? ಛೆ. ಛೆ." ಅವಳನ್ನು ಹತ್ತಿರ ಹತ್ತಿರ ಎಳೆದುಕೊಳ್ಳುತ್ತಾ ಡಾಕ್ಟರು ಹೇಳಿದರು: "ಕ್ಷಮಿಸು ಸುಮಿತ್ರಾ. ಏಕವಚನ ದಲ್ಲಿ ಮಾತಾಡುತೀನಂತ ಸಿಟ್ಟಾಗಬೇಡಾ. ನನಗೆ ಬಹುವಚನದಿಂದ ಮಾತಾಡುವ ರೂಢಿಯೇ ಇಲ್ಲ. ಪ್ರೇಮ ವಿಶ್ವಾಸವಿದ್ದವರ ಸಂಗಡ ನಾನು ಯಾವಾಗಲೂ ಏಕವಚನದಿಂದಲೇ ಮಾತಾಡ್ತೀನಿ. ಬಹುವಚನ ಅಂದರೆ ಬೂಟಾಟಿಕೆಯಷ್ಟೆ. ಆತ್ಮೀಯರ ಹತ್ತಿರ ಮಾತಾಡುವಾಗ ಈ ಆಡಂಬರವೆಲ್ಲಾ

ಯಾಕೆ? ನೀನೂ ನನಗೆ ಆತ್ಮೀಯಳೇ ಆಗಿರುವಾಗ ನಿನ್ನನ್ನು ನಾನು ಸುಮಿತ್ರಾ ಅಂತಲೇ ಕರೆಯುವವ. ನೀನು ಸಿಟ್ಟಾದರೂ ಅಡ್ಡಿಯಿಲ್ಲ. ಏನು?"

"ಅದರಲ್ಲೇನು ಸಿಟ್ಟು ಡಾಕ್ಟರೇ? ನನಗಾಗಿ ನೀವು ಇಷ್ಟೊಂದು ತೊಂದರೆ ತೆಗೆದುಕೊಳ್ಳುತ್ತಿರುವದಾದರೂ ಯಾತಕ್ಕಾಗಿ? ನಾನು ಆತ್ಮೀಯಳಂತಲೇ ಅಲ್ಲೇನು? ನೀವು ನನ್ನನ್ನ ಹ್ಯಾಗೆ ಬೇಕಾದರೂ ಕರೆಯಬಹುದು. ಸುಮಿತ್ರಾ ಅಂದರೂ ಸರಿ, ಸುಮಾ ಅಂದರೂ ಸರಿ, ಅಥವಾ ಬರೀ ಸೂ ಅಂದರೂ ಸರಿಯೇ!" ಎನ್ನುತ್ತಾ ಕಿಲಕಿಲನೆ ನಕ್ಕಳು ಸುಮಿತ್ರಾ.

"ವಾಹವ್ವಾ! ಮಾತಿನಲ್ಲಿ ಎಂಥಾ ಚದುರಿಯಿದ್ದೀಯೇ ನೀನು ಸುಮಾ!" ಎನ್ನುತ್ತಾ ಅವಳ ಕೆನ್ನೆಯನ್ನು ಮೃದುವಾಗಿ ಚಿವುಟಿದರು ಡಾಕ್ಟರು, "ನನಗಿಂತಲೂ ಹೆಚ್ಚು ಆಟ ಆಡಿದ ಸಿಂಹಿಣಿ ನೀನು! ನನಗೆ ಗೊತ್ತಾಯಿತು!" ಎಂದು ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತಾ,

"ಏನಾಯ್ತು ಡಾಕ್ಟರೇ? ಚೇರ್ಮನರು ಯಾವಾಗ ಬರ್ತಾರೆ? ನನ್ನ ಕೆಲಸದ್ದು ನಿಶ್ಚಯವಾಯಿತೇ?"

"ಅಯ್ಯೋ ಹುಚ್ಚಿ! ಸುಮಿತ್ರಾ, ನಿನಗಿನ್ನೂ ಈ ಡಾಕ್ಟರ ವರ್ಚಸ್ಸು ಎಂಥಾದ್ದೆನ್ನೂದು ಗೊತ್ತಿದ್ದಂತೆ ಕಾಣೂದಿಲ್ಲ. ನೀನಿನ್ನೂ ಹೊಸಬಳು."

"ಹಾಗೇನಿಲ್ಲ ಡಾಕ್ಟರೆ. ನನಗೂ ಎಲ್ಲಾ ಗೊತ್ತಾಗಿದೆ. ಲೀಲಾದೇವಿ ಗೌರೀದೇವಿ ಎಲ್ಲಾ ಹೇಳಿದಾರೆ ನಿಮ್ಮ ಬಗ್ಗೆ. ಈ ನಗರದ 'ಕಿಂಗ್ ಮೇಕರ್' ಅಂತೆ ನೀವು...."

"ಕಿಂಗ್‌ಮೇಕರ್ ಅಷ್ಟೇ ಯಾಕೆ, ಕ್ವೀನ್‌ಮೇಕರ್ ಕೂಡಾ ಹೌದು, ಲೀಲಾದೇವಿ, ಗೌರೀದೇವಿ, ಈಗ ಸುಮಿತ್ರಾದೇವಿ....ವಾಹವ್ವಾ....ಎಂಥಾ ಕ್ವೀನ್ಸ್! ಡಾರ್ಲಿಂಗ್," ಎನ್ನುತ್ತಾ ಡಾಕ್ಟರು ಅವಳ ಕೈಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಅವಳನ್ನು ಮಂಚದ ಕಡೆ ನಡೆಸಿಕೊಂಡೊಯ್ದು,

"ಬಾ, ಚೇರ್ಮನ್ನರನ್ನ ತೋರಿಸ್ತೀನಿ. ಮೊದಲು ನೀನು ರಾಜೀನಾಮೆ ಬರೆಯಬೇಕು ಗೊಬ್ಬೂರಿನ ನೌಕರಿಗೆ!" ಎಂದು ಹೇಳುತ್ತಾ ಅವಳನ್ನು ಎದೆಗೊತ್ತಿಕೊಂಡು ತುಟಿಗಳನ್ನು ಚುಂಬಿಸಿದರು.

"ಬೇಡ, ಬೇಡ,"ವೆಂಬ ತೋರಿಕೆಯ ಹಾವಭಾವವಲ್ಲದೆ ಇನ್ನಾವ ವಿರುದ್ಧ ಪ್ರತಿಕ್ರಿಯೆಯನ್ನು ಅವಳು ವ್ಯಕ್ತಗೊಳಿಸಲಿಲ್ಲ. ಅವಳನ್ನು ನೌಕರಿಗೆ

ನೇಮಿಸಿಕೊಂಡ ಆಜ್ಞೆಯ ಕಾಗದ ಅವಳ ಕೈಸೇರಿತು. ಡಾಕ್ಟರರ ತೊಡೆಗಳ ಮೇಲೆ ಕುಳಿತುಕೊಂಡಿದ್ದ ಹಾಗೇ ಅವಳು ಗೊಬ್ಬೂರಿನ ಕೆಲಸಕ್ಕೆ ರಾಜೀನಾಮೆ ಬರೆದಳು.

ಎಲ್ಲವೂ ಮುಗಿದ ಬಳಿಕ ತನ್ನ ವಸ್ತ್ರಗಳನ್ನು ಸರಿಪಡಿಸಿಕೊಂಡು, ಮುಖಕ್ಕೆ ತುಸು ಪೌಡರು ಬಳಿದುಕೊಂಡು ಅವಳು ಹೊರಟು ನಿಲ್ಲುತ್ತಲೂ ಡಾಕ್ಟರು ಅವಳನ್ನು ಹಿಡಿದು ಮತ್ತೊಂದು ಬಾರಿ ಮುತ್ತಿಟ್ಟು,

"ಮತ್ತೆ ಯಾವಾಗ ದೇವೀದರ್ಶನ?" ಎಂದರು.

"ಭಕ್ತ ಬಯಸಿದಾಗ!" ಎಂದು ಹೇಳುತ್ತಾ ಕೊರಳು ಕೊಂಕಿಸಿ ಮುಂದೆ ಸಾಗಿದಾಕೆ ಮತ್ತೆ ನಿಂತು ಹೇಳಿದಳು:

"ಈ ಹಾಳು ರೋಗದಿಂದ ಬಹಳ ಬೇಸರು ಬಂದದೆ. ಆದಷ್ಟು ಜೇಗ ನನ್ನನ್ನ ಇದರಿಂದ ಪಾರುಮಾಡಬೇಕು."

"ಓಹ್ಹೊ. ಅದಕ್ಕೇನು? ನೀನು ನಾಳೆಯೇ ಬಂದರೂ ಔಷಧ ಕೊಡ್ತೀನಿ."

"ಮೊದಲು ಈ ಸಂಗತಿ ನಮ್ಮವರಿಗೆ ತಿಳೀಬೇಕಲ್ಲ. ಅವರೂ ನಾನೂ ಕೂಡೇ ಬಂದಾಗ ಮಾತ್ರ ನೀವು ಔಷಧ ಕೊಡೂದು. ಅದುವರೆಗೂ ಅವರೆದುರಿಗೆ ಈ ಸುದ್ದಿ ಎತ್ತಬಾರದು ಮತ್ತೆ. ನಿಮಗೆ ಹ್ಯಾಗೆ ಗೊತ್ತಾಯ್ತು ಅಂತ ಅವರು ಸಂಶಯಪಟ್ಟುಕೊಂಡರೆ!"

ಅವಳ ಧೂರ್ತತನವನ್ನು ಮೆಚ್ಚಿಕೊಳ್ಳುತ್ತ ಡಾಕ್ಟರು ಹೇಳಿದರು:

"ಆಗಲಿ ಸುಮಾ. ಹಾಗೇ ಆಗಲಿ."

ಅವರನ್ನು ಬೀಳ್ಕೊಂಡು ಅವಳು ಹೊರಗೆ ಬರುತ್ತಲೂ "ನಮಸ್ಕಾರ ಬಾಯಿಸಾಹೇಬ್!" ಎಂದು ತಲೆಬಾಗಿಸಿ ವಂದಿಸಿದ ಕಾವಲುಗಾರ. ತನ್ನ ಕೈಚೀಲದಿಂದ ಎಂಟಾಣೆಯ ನಾಣ್ಯವೊಂದನ್ನು ತೆಗೆದು ಅವನ ಕೈಗಿತ್ತು ಬಳುಕುತ್ತ ಬಳುಕುತ್ತ ಬೀದಿಯಲ್ಲಿ ಹೊರಟಳು ಸುಮಿತ್ರಾ.

ತಮ್ಮ 'ಮಹಿಳಾಮಂಡಲ'ಕ್ಕೆ ಮತ್ತೊಂದು ಹಕ್ಕಿಯ ಸೇರ್ಪಡೆ ಯಾಯಿತೆಂದು ಸಂತೋಷಿಸುತ್ತಾ ಡಾಕ್ಟರರು ಬಟ್ಟೆ ಬದಲಿಸತೊಡಗಿದರು.

ಸದಾಕಾಲವೂ ಕಾಮುಕ ಜೀವನ ನಡಸುತ್ತಿರುವ ಡಾಕ್ಟರಂಥವರ ಮನೋವೃತ್ತಿ ಬಲು ವಿಚಿತ್ರವಾದುದಾಗಿರುತ್ತದೆ. ಎಷ್ಟು ಜನ ಸ್ತ್ರೀಯರ

ಸಹವಾಸ ಲಭಿಸಿದರೂ ಅವರಿಗೆ ತೃಪ್ತಿಯಾಗುವುದಿಲ್ಲ – ಆ ಸ್ತ್ರೀಯರು ತಮ್ಮ ಸಹವಾಸದಿಂದ ಸಂತುಷ್ಟರಾಗಿರುವರೋ, ಅಸಂತುಷ್ಟರಾಗಿರುವರೋ? ಅವರು ಸುರೂಪಿಗಳೋ, ಕುರೂಪಿಗಳೋ? ರೋಗಿಗಳೋ, ನಿರೋಗಿಗಳೋ? ಇವೇ ಮೊದಲಾದ ಪ್ರಶ್ನೆಗಳು ಈ ಕಾಮುಕರನ್ನು ಎಂದೂ ಬಾಧಿಸುವುದಿಲ್ಲ. ಹೊಸ ಹೊಸ ಹೆಣ್ಣುಗಳನ್ನು ಹುಡುಕುವುದೊಂದೇ ಅವರ ರೀತಿ. ಅಂಥದೊಂದು ಹೊಸ ಹೆಣ್ಣನ್ನು ದೊರಕಿಸಲು ತಮ್ಮೆಲ್ಲ ಶಕ್ತಿಯನ್ನೂ ಉಪಯೋಗಿಸಿ, ಅದು ಕೈಗೆ ಸಿಕ್ಕಿದಾಗ ಸ್ವರ್ಗವೇ ಸಿಕ್ಕಿದಂತೆ ಅವರಿಗೆ ಭಾಸವಾಗುವುದು. ತಮಗೆ ಹೊಸದೆಂದು ತೋರುವ ಆ ಹೆಣ್ಣು ಇತರರಿಗೆ ಎಷ್ಟೇ ಹಳೆಯದಾಗಿದ್ದರೂ ಆ ಬಗೆಗೆ ಅವರು ಯೋಚಿಸುವುದಿಲ್ಲ. ಅನ್ನದ ಮೇಲೆ ಸೊಕ್ಕು ತೋರಿಸ ಬಾರದೆಂದು ಹಿರಿಯರು ಹೇಳುವುದುಂಟು. ಹಾಗೇ, ಎಂಥ ಹೊಲಸು ಹೆಣ್ಣು ಸಿಕ್ಕಿದರೂ ಈ ಕಾಮುಕರು ಅದರ ಬಗೆಗೆ ಅಸಹ್ಯಪಟ್ಟುಕೊಳ್ಳಲಾರರು. ಡಾಕ್ಟರ್ ಇಂದ್ರಗೇರಿಯವರಿಗಂತೂ 'ಅಸಹ್ಯ'ವೆಂಬ ಶಬ್ದವನ್ನು ಕೇಳಿದರೇನೇ ಅಸಹ್ಯವಾಗುತ್ತಿತ್ತು. ಅಂತೆಯೆ, ತೊನ್ನುರೋಗದಿಂದ ಬಾಧಿತಳಾದ ಸುಮಿತ್ರೆಯ ಬಗೆಗೂ ಅವರಿಗೆ ಹೇಸಿಕೆಯೆನಿಸಲಿಲ್ಲ.

ನೌಕರಿಯ ನೇಮಕದ ಆಜ್ಞೆಯನ್ನು ಕೈಯಲ್ಲಿ ಹಿಡಿದುಕೊಂಡು ನಗು ನಗುತ್ತ ಬಂದ ಸುಮಿತ್ರೆಯನ್ನು ಕಂಡಾಗ ಮಡಿವಾಳರಿಗಾದ ಆನಂದಕ್ಕಿಂತ ಹೆಚ್ಚು ಆನಂದ ಲೀಲಾದೇವಿಗಾಯಿತು. ಇಷ್ಟು ಬೇಗ ಈ ಕೆಲಸ ಸಾಧಿಸಿ ಕೊಟ್ಟ ಡಾಕ್ಟರು ತಮ್ಮ ಕೆಲಸವನ್ನೂ ಸಾಧಿಸಿಕೊಂಡೇ ಬಿಟ್ಟಿರಬೇಕೆಂದೂ ಅವಳು ಭಾವಿಸಿದಳು. ಅದೊಂದು ಬಗೆಯ ರಾಕ್ಷಸೀ ಸಂತೋಷ ಅವಳ ಹೃದಯವನ್ನು ಹಿಗ್ಗಿಸಿತು. ಹೆಂಡತಿ ಕಾಲು ಜಾರಿದಳೆಂದರೆ ಗಂಡನೂ ಅವಳ ಹಾದಿಯನ್ನೇ ಅನುಸರಿಸುವುದು ನಿಶ್ಚಿತವೆಂದು ಅವಳ ನಂಬುಗೆ. ಸುಮಿತ್ರಾ ಡಾಕ್ಟರ ಬುಟ್ಟಿಗೆ ಬಿದ್ದುದಾಯಿತು, ಇನ್ನು ಮಡಿವಾಳರು ತನ್ನ ಬುಟ್ಟಿಗೆ ಬೀಳಬಹುದೆಂದೇ ಆಕೆ ಯೋಚಿಸಿದಳು.

ಹನುಮಂತದೇವರ ಭಕ್ತರಾದ ಮಡಿವಾಳರ ಮೇಲೆ ಅನೇಕ ದಿನಗಳಿಂದ ಕಣ್ಣಿಟ್ಟುಕೊಂಡು ಬಂದಿದ್ದವಳು ಲೀಲಾದೇವಿ. ಅಂಗಸಾಧನೆಯಿಂದ ಬಲಿತು ತಕತಕನೆ ಕುಣಿಯುತ್ತಿದ್ದ ಅವರ ಸ್ನಾಯುಗಳನ್ನು ನೋಡುತ್ತಿರುವುದೇ

ಅವಳಿಗೊಂದು ಹಬ್ಬವೆನ್ನಿಸಿತ್ತು. ಅವರ ಮುಖದ ಮೇಲಿನ ಬ್ರಹ್ಮಚರ್ಯದ ತೇಜಸ್ಸು, ಕಣ್ಣುಗಳಲ್ಲಿನ ಹೊಳಪು ಅವಳನ್ನು ಹುಚ್ಚಿಯನ್ನಾಗಿಸಿದ್ದುವು. ಅವರನ್ನು ಬಲೆಗೆ ಬೀಳಿಸಲು ಅವಳು ಅನೇಕ ಬಾರಿ ಯತ್ನಿಸಿದ್ದಳಾದರೂ ಮಡಿವಾಳರು ಮಾತ್ರ ಅಂಥ ಅವಿವೇಕಕ್ಕೆ ಮನಸ್ಸು ಮಾಡಿರಲಿಲ್ಲ. ಆದರಿಂದ ಬೇಸರಪಟ್ಟುಕೊಂಡ ಲೀಲಾದೇವಿ ಗೌರೀದೇವಿಯೊಡನೆ ಅವರ ವಿಚಾರ ಪ್ರಸ್ತಾಪಿಸುತ್ತಾ "ಅದೊಂದು ಅರಸಿಕ ನರಪಶು," ಎಂದೆಲ್ಲ ಹೀಗಳೆದುದೂ ಇತ್ತು. ಗೌರೀದೇವಿಯೂ ಅದಕ್ಕೆ ಸೈ ಎಂದುದಲ್ಲದೆ ಇನ್ನು ಕೊಂಚ ಮುಂದೆ ಹೋಗಿ, ಮಡಿವಾಳರಿಗೆ ಗಂಡಸುತನವೇ ಇರಲಿಕ್ಕಿಲ್ಲವೆಂಬ ಊಹೆಯನ್ನು ಪ್ರಕಟಪಡಿಸಿದ್ದಳು. ಆ ವಿಚಾರ ಚರ್ಚಿಸುತ್ತ ಅವರಿಬ್ಬರೂ ಎಷ್ಟೋ ಬಾರಿ ಬಿದ್ದುಬಿದ್ದು ನಕ್ಕಿದ್ದರು. ಹೀಗಿದ್ದರೂ, ಲೀಲಾದೇವಿಯ ಬಯಕೆಯೇನೂ ಸತ್ತುಹೋಗಿರಲಿಲ್ಲ. ಮಡಿವಾಳರ ಗಂಡಸುತನವನ್ನೊಮ್ಮೆ ಪರೀಕ್ಷೆ ಮಾಡಿಯೇ ಬಿಡುವುದೆಂದು ಅವಳು ಆಗಲೇ ಪಣ ತೊಟ್ಟಿದ್ದಳು.

ಇನ್ನಿತರ ವಕೀಲರ ದೃಷ್ಟಿಯಲ್ಲಂತೂ ಮಡಿವಾಳರೆಂದರೆ ಏನನ್ನು ಅರಿಯದ ಮಗು, 'ಸಭ್ಯಪ್ರಾಣಿ.' ಅವರ ಸ್ನೇಹಪಿರಿಸಿಕೊಂಡೇ ಸುಮಿತ್ರೆಯನ್ನು ಜೇಬಿಗೆ ಸೇರಿಸಿಕೊಳ್ಳುವುದೆಂದು ಅವರೆಲ್ಲರೂ ಎಣಿಕೆಹಾಕಿಕೊಂಡಿದ್ದರು.

ರಾತ್ರಿಯ ಊಟವೂ ಮುಗಿದು ನವದಂಪತಿಗಳು ತಮ್ಮ ಮನೆಗೆ ಬಂದುದೂ ಆಯಿತು. ಸುಮಿತ್ರೆಯ ಮುಖದ ಮೇಲೆ ಆಗಲೂ ಸಂತೋಷ ಕುಣಿಯುತ್ತಿತ್ತು. ಮಡಿವಾಳರಿಗೆ ಕೊಂಚವೂ ನೆಮ್ಮದಿಯಿರಲಿಲ್ಲ. ಮಾಡ ಬಾರದ ಕೆಲಸ ಮಾಡಿದವರಂತೆ ಅವರ ಮನಸ್ಸು ಪರಿತಪಿಸುತ್ತಿತ್ತು. ಮನೆಗೆ ಬಂದೊಡನೆಯೆ ತಮ್ಮ ಕೊಟಡಿಗೆ ಹೋಗಿ ಬಟ್ಟೆಗಳನ್ನು ತೆಗೆದೊಗೆದು ತಮ್ಮ ಇಷ್ಟ ದೇವತೆಯಾದ ಮಾರುತಿರಾಯನ ಭಾವಚಿತ್ರದೆದುರಿಗೆ ಮಂಡಿಯೂರಿ ಕುಳಿತು ಚಿಕ್ಕಮಗುವಿನಂತೆ ಅತ್ತುಕೊಂಡರು.

"ಹೇ ದೇವಾ, ಮಾರುತಿರಾಯಾ, ಈ ನಿನ್ನ ಭಕ್ತನನ್ನ ಕ್ಷಮಿಸಪ್ಪಾ. ನನ್ನ ಆಯುಷ್ಯದ ಈ ಮೂವತ್ತು ವರ್ಷಗಳಲ್ಲಿ ನಾನು ಯಾವ ಹೆಂಗಸನ್ನೂ ಬಯಸಿರಲಿಲ್ಲ, ನನ್ನ ಬ್ರಹ್ಮಚರ್ಯವ್ರತಕ್ಕೆ ಭಂಗ ತಂದುಕೊಂಡಿರಲಿಲ್ಲ, ನಿನಗೆ ದ್ರೋಹ ಬಗೆದಿರಲಿಲ್ಲ. ಈಗ ಮಾತ್ರ ನೀನು ನನ್ನ ಕ್ಷಮಿಸಬೇಕು. ಬೇರೆ ಯಾವ ಉಪಾಯವೂ ಇಲ್ಲದೆ ನಾನು ಬ್ರಹ್ಮಚರ್ಯವ್ರತ ತ್ಯಜಿಸಿ ಇವಳನ್ನು

ಮದುವೆಯಾಗಬೇಕಾಯಿತು. ಮದುವೆಯಾದ ತಪ್ಪಿಗಾಗಿ ಇಂದು ಇವಳನ್ನ ಕೂಡಿಕೊಳ್ಳಲೇಬೇಕಾಗಿದೆ. ಕ್ಷಮಿಸಪ್ಪಾ ಕ್ಷಮಿಸು." ಎಂದು ಮನಸ್ಸಿನಲ್ಲಿಯೆ ಹೇಳುತ್ತಾ ಗಲ್ಲಗಲ್ಲ ಬಡೆದುಕೊಂಡರು.

ಅವರ ಪ್ರಾರ್ಥನೆಯನ್ನು ಮಾರುತಿರಾಯ ಕೇಳಿ ಕನಿಕರಗೊಂಡನೇನೋ! ಅವರ ಕಿವಿಗಳಲ್ಲಿ ಆತ ಉಸುರಿದಂತೆ ಭಾಸವಾಯಿತು :

"ಮದುವೆಯಾದರೂ ಅಡ್ಡಿಯಿಲ್ಲ. ಹೆಂಡತಿಯೊಡನೆ ಕೂಡಿದರೂ ಅಡ್ಡಿಯಿಲ್ಲ. ಮುಖ್ಯವಾಗಿ ಸಂಯಮವಿರಬೇಕು, ಅದೊಂದು ಇದ್ದರೆ ಬ್ರಹ್ಮ ಚರ್ಯವ್ರತದ ಪಾಲನೆಯಾದ ಹಾಗೇ ಸರಿ. ಯಾವಾಗಲೂ ಕಾಮಲೀಲೆಯಲ್ಲಿ ನಿರತನಾಗದೆ ಒಂದು ಮಿತಿಯಲ್ಲಿ ಗೃಹಸ್ಥಜೀವನ ಸಾಗಿಸಿದರಾಯಿತು."

ಮಡಿವಾಳರಿಗೆ ಎಷ್ಟೋ ಹಾಯೆನ್ನಿಸಿತು. "ನಿನ್ನ ಆಜ್ಞೆಯಂತೆಯೇ ನಡೆದುಕೊಳ್ತೀನಪ್ಪಾ!" ಎಂದು ಮಾರುತಿರಾಯನನ್ನು ಮನಸ್ಸಿನಲ್ಲಿಯೆ ವಂದಿಸಿ ಕಂಬನಿಗಳನ್ನು ಮಿಡಿದುಕೊಂಡು ಅವರು ಮೇಲಕ್ಕೇಳುತ್ತಲೂ ಎದುರಿಗೆ ಅರ್ಧನಗ್ನಳಾಗಿ ನಿಂತು ನಗುತ್ತಿದ್ದ ಅರ್ಧಾಂಗಿ ಕಾಣಿಸಿಕೊಂಡಳು.

ತನ್ನ ಗಂಡನಿಗೆ ಕಾಮ ಜೀವನದಲ್ಲಿ ಕೊಂಚವೂ ಆಸಕ್ತಿಯಿಲ್ಲದಿದ್ದುದು ಅನುಭವಕ್ಕೆ ಬರುತ್ತಲೂ ಸುಮಿತ್ರಾದೇವಿಗೆ ತುಂಬ ದುಃಖವಾಗದಿರಲಿಲ್ಲ. ಒಳ್ಳೆಯ ಗಂಡನ ಕೈಹಿಡಿದು ಗರತಿಯಾಗಿ ಬಾಳಬೇಕೆಂದೇ ಅವಳು ಬಹು ದಿನಗಳಿಂದ ಬಯಸಿಕೊಂಡು ಬಂದಿದ್ದಳು. ತಾನೇ ದುಡಿದು ಸಂಪಾದಿಸಿ ಗಂಡನನ್ನು ಸಾಕಿಕೊಂಡು ಹೋಗುವುದಕ್ಕೂ ಅವಳು ಸಿದ್ಧಳಿದ್ದಳು. ಆದರೆ, ಅದಕ್ಕೆ ಪ್ರತಿಫಲವೆಂದು ಗಂಡನಿಂದ ದೊರಕುವ ಸುಖವಾದರೂ ಆ ಗಂಡನಿಂದ ದೊರಕಬೇಡವೇ? ಅದೂ ಅವನಿಂದ ಸಿಕ್ಕದಂತಿದ್ದಲ್ಲಿ ತಾನು ಮದುವೆಯಾದುದಕ್ಕಾದರೂ ಅರ್ಥವೇನು? ಅವನ ಹೊಟ್ಟೆ ತುಂಬಿಸು ವುದಕ್ಕಾಗಿ ತಾನು ದುಡಿಯುವುದರ ಅಗತ್ಯವಾದರೂ ಏನು?

ಈ ಯೋಚನೆಗಳಿಂದಾಗಿ ನಾಲ್ಕಾರು ರಾತ್ರೆ ಅವಳಿಗೆ ನಿದ್ದೆಯೂ ಬರಲಿಲ್ಲ. ತಾನಿನ್ನು ಏನು ಮಾಡಬೇಕು? ತನ್ನ ಸಂಕಟವನ್ನು ಯಾರಲ್ಲಿ ತೋಡಿಕೊಳ್ಳಬೇಕು? ಈ ಗಂಡನೆಂಬ ಪ್ರಾಣಿಯಂತೂ ಒಂದು ಕಲ್ಲುಗುಂಡು....

ಹಾಗೆ ಅವಳ ಎದೆಗುದಿಗಾರಂಭವಾಗಿದ್ದಾಗ ಒಂದು ದಿನ ಮನೆಗೆ

ಬಂದ ಲೀಲಾದೇವಿ ಅವಳ ಬಾಡಿದ ಮುಖವನ್ನು ಚಿಕಿತ್ಸಕ ದೃಷ್ಟಿಯಿಂದ ನಿಟ್ಟಿಸುತ್ತ,

"ಯಾಕೆ ಬಾಡಿಹೋಯಿತೇ ನಿನ್ನ ಮುಖ ಕಮಲ? ಏನಾಯಿತೇ?" ಎಂದು ಕೇಳಿದಳು.

ಅವಳ ಜೊತೆಗೇ ಬಂದಿದ್ದ ಗೌರೀದೇವಿ ಮುಸಿಮುಸಿ ನಗುತ್ತ ನುಡಿದಳು:

"ಸುಖದ ಬಿಸಿಯನ್ನ ತಡಕೊಳ್ಳಲಿಕ್ಕಾಗದೆ ಬಾಡಿರಬೇಕು ಬಿಡೇ!"

ಮಡಿವಾಳರು ಮನೆಯಲ್ಲಿರಲಿಲ್ಲವಾದುದರಿಂದ ಆ ಹೆಂಗಸರ ನಾಲಗೆಗಳು ಹತೋಟಿಯಲ್ಲಿರಬೇಕಾದ ಅವಶ್ಯಕತೆಯಿರಲಿಲ್ಲ. ಸುಖದ ವಿಚಾರ ಹೊರಡುತ್ತಲೂ ಅಷ್ಟು ದಿನ ಸುಮಿತ್ರಳ ಎದೆಯಲ್ಲೇ ಕುದಿಯುತ್ತಿದ್ದ ದುಃಖವೆಲ್ಲಾ ಹೊರಚಿಮ್ಮಿ ಬಂತು.

"ಏನು ಸುಖಾನೋ, ಏನುಮಣ್ಣೋ. ಯಾವದೂ ತಿಳೀದ ಹಾಗಾಗಿದೆ ನನಗೆ."

"ಯಾಕವ್ವಾ, ಏನಾತು? ವಕೀಲರೇನಾದರೂ ಅಂದರೇ?"

"ಅವರೇನು ಅಂತಾರೆ? ನೆಟ್ಟಗೆ ಮಾತಾಡೂದಿಲ್ಲ ಕೂಡಾ. ಅಂತೂ ಇಂತೂ ನನ್ನ ಹಣೇಬರಹವೇ ನೆಟ್ಟಗಿಲ್ಲಂತ ಕಾಣುತದೆ. ಯಾರನ್ನ ಅಂದು ಏನುಪಯೋಗ?"

"ಅರೆ, ಅರೆ! ಏನಾತು ಹೇಳೇ ಮೊದಲು."

"ಏನು ಹೇಳಲಿ ನನ್ನ ತಲೆ!" ಎಂದಿಷ್ಟೆ ನುಡಿದು ಸುಮಿತ್ರಾ ಸುಮ್ಮನಾದಳು. ಲೀಲಾದೇವಿ ಗೌರೀದೇವಿಯರಿಬ್ಬರೂ ಎಷ್ಟು ಒತ್ತಾಯಪಡಿಸಿದರೂ ಮತ್ತೆ ಆಕೆ ತುಟಿ ಬಿಚ್ಚಲಿಲ್ಲ.

ದೇವಿಯರಿಬ್ಬರೂ ಪರಸ್ಪರರ ಮುಖ ನೋಡಿಕೊಂಡರು, ತಿಳಿಯಬೇಕಾದುದನ್ನು ತಿಳಿದುಕೊಂಡರು. ಅನಂತರ ಗೌರೀದೇವಿ ಹೇಳಿದರು:

"ಹೀಗೇನಾದರೂ ಆದೀತಂತ ನನಗೂ ಸಂಶಯ ಇತ್ತು. ಮಡಿವಾಳ ವಕೀಲರಂದರೆ ಬೈರಾಗಿ ಇದ್ದಂತೆ."

"ಬೈರಾಗಿಯಾದರೂ ಏನಾತೇ? ನಾರದನಂಥ ಬೈರಾಗಿಯೂ ಸಂಸಾರ ಮಾಡಿದನಲ್ಲ? ಮಡಿವಾಳ ವಕೀಲರೂ ಇಂದಿಲ್ಲ ನಾಳೆ ಹಾದಿಗೆ ಹತ್ತಬಹುದು.

ಮೊದಲು ಹತ್ತು ಹದಿನೈದು ದಿನ ರುಚಿ ಹತ್ತಬೇಕು. ಆ ಮ್ಯಾಲ ಎಲ್ಲಾ ನೆಟ್ಟಗಾಗುತದೆ," ಎಂದಳು ಕುಶಾಗ್ರಮತಿಯ ಲೀಲಾದೇವಿ.

"ಇದಕ್ಕೆಲ್ಲಾ ದುಃಖ ಮಾಡುತಾರೇನೇ ಸುಮಿತ್ರಾ? ಬಿಡುಬಿಡು. ಇದಕ್ಯಾಕೆ ಚಿಂತೆ? ಜಗತ್ತಿನಲ್ಲೇನು ಬ್ಯಾರೆ ಗಂಡಸರೇ ಇಲ್ಲೇನು?" ಎಂದಳು ಗೌರೀದೇವಿ.

ಸುಮಿತ್ರಾ ಚಕಿತಳಾಗಿ ತಲೆಯೆತ್ತಿ ಗೆಳತಿಯರನ್ನು ದಿಟ್ಟಿಸುತ್ತ ಹೇಳಿದಳು :

"ಎಂಥೆಂಥಾ ಮಾತಾಡ್ತೀರವ್ವಾ ನೀವು! ಮಾಡಿಕೊಂಡ ಗಂಡನ್ನ ಬಿಟ್ಟು ಬ್ಯಾರೆ ಗಂಡಸರನ್ನ ಹುಡುಕಿಕೊಂಡು ಹೋಗೂದಕ್ಕಾಗ್ತದೇನು?"

"ಯಾಕಾಗೂದಿಲ್ಲ? ಎಲ್ಲಾ ಆಗ್ತದೆ, ಅದು ಆಗಬೇಕಂತಲೇ ಮನೆಯೊಳಗೊಬ್ಬ ಗಂಡನ್ನ ಇಟ್ಟುಕೊಂಡಿರೂದು. ನಿನ್ನ ಕೊರಳೊಳಗಿರುವ ಗುಳದಾಳಿ ಅಂದರೆ ನಿನ್ನ ಕಾಪಾಡುವ ತಾಯಿತ ಇದ್ದಂತೆ. ಮಕ್ಕಳು ಗಿಕ್ಕಳು ಆದರೆ ಹೆಸರು ಹೇಳೂದಕ್ಕೆ ಒಬ್ಬ ಗಂಡನಂತೂ ಇದ್ದೇ ಇರುತಾನೆ. ಹೊರಗೆ ನೀನೇನು ಮಾಡಿದರೇನಂತೆ!"

"ಜನ ಆಡಿಕೊಳ್ಳುತಾರಲ್ಲ?"

"ಜನ! ಜನ! ಜನ! ಜನ ಅಂದರಾದರೂ ಯಾರು? ಅವರಾದರೂ ಎಷ್ಟು ಸಂಭಾವಿತರು? ಎಲ್ಲಾರ ಮನೆಯ ದೋಸೆಗೂ ತೂತೇ ಅಲ್ಲೇನೇ ಸುಮಿತ್ರಾ? ಜನರ ಮಾತಿಗೆ ಎಂದೆಂದೂ ಲಕ್ಷ್ಯ ಕೊಡಬಾರದು. ನಮ್ಮ ಮನಸಿಗೆ ಬಂದದ್ದು ಮಾಡುತ್ತಿರಬೇಕು. ಈಗ ನೋಡು. ಮಾಡಿಕೊಂಡ ಗಂಡನಿಂದ ನಿನಗೆ ಸುಖ ಇಲ್ಲಂತ ನೀ ಹೀಗೆ ಅಳುತಾ ಕೂತರೆ ಜನರೇನು ಬಂದು ನಿನ್ನ ದುಃಖ ದೂರ ಮಾಡ್ತಾರೇನು?" ಎಂದಳು ಗೌರೀದೇವಿ.

"ಹೌದೌದು. ಬರೋಬ್ಬರಿ," ಎಂದಳು ಸುಮಿತ್ರಾ.

"ಹೂಂ. ಹೀಗೆ ಹಾದಿಗೆ ಬಾ. ಮೊನ್ನೆ ಡಾಕ್ಟರ ಹತ್ತರ ಹೋಗಿದ್ದಿಯಲ್ಲ. ಹ್ಯಾಗಿದಾರೆ ನಮ್ಮ ಡಾಕ್ಟರು? ಎಷ್ಟು ಜೇಗ ನಿನ್ನ ಕೆಲಸ ಮಾಡಿಕೊಟ್ಟರು ನೋಡಿದಿಯೋ ಇಲ್ಲೋ? ಬಹಳ ಒಳ್ಳೆಯವರವರು. ಎಲ್ಲರಿಗೂ ಸಹಾಯ ಮಾಡೂದು ಅವರ ಸ್ವಭಾವ. ರೋಗಿಗಳ ಮ್ಯಾಲಂತೂ ಬಹಳ ಕಳಕಳಿ. ಹೆಂಗಸರ ರೋಗಗಳನ್ನ ನೆಟ್ಟಗೆ ಮಾಡುವದರಲ್ಲಂತೂ ಅವರ ಕೈಹಿಡಿಯಲು

ವವರ್‍ಯಾರೂ ಇಲ್ಲ ಕರ್ನಾಟಕದೊಳಗೆ, ಅವರಲ್ಲಿಗೆ ಹೋದ ಯಾವ ಹೆಂಗಸೂ ನೆಟ್ಟಗಾಗದೆ ಹಿಂದಿರುಗುವಂತಿಲ್ಲ. ಅವರು ತೆಗೆದುಕೊಳ್ಳುವ ತೊಂದರೆ ಯೆಷ್ಟು....ಪಾಪ, ಇಂಜಕ್ಶನ್ ಚುಚ್ಚಿಸಿಕೊಂಡು ನರಳುವ ಹೆಂಗಸರಿಗೆ ಅವರು ಘಳಿಗಳ ಕಾಟಿನ ಮ್ಯಾಲ ಮಲಗಗೊಡದೆ ಅವರಿಗಾಗೇ ತರಿಸಿಹಾಕಿದ ಸ್ಪ್ರಿಂಗಿನ ಮಂಚದ ಮೆತ್ತೆಯ ಗಾದಿಯ ಮ್ಯಾಲ ಮಲಗಿಸುತ್ತಾರೆ. ಅಲ್ಲಿ ತುಸುಹೊತ್ತು ಮಲಗಿದರೆ ಎಂಥಾ ನೋವೂ ಇಲ್ಲದಂತಾಗ್ತದೆ. ಯಾಕೆ ಗೌರಾ, ಹೌದೋ ಅಲ್ಲವೋ ನನ್ನ ಮಾತು?" ಎನ್ನುತ್ತಾ ಲೀಲಾದೇವಿ ಸುಮಿತ್ರೆಯನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿ ಮರ್ಮಭೇದಕವಾಗಿ ನಕ್ಕಳು. ಲೀಲಾದೇವಿಯ ನಗುವಿನಲ್ಲಡಗಿದ್ದ ಸೂಚನೆಯನ್ನರಿತುಕೊಂಡ ಗೌರೀದೇವಿಯೂ ನಗುನಗುತ್ತಾ ಸುಮಿತ್ರೆಯ ಮುಖದ ಮೇಲೆ ತನ್ನ ದೃಷ್ಟಿಯನ್ನು ಕೇಂದ್ರೀಕರಿಸಿದಳು.

ಲೀಲಾದೇವಿಯ ಮಾತು, ಅವಳ ಮತ್ತು ಗೌರೀದೇವಿಯ ನೋಟಗಳ ಹಿಂದಿನ ಅರ್ಥವನ್ನು ಕಲ್ಪಿಸಿಕೊಳ್ಳದಷ್ಟು ಅಜ್ಞಳೇನೂ ಆಗಿರಲಿಲ್ಲ ಸುಮಿತ್ರಾ. ತಾವೇ ಜಾಣೆಯರೆಂದು ಭಾವಿಸಿದ್ದ ಆ ಮೂರ್ಖ ಸ್ತ್ರೀಯರಿಗಿಂತಲೂ ಹೆಚ್ಚು ಜಾಣೆಯಾಗಿದ್ದಳು ಸುಮಿತ್ರಾ. ತನಗಿಂತ ಮೊದಲೇ ಅವರಿಬ್ಬರೂ ಡಾಕ್ಟರರ ಬಲೆಗೆ ಬಿದ್ದವರೆಂಬುದನ್ನು ಅವಳು ತಕ್ಷಣವೆ ಗ್ರಹಿಸಿಕೊಂಡಳು.

ಗೌರೀದೇವಿ ಹೇಳುತ್ತಿದ್ದಳು:

"ಓಹ್ಹೊ! ಡಾಕ್ಟರರ ಆ ಮಂಚ ಅಂದರೆ ಬಂಗಾರದ ಮಂಚವಿದ್ದಂತೆ. ಐದು ಮಿನಿಟು ಅಲ್ಲಿ ಮಲಗಿದರಾಯ್ತು, ಎಲ್ಲಾ ರೋಗಗಳು ಹೊರಟು ಹೋಗ್ತವೆ. ಅಲ್ಲಾವುದ್ದೀನನ ಮಾಯಾದೀಪದಂಥ ಮಂತ್ರದ ಮಂಚ ನೋಡವ್ವಾ ಅದು! ಅದೇ ಮಂಚದ ಪುಣ್ಯದಿಂದಲೇ ಅಲ್ಲವೇನು ನಮ್ಮ ಸುಮಿತ್ರಾಗೂ ನೌಕರಿ ಸಿಕ್ಕದ್ದು!"

"ಹೆ ಹೆ ಹೆ ಹೆ ಹ್ಹೆ!" ಎಂದಳು ಲೀಲಾದೇವಿ.

ಮತ್ತೆ ಗೌರೀದೇವಿಯೆ ಮುಂದುವರಿಸಿದಳು:

"ಸರಿಯವ್ವ. ನಮಗೇನೋ ಅನುಭವ ಅದೆ. ಆದರೆ ನಮ್ಮಾ ಹೊಸ ಗೆಳತಿ ಸುಮಿತ್ರಾದೇವಿಗೆ ಇನ್ನೂ ಆ ಅನುಭವವಾಗಿದೆಯೋ ಇಲ್ಲೋ ಯಾಗೆ ಗೊತ್ತು? ಅಥವಾ....ಡಾಕ್ಟರರು....ಈಗಾಗಲೇ ಆ ಅನುಭವ ಮಾಡಿಸಿ ಕೊಟ್ಟಿರುವರೋ ಏನೋ....ಸಿಟ್ಟಾಗಬ್ಯಾಡ ಸುಮಿತ್ರಾ. ಡಾಕ್ಟರರ ಸ್ವಭಾವ

ನಮಗೆ ಪೂರಾ ಗೊತ್ತು – ಆ ಮಂಚದ ಮ್ಯಾಲ ಮಲಗದ ಹೆಣ್ಣಿಗೆ ನೌಕರಿಯು ನಾತಿರಲಿ, ಒಂದು ಗುಟುಕು ಔಷಧ ಕೂಡಾ ಅವರಿಂದ ಸಿಗುವಂತಿಲ್ಲ. ಮಂಚದ ಮ್ಯಾಲ ಮಲಗಲು ತಯಾರಿರದ ಹೆಂಗಸರು ಅವರಲ್ಲಿಗೆ ಹೋಗೂದೇ ಇಲ್ಲ. ಒಬ್ಬೊಂಟಿಯಾಗಿ ಅಲ್ಲಿಗೆ ಹೋದ ಯಾವ ಹೆಣ್ಣೂ ಆ ಮಂಚದ ಮ್ಯಾಲ ಮಲಗದೆ ಹಾಗೇ ಹೊರಳಿ ಬಂದಿಲ್ಲ ಇದುವರೆಗೆ...."

"ಏನು ಗೌರಾ, ನೀನು ಅನ್ನುವದಾದರೂ ಏನು? ಸುಮಿತ್ರಾ ಅದರ ಮ್ಯಾಲ ಮಲಗಿಯೇ ಬಂದಿರಬೇಕು ಅಂತೀಯಾ?" ಎಂದಳು ಲೀಲಾದೇವಿ.

"ನನಗಂತೂ ಹಾಗೇ ಅನ್ನಿಸ್ತದವ್ವಾ. ಸುಮಿತ್ರಾ ಇಲ್ಲ ಅಂತ ಎಷ್ಟು ಹೇಳಿದರೂ ನಾ ನಂಬಲಿಕ್ಕಿಲ್ಲ," ಎಂದು ನುಡಿದು ಮಾತನ್ನು ಅಲ್ಲಿಗೇ ನಿಲ್ಲಿಸಿ ಗೌರೀದೇವಿ ಮತ್ತೊಮ್ಮೆ ಸುಮಿತ್ರೆಯತ್ತ ದೃಷ್ಟಿ ತೂರಿದಳು. ಅವರಿಬ್ಬರ ದೃಷ್ಟಿಗಳೂ ತನ್ನಿಂದ ಉತ್ತರವನ್ನು ನಿರೀಕ್ಷಿಸುತ್ತಿದ್ದುದು ಕಂಡುಬರುತ್ತಲೂ ಸುಮಿತ್ರೆ ತನ್ನ ಗುಟ್ಟನ್ನು ಬಯಲಿಗೆಳೆಯುವುದು ಅನಿವಾರ್ಯವಾಯಿತು.

"ನೋಡಿದಿಯಾ ಲೀಲಾ, ನಾ ಹೇಳಿದ್ದೇ ನಡೆದದೆ. ಹೌದಲ್ಲೋ?" ಎಂದಳು ಗೌರೀದೇವಿ ಬಿಂಕದ ಧ್ವನಿಯಲ್ಲಿ.

"ನನಗೂ ಆಗಲೇ ಗೊತ್ತಿತ್ತು ಬಿಡೇ. ಆ ದಿನ ಇವಳು ಕೈಯೊಳಗೆ ನೌಕರಿಯ ಆರ್ಡರು ಹಿಡಿದುಕೊಂಡು ಬಂದಾಗಲೇ ಗೊತ್ತಾಗಿಹೋಗಿತ್ತು ನನಗೆಲ್ಲಾ."

"ಆಯಿತಲ್ಲ. ಸುಮಿತ್ರಳೂ ನಮ್ಮ ಮಂಡಲಿಯ ಮೆಂಬರ್ ಆದಂತಾ ಯಿತು. ಇನ್ನೇನು ಚಿಂತಿಸಬೇಕಾಗಿಲ್ಲ ತಾಯಿಾ, ನಿನ್ನ ಗಂಡನಿಗಾಗಿ. ಡಾಕ್ಟರ ರಿದಾರೆ, ಇನ್ನೂ ಎಷ್ಟೋ ಮಂದಿ ಇದಾರೆ," ಎಂದು ನಾಚಿಕೆಯಿಲ್ಲದೆ ನುಡಿದು ಗಟ್ಟಿಯಾಗಿ ನಕ್ಕಳು ಗೌರೀದೇವಿ.

ಮೂವರು ಗೃಹಿಣಿಯರೂ ಆತ್ಮೀಯ ಗೆಳತಿಯರಾಗಲು ಬಹಳ ಸಮಯ ಬೇಕಾಗಲಿಲ್ಲ. ಮಡಿವಾಳ ವಕೀಲರನ್ನು ವಶಪಡಿಸಿಕೊಳ್ಳಲು ಲೀಲಾದೇವಿ ಬಗೆಬಗೆಯಾಗಿ ಯತ್ನಿಸಿದರೂ ಆ ವಿಚಾರದಲ್ಲಿ ಅವಳಿಗೆ ಯಶ ಲಭಿಸಲಿಲ್ಲ. ಸುಮಿತ್ರೆಗೆ ಮಾತ್ರ ಇನ್ನುಳಿದ ನಾಲ್ವರು ವಕೀಲರ ದಾಳಿಯಿಂದ ತಪ್ಪಿಸಿಕೊಳ್ಳುವುದಾಗಲಿಲ್ಲ. ಮಡಿವಾಳ ವಕೀಲರಿಗೆ ಧರ್ಮರಾಜನ ಪಟ್ಟಕಟ್ಟಿ

ಪಂಚಪಾಂಡವರಂತಿದ್ದ ಆ ವಕೀಲರಿಗೆ ತಾವು ಮೂವರು ದ್ರೌಪದಿಯರಾದರು ಆ ನಾರೀಮಣಿಗಳು..

ಸುಮಿತ್ರೆ ತನ್ನ ಹೊಸ ಕೆಲಸಕ್ಕೆ ಸೇರಿಕೊಳ್ಳಲು ತಡಮಾಡಲಿಲ್ಲ. ಗೊಬ್ಬೂರಿನ ಕೆಲಸಕ್ಕೆ ರಾಜೀನಾಮೆ ಸಲ್ಲಿಸಿ, ಅಲ್ಲಿನ ಗಂಟುಗದಡಿಗಳೆಲ್ಲವನ್ನು ಕಟ್ಟಿಕೊಂಡು ಪತಿರಾಜನ ಗೃಹವನ್ನು ಸೇರಿ ತನ್ನದೇ ಆದ ನೂರಾರು ರೂಪಾಯಿ ಖರ್ಚುಮಾಡಿ ಅತ್ಯಾವಶ್ಯಕ ಸಾಮಾನು ಕೊಂಡು ತಂದು ಮನೆಯನ್ನು ಸಜ್ಜುಗೊಳಿಸಿದಳು. ದಿನಗಳುರುಳಿದಂತೆಲ್ಲ ಮಡಿವಾಳ ವಕೀಲರು ತಮ್ಮ ಅರ್ಧಾಂಗಿಯ ಬಗೆಗೆ ಹೆಚ್ಚು ಹೆಚ್ಚು ಆಸಕ್ತಿ ತಳೆಯುವ ಹಾಗಾಯಿತು.

ಸಂಗೀತಕ್ಕಾಗಿಯೇ ದೇವತೆಗಳು ಹುಟ್ಟಿಸಿದಂತಿದ್ದ ಹೆಣ್ಣು ಸುಮಿತ್ರಾ. ದೈವದತ್ತವಾಗಿ ಬಂದಿದ್ದ ಮೋಹಕ ಕಂಠಧ್ವನಿ. ಅನಾಥಾಶ್ರಮದಲ್ಲಿದ್ದಾಗಲೇ ಸಂಗೀತವನ್ನೂ ನೃತ್ಯವನ್ನೂ ಅಭ್ಯಾಸಮಾಡಿದ್ದಳು. ಗುರುಗಳಿಂದ ಕಲಿತುಕೊಂಡಿದ್ದ ಅಲ್ಪ ಸ್ವಲ್ಪ ವಿದ್ಯೆಯನ್ನು ಸ್ವಂತದ ಬುದ್ಧಿಬಲದಿಂದ ಬೆಳಸಿಕೊಂಡು 'ಪರವಾಯಿಲ್ಲ' ಎಂದು ಯಾರಾದರೂ ಹೇಳುವಮಟ್ಟಿಗೆ ಆ ಕಲೆಗಳಲ್ಲಿ ಪ್ರಾವೀಣ್ಯತೆ ಪಡೆದುಕೊಂಡಿದ್ದಳು. ಓರೆಕೋರೆ ಹೈಸ್ಕೂಲಿಗೆ ಅವಳು ಸಂಗೀತ ಶಿಕ್ಷಕಿಯಾಗಿ ಸೇರಿಕೊಂಡ ಕೆಲವೇ ದಿನಗಳಲ್ಲಿ ಅವಳ ಕೀರ್ತಿ ಎಲ್ಲ ಕಡೆಗೂ ಹಬ್ಬಿತು.

ಮೊವಲನೆಯದಾಗಿ, ಅವಳು ತನ್ನ ವಿದ್ಯಾರ್ಥಿನಿಯರನ್ನು ಪರೀಕ್ಷಿಸಿ ಅವರಲ್ಲಿ ಐದು ಜನರನ್ನು ಆರಿಸಿಕೊಂಡು, ರಾಷ್ಟ್ರಗೀತೆ, ನಾಡಗೀತೆ, ಪ್ರಾರ್ಥನಾ ಗೀತೆ ಮತ್ತು ಹಲವು ಜನಪ್ರಿಯ ಗೀತೆಗಳನ್ನು ಸುಶ್ರಾವ್ಯವಾಗಿ ಹಾಡುವುದರಲ್ಲಿ ಅವರನ್ನು ತರಬೇತುಗೊಳಿಸಿದಳು. ಶಾಲೆಯಲ್ಲಿ ನಡೆದ ಒಂದು ಸಭೆಯ ಕಾಲಕ್ಕೆ ತನ್ನ ಶಿಷ್ಯೆಯರನ್ನು ಮುಂದೆಮಾಡಿ ಅವರ ಗಾಯನಕೌಶಲ್ಯವನ್ನು ಪ್ರದರ್ಶಿಸಿ ಸಭಿಕರ ಮೆಚ್ಚುಗೆ ಗಳಿಸಿಕೊಂಡಳು. ಅದೇ ಶಾಲೆಯಲ್ಲಿದ್ದ ಕವಿಗಳೊಬ್ಬರಿಂದ ನೃತ್ಯದ ಸನ್ನಿವೇಶಗಳಿಗೆ ಪ್ರಾಧಾನ್ಯತೆಯಿರುವ ಚಿಕ್ಕ ರೂಪಕವೊಂದನ್ನು ಬರೆಸಿಕೊಂಡು ತನ್ನ ಪ್ರೀತಿಯ ವಿದ್ಯಾರ್ಥಿನಿಯರಿಗೆ ಅದನ್ನು ಕಲಿಸಿ ಒಂದು ಶುಭ ಪ್ರಸಂಗದಲ್ಲಿ ಅದರ ಪ್ರದರ್ಶನಕ್ಕೂ ಏರ್ಪಡಿಸಿದಳು. ನೋಡಿದ ಜನರೆಲ್ಲ ಬೆರಳು ಕಚ್ಚಿಕೊಳ್ಳುವಂತಾಯಿತು. ಇಂಥ ಸುಂದರ ಕಾರ್ಯಕ್ರಮಗಳು ಆ ಶಾಲೆಯಲ್ಲಿ

ಅದುವರೆಗೆ ಎಂದೂ ನಡೆದಿರಲಿಲ್ಲವಾದುದರಿಂದ ಸಹಜವಾಗಿಯೆ ಹೆಡ್ ಮಾಸ್ತರರಿಗೂ ಅವಳ ಬಗೆಗೆ ಹೆಮ್ಮೆಯೆನ್ನಿಸಿತು.

ತಮ್ಮ ಹೆಣ್ಣುಮಕ್ಕಳಿಗೂ ಸಂಗೀತ–ನೃತ್ಯಗಳ ಜ್ಞಾನವಿದ್ದರೆ ವರಾನ್ವೇಷಣೆ ತೊಂದರೆಯದಾಗಲಾರದೆಂದು ಬಗೆದ ನಾಗರಿಕರನೇಕರು ಬೇರೆ ಹೈಸ್ಕೂಲುಗಳಲ್ಲಿ ಕಲಿಯುತ್ತಿದ್ದ ತಮ್ಮ ಹುಡುಗಿಯರನ್ನು ಅಲ್ಲಿಂದ ಬಿಡಿಸಿ ಸುಮಿತ್ರೆಯ ಹೈಸ್ಕೂಲಿಗೆ ಕಳಿಸತೊಡಗಿದರು. ಆಯಾ ಹೈಸ್ಕೂಲುಗಳಲ್ಲಿ ಈ ಹುಡುಗಿಯರ ಬೆನ್ನು ಹಿಡಿದು ತಿರುಗುತ್ತಿದ್ದ ಹುಡುಗರಿಗೆ ಅಸಮಾಧಾನವಾಗದಿದ್ದೀತೇ! ಸರಿ. ಲೈಲಾ ಹಿಂದೆ ಹೊರಡುವ ಮಜ್ನೂವಿನಂತೆ ಆ ಪ್ರೇಮವೀರರೆಲ್ಲರೂ ಸುಮಿತ್ರೆಯ ಹೈಸ್ಕೂಲಿಗೇ ಧಾವಿಸತೊಡಗಿದರು. ಹೀಗೆ, ನಗರದ ಎಲ್ಲ ಹೈಸ್ಕೂಲುಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರು ಸಂಘದ ಹೈಸ್ಕೂಲಿಗೇ ಓಟ ಬಿಡುತ್ತಲೂ ಇತರ ಹೈಸ್ಕೂಲುಗಳ ಸಂಚಾಲಕರಿಗೆ ವಿವಂಚನೆಯುಂಟಾದುದು ಸಹಜವೇ ಸರಿ. ಸಂಘದ ಹೈಸ್ಕೂಲಿನಲ್ಲಿದ್ದ ಒಂದೇ ಒಂದು ಆಕರ್ಷಣೆಯೆಂದರೆ ಸುಮಿತ್ರಾದೇವಿ. ಅವಳನ್ನೇ ತಮ್ಮ ಹೈಸ್ಕೂಲಿನಲ್ಲಿ ನೇಮಿಸಿಕೊಂಡುಬಿಟ್ಟರೆ ತಮ್ಮ ದೈವ ತೆರೆಯುವುದೆಂದು ಯೋಚಿಸಿ ಎಲ್ಲಾ ಸಂಚಾಲಕರೂ ಅವಳನ್ನು ದೊರಕಿಸುವುದಕ್ಕಾಗಿ ಅಹಮಹಮಿಕೆಯಿಂದ ಯತ್ನಿಸತೊಡಗಿದರು. ಸಂಘದ ಹೈಸ್ಕೂಲಿನಲ್ಲಿ ಅವಳಿಗೆ ಸಿಗುತ್ತಿದ್ದ ಸಂಬಳದ ಎರಡರಷ್ಟು ಸಂಬಳ ಕೊಡುವುದಕ್ಕೂ ಒಬ್ಬಿಬ್ಬರು ಸಿದ್ಧರಾದರು. "ಸಮಾಜೋದ್ಧಾರ ಸಮಿತಿ"ಯ ಹೈಸ್ಕೂಲಿನ ಸಂಚಾಲಕರಂತೂ ಅವಳ ಮನೆಗೇ ಬಂದು ಮಡಿವಾಳ ವಕೀಲರನ್ನೂ ಗೋಳು ಹುಯ್ದುಕೊಳ್ಳಲಾರಂಭಿಸಿದರು. ಎಲ್ಲರಿಗೂ ಅವಳದು ಒಂದೇ ಉತ್ತರ: ಡಾಕ್ಟರ್ ಇಂದ್ರಗೇರಿಯವರ ಶಿಫಾರಸಿನಿಂದ ತಾನು ಸಂಘದ ಹೈಸ್ಕೂಲು ಸೇರಿದ್ದುದರಿಂದ ಈಗಲೂ ಅವರ ಶಿಫಾರಸು ಪಡೆದೇ ಬೇರೆ ಯೋಚನೆ ಮಾಡುವುದು, ಎಂದು.

ಸರಿ. ಸಮಾಜೋದ್ಧಾರ ಸಮಿತಿಯ ಆ ಮಹಾನುಭಾವರು ಡಾಕ್ಟರರನ್ನು ಕಾಡಿ ಬೇಡಿ, ಸುಮಿತ್ರೆಗೆ ಎರಡು ನೂರು ರೂಪಾಯಿ ಸಂಬಳ ಕೊಡಲು ಸಂತೋಷದಿಂದ ಒಪ್ಪಿಕೊಂಡು ಡಾಕ್ಟರರನ್ನೂ ಒಪ್ಪಿಸಿದರು. ಅವಳಿಗೆ ಅಷ್ಟು ಸಂಬಳ ತೆರುವ ಶಕ್ತಿ ಸಂಘದ ಹೈಸ್ಕೂಲಿನವರಿಗಿರಲಿಲ್ಲ. ಅವರೂ ವಿಷಾದದಿಂದಲೇ ಅವಳನ್ನು ಬಿಡುಗಡೆಮಾಡಿದರು.

ಸುಮಿತ್ರಾದೇವಿ ಸಮಿತಿಯ ಹೈಸ್ಕೂಲು ಸೇರಿಕೊಳ್ಳುತ್ತಲೂ ಅದರ ಸಂಚಾಲಕರು ಎಣಿಕೆ ಹಾಕಿಕೊಂಡಿದ್ದಂತೆಯೇ ಎಲ್ಲವೂ ನಡೆದುಹೋಯಿತು. ಸಂಘದ ಹೈಸ್ಕೂಲಿನಲ್ಲಿದ್ದ ಅವಳ ವಿದ್ಯಾರ್ಥಿನಿಯರೆಲ್ಲರೂ ಅದನ್ನು ಬಿಟ್ಟು ಸಮಿತಿಯ ಹೈಸ್ಕೂಲು ಸೇರಿದರು. ಅಷ್ಟು ಮಾತ್ರವಲ್ಲ, ನಗರದ ಮಹಿಲಾ ವಿದ್ಯಾಲಯದ ಹುಡುಗಿಯರೂ ಅದನ್ನು ತ್ಯಜಿಸಿ ಇತ್ತ ಧಾವಿಸಿಬಂದರು. ಇನ್ನಿತರ ಹೈಸ್ಕೂಲುಗಳಲ್ಲಿನ ವಿದ್ಯಾರ್ಥಿನಿಯರೂ ಅವರನ್ನನುಸರಿಸಿ ಬಂದರು. ಸಮಿತಿಯ ಹೈಸ್ಕೂಲಿನ ಸಂಚಾಲಕರ ಸಂತೋಷ ಎದೆಯಲ್ಲಿ ಹಿಡಿಸದೆ ಹೊರ ಚಿಮ್ಮತೊಡಗಿತು. ಮುಂದಿನ ವರ್ಷದಿಂದ ವಿದ್ಯಾರ್ಥಿನಿಯರಿಗಾಗಿ ಪ್ರತ್ಯೇಕ ವರ್ಗಗಳನ್ನಾರಂಭಿಸುವ ಯೋಜನೆಯನ್ನೂ ಅವರು ಸಿದ್ಧಗೊಳಿಸಿದರು.

ಶಾಲೆಗೆ ಇಂಥ ಊರ್ಜಿತಸ್ಥಿತಿಯನ್ನು ತಂದುಕೊಟ್ಟುದುದರಿಂದ, ಅಲ್ಲಿ ಇಪ್ಪತ್ತೈದು ವರ್ಷಗಳಿಂದ ಕೆಲಸಮಾಡುತ್ತ ಬಂದಿದ್ದ ಶಿಕ್ಷಕರಿಗಿಂತ ಸುಮಿತ್ರೆಯ ಸ್ಥಾನಮಾನಗಳೇ ಹೆಚ್ಚಿನವಾದುವು. ಮುಖ್ಯಾಧ್ಯಾಪಕರೂ ಕೂಡ ಅವಳಿಗೆ ತಗ್ಗಿ ನಡೆಯಬೇಕಾದ ಪ್ರಸಂಗ ಬಂತು. ಅವಳು ಯಾವ ಕಾರಣದಿಂದಲಾದರೂ ಮುನಿದುಕೊಂಡು ಶಾಲೆಯನ್ನು ಬಿಟ್ಟು ಹೊರಟರೆ ಅವಳ ಹಿಂದೆಯೇ ಎಲ್ಲ ಹುಡುಗರೂ ಹುಡುಗಿಯರೂ ಹೊರಟುಹೋಗಿ ಶಾಲೆಯನ್ನೇ ಮುಚ್ಚುವ ಪ್ರಸಂಗ ಬಂದರೂ ಬರಬಹುದೆಂಬ ಹೆದರಿಕೆ ಅವರದು. ಅಂತೆಯೇ, ಮುಖ್ಯಾಧ್ಯಾಪಕರನ್ನೊಳಗೊಂಡು ಎಲ್ಲ ಶಿಕ್ಷಕರೂ ಅವಳನ್ನು ಓರ್ವ ರಾಣಿಗೆ ಸಲ್ಲತಕ್ಕ ಸನ್ಮಾನದಿಂದ ನಡಸಿಕೊಳ್ಳುವಂತಾಯಿತು.

ಈ ಗೌರವಾದರಗಳಿಂದಾಗಿ ಸುಮಿತ್ರೆಯ ತಲೆ ತಿರುಗದಿದ್ದುದೇ ಆಶ್ಚರ್ಯದ ಮಾತು. ಶಾಲೆಯಲ್ಲಿ ತನ್ನ ಸ್ಥಾನ ಭದ್ರವಾದುದರ ನಂಬುಗೆಯುಂಟಾದ ಮೇಲೂ ಆಕೆ ತನ್ನ ಕರ್ತವ್ಯವನ್ನು ಕಡೆಗಣಿಸಲಿಲ್ಲ. ವಿದ್ಯಾರ್ಥಿನಿಯರಿಗಾಗಿ ಪ್ರತಿದಿನವೂ ಸಾಯಂಕಾಲ ಎರಡು ಗಂಟೆಗಳವರೆಗೆ ತರಗತಿ ನಡಸುವುದು ಅವಳ ಪದ್ಧತಿಯಾಯಿತು. ಸಂಗೀತಕ್ಕಾಗಿ ಒಂದು ಗಂಟೆ. ನೃತ್ಯಕ್ಕಾಗಿ ಇನ್ನೊಂದು ಗಂಟೆ. ಆಸಕ್ತಿಯಿಲ್ಲದವರು ತರಗತಿಗಳಿಗೆ ಬರುವ ಅಗತ್ಯವಿಲ್ಲವೆಂದು ಮೊದಲೇ ಹೇಳಿಬಿಟ್ಟಿದ್ದಳು. ಅಂಥ ಹುಡುಗಿಯರಿಗೂ ಕೊರತೆಯಿರಲಿಲ್ಲ; ಅವರು ತಮ್ಮ ಪ್ರೀತಿಯ ವಿದ್ಯಾರ್ಥಿಗಳನ್ನು ಕೂಡಿಕೊಂಡು ಆ ಎರಡು ಗಂಟೆಗಳ ಸಮಯವನ್ನು ರಾಣೀತೋಟದಲ್ಲಿ ಮೋಜಿನಿಂದ ಕಳೆಯು

ತ್ತಿದ್ದರು. ಇನ್ನಿತರ ವಿದ್ಯಾರ್ಥಿನಿಯರಿಗೆ ಮಾತ್ರ ಸಂಗೀತ ಮತ್ತು ನೃತ್ಯಗಳ ಹುಚ್ಚೇ ಹಿಡಿದುಕೊಂಡ ಹಾಗಾಗಿತ್ತು.

ತನ್ನ ವಿಚಾರವಾಗಿ ನಗರದಲ್ಲೆಲ್ಲ ಒಳ್ಳೆಯ ವಾತಾವರಣವುಂಟಾಗಲೆಂಬ ಉದ್ದೇಶದಿಂದ ಸುಮಿತ್ರಾ ಹೊಸದೊಂದು ಯೋಜನೆ ಹೂಡಿದಳು. ಸಂಗೀತ ಮತ್ತು ನೃತ್ಯಕಲೆಗಳ ಸ್ಪರ್ಧೆಯೊಂದನ್ನೇರ್ಪಡಿಸಿ ಅದರಲ್ಲಿ ಮೇಲಿನ ಸ್ಥಾನ ದೊರಕಿಸಿದವರಿಗೆ ಬೆಳ್ಳಿಯ ಕಪ್ಪುಗಳನ್ನು ಬಹುಮಾನವಾಗಿ ಕೊಟ್ಟು ಪ್ರೋತ್ಸಾಹಿಸುವುದೆಂದು ಗೊತ್ತುಮಾಡಿಕೊಂಡು ಡಾಕ್ಟರರಲ್ಲಿ ಮಾತು ತೆಗೆದಳು.

"ಅದ್ಭುತ ಯೋಜನೆ. ಗುಡ್. ವೆರಿ ಗುಡ್," ಎಂದರು ಡಾಕ್ಟರು.

"ಬರೀ ಗುಡ್ ಅಂತ ಹೊಗಳಿದರೆ ಮುಗೀಲಿಲ್ಲ. ಬೆಳ್ಳಿಯ ಕಪ್ಪುಗಳನ್ನು ನೀವೇ ಕೊಡಬೇಕು," ಎಂದಳು ಸುಮಿತ್ರಾ.

ಡಾಕ್ಟರರ ಬುದ್ಧಿಯೇನು ಸಾಮಾನ್ಯವಾದುದೇ? ಸ್ಪರ್ಧೆಯಲ್ಲಿ ಭಾಗ ವಹಿಸುವ ಇಂದಿನ ವಿದ್ಯಾರ್ಥಿನಿಯರೆಂದರೇನೇ ನಾಳಿನ ಸಮಾಜದ ಸೂತ್ರ ಧಾರಿಗಳು, ಅಂಥವರ ದೃಷ್ಟಿಯಲ್ಲಿ ತಾವು ಇಂದಿನಿಂದಲೇ ದಾಸಿಯೆಂದೂ ಕಲಾಪ್ರೇಮಿಯೆಂದೂ ಕಾಣಿಸಿಕೊಳ್ಳುವಂತಾದರೆ ಮುಂದೆ ತಮಗೇ ಅನುಕೂಲ ವಲ್ಲವೆ? ಸ್ಪರ್ಧೆಯ ನಿಮಿತ್ತದಿಂದ ಎಷ್ಟೋ ಹುಡುಗಿಯರ ಪರಿಚಯವೂ ಆದೀತು. ಆ ಪರಿಚಯವನ್ನು ಬೆಳಸಿ ಸ್ನೇಹವನ್ನಾಗಿ ಮಾಡಿಕೊಳ್ಳುವುದು ತಮಗೇನು ಅಂಥ ಕಷ್ಟದ ಮಾತಾಗಲಾರದು.

ಹಾಗೆ ಯೋಚಿಸಿ ಡಾಕ್ಟರರು ಬಹುಮಾನಗಳ ಹೊಣೆಯನ್ನು ಸಂತೋಷ ದಿಂದಲೇ ವಹಿಸಿಕೊಂಡರು. ಸ್ಪರ್ಧೆಗೆ ಡಾಕ್ಟರರ ಹೆಸರನ್ನೇ ಇಡುವುದೆಂದು ಗೊತ್ತಾಯಿತು.

ಮುಂದೆ ಒಂದೆರಡು ದಿನಗಳಲ್ಲಿಯೆ ದಿನಪತ್ರಿಕೆಗಳಲ್ಲಿ ಆ ಬಗೆಗೆ ಜಾಹಿರಾತೂ ಪ್ರಕಟವಾಗಿ ಬಂತು:

**"ಓರೆಕೋರೆ ನಗರದ ವಿದ್ಯಾರ್ಥಿನಿಯರಿಗಾಗಿ**
**ಸಂಗೀತ ಹಾಗೂ ನೃತ್ಯ ಕಲಾಸ್ಪರ್ಧೆ**

ನಗರದ ಎಲ್ಲ ಶಾಲೆ ಕಾಲೇಜುಗಳ ವಿದ್ಯಾರ್ಥಿನಿಯರೂ ಭಾಗವಹಿಸ ಬಹುದು. ಪ್ರವೇಶಧನವಿಲ್ಲ. ಇಷ್ಟವಿದ್ದವರು ತಮ್ಮ ಶಾಲೆ ಕಾಲೇಜುಗಳ ಮುಖ್ಯಸ್ಥರ ಮುಖಾಂತರ ತಮ್ಮ ಹೆಸರು ತಿಳಿಸಬೇಕು. ಎಲ್ಲ ಅರ್ಜಿಗಳನ್ನು

"ಡಾ. ಇಂದ್ರಗೇರಿ ಸಂಗೀತ – ನೃತ್ಯ ಸ್ಪರ್ಧೆ"ಯ ಕಾರ್ಯದರ್ಶಿಗಳ ವಿಳಾಸಕ್ಕೆ ಕಳಿಸಬೇಕು."

ಓರೆಕೋರೆನಗರದಲ್ಲಿ ಸಂಗೀತಗಾರರಿಗೇನು ಕೊರತೆ? ಅಲ್ಲಿಯೇ ನೆಲಸಿರುವ ಅಖಿಲಭಾರತ ಕೀರ್ತಿಯ ಇಬ್ಬರು ಸಂಗೀತಗಾರರನ್ನೂ, ಗೊಬ್ಬೂರಿನ ಒಬ್ಬರು ಗವಯಿಗಳನ್ನೂ ಪರೀಕ್ಷಕರೆಂದು ನಿಯಮಿಸಲಾಯಿತು.

ಗೊತ್ತುಪಡಿಸಿದ ದಿನ ಸಮಯಕ್ಕೆ ಸರಿಯಾಗಿ ಸ್ಪರ್ಧೆಗಾರಂಭವಾಯಿತು, ನಗರಭವನದಲ್ಲಿ. ಒಟ್ಟು ಮೂರು ನೂರು ಜನ ಹುಡುಗಿಯರು ಸ್ಪರ್ಧೆಯಲ್ಲಿ ಭಾಗವಹಿಸಿದ ವಿಚಾರ ತಿಳಿದು ಕೂಡಿದ ಜನ ಬೆರಗುಗೊಳ್ಳದಿರಲಿಲ್ಲ. ಮುಂಜಾವಿನ ಎಂಟು ಗಂಟೆಗೆ ಮೊದಲಾದ ಪರೀಕ್ಷೆ, ಮಧ್ಯಾಹ್ನದ ಎರಡು ತಾಸು ಬಿಡುವನ್ನು ಬಿಟ್ಟು ಸಾಯಂಕಾಲ ಆರರವರೆಗೂ ನಡೆಯಿತು. ಮೂರು ನೂರು ಜನ ಕುಮಾರಿಯರ ಕಂಠಮಾಧುರ್ಯವನ್ನು ಉಚಿತವಾಗಿ ಸವಿಯುವ ಆ ಸುವರ್ಣ ಸಂಧಿಯನ್ನು ಓರೆಕೋರೆಯ ರಸಿಕ ನಾಗರಿಕರು ಕಳೆದುಕೊಳ್ಳುವುದುಂಟೇ? ಅದೊಂದು ದಿನವಿಡೀ ಅವರು ತಮ್ಮೆಲ್ಲ ಕೆಲಸಗಳನ್ನು ಬದಿಗಿರಿಸಿ ನಗರಭವನದಲ್ಲಿಯೇ ಗುಂಪುಗೂಡಿದರು. ಮಾಟ್ರಿಕ್ ಪರೀಕ್ಷೆಯ ಕಾಲದಲ್ಲೂ ಇಂಥ ಗದ್ದಲವಾಗಲಾರದೆಂದು ಶಿಕ್ಷಕರನೇಕರು ಮಾತನಾಡಿಕೊಂಡರು. ಶಾಂತಿ – ಸುವ್ಯವಸ್ಥೆಗಳನ್ನು ಕಾಪಾಡುವುದಕ್ಕಾಗಿ ಪೋಲೀಸರೂ ಬರಬೇಕಾಗಿ ಬಂತು.

ಆದರೂ ಆ ದಿನ ಫಲಿತಾಂಶ ಹೊರಬೀಳಲಿಲ್ಲ. ಪರೀಕ್ಷಕರಲ್ಲಿ ಭಿನ್ನಾಭಿಪ್ರಾಯ ಬಂದುದರಿಂದ ಫಲಿತಾಂಶವನ್ನು ಮರುದಿನ ಸಾರುವುದಾಗಿ ಘೋಷಿಸಲಾಯಿತು.

ಮತ್ತೆ ನೆರೆಯಿತು ಮರುದಿನ, ಜನಸಂದಣಿ. ಫಲಿತಾಂಶವೂ ಪ್ರಕಟವಾಯಿತು. ಸ್ಪರ್ಧೆಗಳಲ್ಲಿ ಮೊದಲನೆಯ ಮತ್ತು ಎರಡನೆಯ ಸ್ಥಾನ ಗಳಿಸಿದ ನಾಲ್ವರು ವಿದ್ಯಾರ್ಥಿನಿಯರೂ ಸುಮಿತ್ರೆಯ ಹೈಸ್ಕೂಲಿನವರೇ ಆಗಿದ್ದರು. ಅವರ ವಿಜಯ ಸುಮಿತ್ರೆಯ ವಿಜಯವೇ ಆಗಿತ್ತು.

ಆ ಸ್ಪರ್ಧೆಯಿಂದಾಗಿ ಅವಳ ಹೆಸರು ಓರೆಕೋರೆನಗರದ ಮನೆಮನೆಯಲ್ಲೂ ಪರಿಚಿತವಾಯಿತು. ಇಂದ್ರಗೇರಿಯವರಿಗೂ ಕಲಾಪ್ರೇಮಿಯೆಂಬ ಲೌಕಿಕ ಲಭಿಸಿತು.

ಅಷ್ಟರಿಂದಲೂ ಸುಮಿತ್ರೆಗೆ ತೃಪ್ತಿಯಾಗಲಿಲ್ಲ. ಕೇವಲ ವಿದ್ಯಾರ್ಥಿನಿಯರ ಮಟ್ಟಿಗೇ ತನ್ನ ವಿದ್ಯೆಯನ್ನು ಮಿಾಸಲಾಗಿಡದೆ ಇನ್ನುಳಿದವರಿಗೂ ಅವರ ಸದುಪಯೋಗವಾಗಬೇಕೆಂಬ ಮಹದಾಸೆಯಿಂದ ಪ್ರೇರಿತಳಾಗಿ ಅವಳು ಒಂದು ದಿನ ಡಾಕ್ಟರರ ಬಳಿ ಮಾತು ತೆಗೆದಳು :

" ಇಷ್ಟು ದೊಡ್ಡ ನಗರವಾದ ಇಲ್ಲಿ ಒಂದು ಸಂಗೀತ ಶಾಲೆ ನರ್ತನಶಾಲೆ ಇಲ್ಲ ಅಂದರೆ ನಾಚಿಕೆಗೇಡಲ್ಲವೇನ್ರಿ ? ಮತ್ತೆ, ಇದು ಸುಶಿಕ್ಷಿತರ ಸುಸಂಸ್ಕೃತರ ಊರಂತೆ! ಕರ್ನಾಟಕದ ಕೇಂದ್ರವಂತೆ! ಕಲಾದೃಷ್ಟಿಯಿಂದ ಎಷ್ಟು ಹಿಂದುಳಿದಿದೆಯಲ್ಲ!"

" ಹೌದೌದು ಸುಮಾ. ನೀನನ್ನೋದು ನಿಜ, ಈ ಊರಿನ ಮಂದಿಗೆ ಆದರ ವಿಚಾರವೇ ಇಲ್ಲ."

" ಅಂದರೆ ಇಲ್ಲಿಯ ಜನರೇನೂ ಅರಸಿಕರೆಂದರ್ಥ ಅಲ್ಲ. ಇಲ್ಲೂ ಸಾಕಷ್ಟು ಕಲಾಪ್ರಿಯರಿದಾರೆ. ಮೊನ್ನೆ ನಾವು ನಡೆಸಿದ ಸ್ಪರ್ಧೆಗೆ ಹ್ಯಾಗೆ ಕಿಕ್ಕಿರಿದು ಮುಕುರಿದ್ದರು ನೋಡಲಿಲ್ಲೇನು ? ಕಲಾಶಾಲೆಯೇ ಇಲ್ಲದಿದ್ದರೆ ಜನರಾದರೂ ಏನು ಮಾಡಿಯಾರು ? ಈಗ ನಾನೊಂದು ಶಾಲೆ ತೆಗೆದರೆ ಬೇಕಾದಷ್ಟು ಮಂದಿ ಕಲಿಯಲಿಕ್ಕೆ ಬರಬಹುದು. ಅಲ್ಲೇನು ?"

" ಓಹ್ಹೋ. ಬರದೇನು ಮಾಡಿಯಾರು, ನಿಮ್ಮಂಥ ಸುಬ್ಬುಲಕ್ಷ್ಮಿ, ಬಾಲ ಸರಸ್ವತಿ ಶಿಕ್ಷಿಕೆಯಾಗಿರುವಾಗ!" ಎಂದು ನಗುತ್ತಾ ನುಡಿದರು ಡಾಕ್ಟರು.

" ಹೂಂ! ನಿಮಗೆಲ್ಲಾ ಚೇಷ್ಟೆ. ಸುಬ್ಬುಲಕ್ಷ್ಮಿ, ಬಾಲಸರಸ್ವತಿಯರಿಗೇನು ಕೊಂಬು ಇದಾವೇನು ? ನಾನೂ ಪ್ರಯತ್ನಪಟ್ಟರೆ ಒಂದಿಲ್ಲೊಂದು ದಿನ ಅವರನ್ನು ಮಿಾರಿಸುವಂಥಾಕಿಯಾದೇನು !"

" ನೀನು ಈ ಹಾಳು ಊರಲ್ಲಿ ಕೊಳೆಯುವುದಕ್ಕಿಂತ ನೆಟ್ಟಗೆ ಮುಂಬಯಿಗೆ ಹೋಗಿ ಸಿನಿಮಾ ಸೇರುವದೇ ಒಳ್ಳೆಯದು ನೋಡು ಸುಮಾ !"

" ಈಗಲೇ ಏನಂತೆ ಅವಸರ ? ಆ ಸಿನಿಮಾದವರನ್ನ ಹುಡುಕಿಕೊಂಡು ನಾನಾಗೇ ಯಾಕೆ ಹೋಗಬೇಕು ? ಅವರಾಗೇ ಇಲ್ಲಿಯತನಕ ಬಂದು ನನ್ನ ಕಾಲಿಗೆ ಬಿದ್ದು ಕರೆದುಕೊಂಡು ಹೋಗುವಂತೆ ಮಾಡುತೀನಿ. ಅಥವಾ, ನೀವು ಮನಸು ಮಾಡಿದರೆ ನಾವೇ ಒಂದು ಕನ್ನಡ ಸಿನಿಮಾ ತೆಗೆದುಬಿಡಬಹುದಲ್ಲರೀ ?"

"ಓಹ್ಹೊ. ಯಾಕಾಗಬಾರದು? ಯೋಗ್ಯ ಸಮಯ ಬಂದಾಗ ತೆಗೆದರಾಯಿತು."

"ಸಿನಿಮಾ ಇರಲಿ. ಮೊದಲು ನೃತ್ಯ ಸಂಗೀತ ಶಾಲೆಯನ್ನೇ ತೆಗೆಯೋಣ. ಅದಕ್ಕೂ ನಿಮ್ಮ ಹೆಸರೇ ಇಟ್ಟರೆ ಹ್ಯಾಗೆ?"

"ಅಯ್ಯೋ ಮಹಾರಾಯತಿ. ಅಷ್ಟು ಮಾತ್ರ ಮಾಡಬ್ಯಾಡ. ನನ್ನ ಹೆಸರಿಟ್ಟರೆ ಒಂದು ತಿಂಗಳಲ್ಲಿ ದಿವಾಳಿ ತೆಗೆದೀತು ನಿನ್ನ ಶಾಲೆ!"

ಹೈಸ್ಕೂಲಿನ ಸಂಚಾಲಕರ ಅಪ್ಪಣೆಯನ್ನು ದೊರಕಿಸಿಕೊಂಡೇ ಆಕೆ ತನ್ನ ನೃತ್ಯ-ಸಂಗೀತ ಶಾಲೆಯನ್ನು ಸ್ಥಾಪಿಸಿದಳು. ಅದಕ್ಕಾಗಿ ದೊಡ್ಡ ಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡುದಾಯಿತು. ನೃತ್ಯದ ತರಗತಿಗಳನ್ನು ನಡಸಲು ಒಬ್ಬರು ನಾಟ್ಯಾಚಾರ್ಯರನ್ನೂ ಸಂಗೀತದ ತರಗತಿ ನಡೆಸಲು ಒಬ್ಬರು ಗವಯಿಗಳನ್ನೂ ಸಂಬಳದ ಮೇಲೆ ನೇಮಿಸಿಕೊಂಡುದಾಯಿತು. ಒಂದು ಒಳ್ಳೆಯ ದಿನವನ್ನು ಗೊತ್ತುಪಡಿಸಿ ಜಿಲ್ಲಾ ಕಲೆಕ್ಟರರ ಹಸ್ತದಿಂದ ಕಲಾಶಾಲೆಯ ಆರಂಭೋತ್ಸವವನ್ನು ತುಂಬ ವಿಜೃಂಭಣೆಯಿಂದ ಜರುಗಿಸಲಾಯಿತು. ನೂರಕ್ಕಿಂತಲೂ ಹೆಚ್ಚು ಮಂದಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಕಲಾಶಾಲೆಗೆ ಸೇರಿಕೊಂಡರು.

ಅಂಥ ದೊಡ್ಡ ಸಂಸ್ಥೆಯ ಮೇಲ್ವಿಚಾರಣೆಗಾಗಿ ಒಬ್ಬರು ವ್ಯವಸ್ಥಾಪಕರೂ ಅವಶ್ಯವಲ್ಲವೆ? ಮನೆಯಲ್ಲಿ ಕುಳಿತು ನೊಣ ಜಾಡಿಸುತ್ತಿದ್ದ ಮಡಿವಾಳ ವಕೀಲರು ಆ ಕೆಲಸವನ್ನು ಸಂತೋಷದಿಂದ ವಹಿಸಿಕೊಂಡರು. ಅಂದಿನಿಂದ ಅವರು ತಮ್ಮ ವಕೀಲ ಮಿತ್ರರ ಗುಂಪಿನಿಂದ ದೂರವಾದಂತಾಯಿತು. ಆದರೆ ಆ ಪಂಚಪಾಂಡವರು ಸುಮಿತ್ರೆಯನ್ನು ಮಾತ್ರ ಬಿಡಲಿಲ್ಲ. ಅವಳಿಗೆ ಹೆಚ್ಚು. ಕೆಲಸವಿಲ್ಲದ ರವಿವಾರದಂದು ಲೀಲಾದೇವಿ ಗೌರೀದೇವಿಯರು ಅವಳನ್ನು ಎಳೆದುಕೊಂಡು ಬರುತ್ತಿದ್ದರು. ಈ ವಕೀಲರುಗಳು, ಇಂದ್ರಗೇರಿ ಡಾಕ್ಟರರನ್ನಲ್ಲದೆ ಇನ್ನು ಹಲವರು ಪ್ರತಿಷ್ಠಿತ ನಾಗರಿಕರನ್ನು ಅವಳೂ ತನ್ನ ಬಲೆಗೆ ಹಾಕಿಕೊಂಡಿದ್ದಳಾದರೂ ಲೀಲಾದೇವಿ ಗೌರೀದೇವಿಯರಂತೆ ಊರಿನಲ್ಲಿ ಸೂಳೆಯರ ಹಾಗೆ ತಿರುಗುತ್ತಿರಲಿಲ್ಲ. ಸುಮಿತ್ರಾ ಏನನ್ನೆ ಮಾಡಿದರೂ ಅದರಲ್ಲೊಂದು ನಯ, ಒಂದು ಶಿಸ್ತು, ಒಂದು ಸೊಗಸು ಕಾಣುತ್ತಿತ್ತು.

## ಎಂಟು....

## ನಕುಲ ಸಹದೇವರು!

ಪಂಚಪಾಂಡವ ವಕೀಲರ ಬಳಗದಲ್ಲಿ ನಕುಲ ಸಹದೇವರಂತಿದ್ದ ಕೃಷ್ಣ ರಾಯ ಮತ್ತು ಚಿದಂಬರರಾಯರಿಬ್ಬರೂ ಆಗ ಇನ್ನೂ ಅವಿವಾಹಿತರಾಗಿದ್ದರು. ಕೃಷ್ಣರಾಯರಿಗೆ ಅವರ ಹಿರಿಯಣ್ಣಂದಿರಾದ ಮಾಮಲೇದಾರ ಶ್ರೀನಿವಾಸ ರಾಯರಿಂದ ಸಹಾಯವಾಗುತ್ತಿದ್ದರೆ ಚಿದಂಬರರಾಯರಿಗೆ ಅವರ ತಾಯಿಯ ಹಿತೈಷಿಗಳೊಬ್ಬರಿಂದ ಹಣ ಸಿಕ್ಕುತ್ತಿತ್ತು. ಅವರ ಕೊಟಡಿಗಳ ಮುಂದೆ ವಕೀಲಿಯ ಹಲಗೆಗಳಿರದಿದ್ದಲ್ಲಿ ಅವರಿಬ್ಬರೂ ಸುಶಿಕ್ಷಿತ ಠಕ್ಕರೆಂದು ಯಾರಾದರೂ ಹೇಳಬಹುದಾಗಿತ್ತು. ಅವರಿಬ್ಬರೂ ಒಳ್ಳೆಯ ಸೊಗಸುಗಾರರೆಂದು ಬೇರೆ ಹೇಳಬೇಕಾಗಿಲ್ಲ. ರಾಜಕಪೂರನ ಆವಾರಾ ವೇಷ ಧರಿಸಿ ಡಗ್ಲಸ್ ಮೀಸೆ ಬಿಟ್ಟು ಹಣೆಯ ಮೇಲೆ ಕೂದಲು ತುಂಬುವಂತೆ ಕ್ರಾಪು ಬಾಚಿಕೊಂಡು, ತುಟಿಗಳ ನಡುವೆ ಸಿಗರೇಟು ಕಚ್ಚಿ ಹಿಡಿದು ತಾಳಲಯ ಬದ್ಧವಾಗಿ ನಡೆಯುತ್ತ ಹೋಗುವ ಆ ಜೋಡಿ ಓರೆಕೋರೆ ನಗರಕ್ಕೆಲ್ಲ ಸುಪರಿಚಿತವಾದುದಾಗಿತ್ತು. ಅವರ ಮಿತ್ರರೆಲ್ಲರೂ ಕೃಷ್ಣರಾಯರನ್ನು 'ಕಲಿಯುಗದ ಕೃಷ್ಣ'ನೆಂದೂ ಚಿದಂಬರ ರಾಯರನ್ನು 'ಚೈನೀ ಚಿದಂಬರರಾಯ'ನೆಂದೂ ತಮಾಷೆಗಾಗಿ ಸಂಬೋಧಿಸು ವುದು ರೂಢಿಯಾಗಿತ್ತು.

ಮೈ ಬಣ್ಣದಲ್ಲೂ ಕೃಷ್ಣರಾಯರು ದ್ವಾಪರಯುಗದ ಕೃಷ್ಣನನ್ನೇ ಹೋಲುತ್ತಿದ್ದರು. ಚಿದಂಬರರಾಯರದು ಮಾತ್ರ ಚಿನ್ನದಂಥ ಬಣ್ಣ. ಅವರಿಬ್ಬರೂ ಒಂದೇ ಬಗೆಯ ವೇಷ ಧರಿಸಿ ಬೀದಿಯಲ್ಲಿ ಹೋಗುತ್ತಿದ್ದಾಗ ಅಣ್ಣತಮ್ಮಂದಿರಂತೆ ಕಾಣುತ್ತಿದ್ದರಾದರೂ ಮೈ ಬಣ್ಣವೊಂದೇ ಅನುಮಾನಕ್ಕೆ ಕಾರಣವಾಗುತ್ತಿತು. ಅವರಿಬ್ಬರ ಎತ್ತರ ಗಾತ್ರ ಎಲ್ಲವೂ ಸರಿಸಮವಾಗಿತ್ತು. ಒಬ್ಬರ ಪ್ರೇಯಸಿಯೇ ಇನ್ನೊಬ್ಬರ ಪ್ರೇಯಸಿಯೂ ಆಗಿದ್ದಳು. ಅಂತೂ

ಅವರಿಬ್ಬರ ದೇಹಗಳು ಬೇರೆಬೇರೆಯಾಗಿದ್ದರೂ ಜೀವ ಮಾತ್ರ ಒಂದೇ ಇದ್ದ ಹಾಗಿತ್ತು.

ಕೃಷ್ಣರಾಯರು ಮಾತ್ರ ಒಂದು ವಿಚಾರದಲ್ಲಿ ಚಿದಂಬರರಾಯರನ್ನು ಕೊಂಚ ಹಿಂದೆ ಹಾಕಿದ್ದರು. ಸಾಮಾನ್ಯವಾಗಿ ಈ ಪಂಚವಕೀಲರು, ಇಂಥವಳೇ ತಮ್ಮ ಪ್ರೇಯಸಿಯೆಂದು ಹಕ್ಕಿನಿಂದ ಹೇಳುವಂತಿರಲಿಲ್ಲ. ಎಲ್ಲರ ಸಂಬಂಧವೂ ಕ್ಷಣಿಕವಾದುದೇ ಆಗಿತ್ತು. ಆದರೂ, ಕೃಷ್ಣರಾಯರ ಮೆಚ್ಚುಗೆಯ ಪ್ರೇಯಸಿಯಾಗಿದ್ದ ಸ್ಕೂಲ್ ಮಿಸ್ಟ್ರೆಸ್ ಅಕ್ಕವ್ವ ಮಾತ್ರ ಅವರ ವಿಚಾರವಾಗಿ ಹೆಚ್ಚಿನ ಪ್ರೇಮಾದರಗಳನ್ನಿರಿಸಿಕೊಂಡಿದ್ದಳು. "ನಿನ್ನ ಪ್ರೀತಿಯ ಪ್ರಿಯಕರ ಯಾರೇ ಅಕ್ಕವ್ವಾ?" ಎಂದು ಯಾರಾದರೂ ಅವಳನ್ನು ಕೇಳಿದಾಗ ಆಕೆ ಕೊಂಚವೂ ಯೋಚಿಸದೆ ಕೃಷ್ಣರಾಯರ ಹೆಸರು ಹೇಳಿಬಿಡುತ್ತಿದ್ದಳು. ಓರೆಕೋರೆ ನಗರದ ಹಳೆಯ ರಸಿಕ ಸತೀಮಣಿಯರಲ್ಲೊಬ್ಬಳಾದ ಅಕ್ಕವ್ವನಿಗೂ ಕೃಷ್ಣರಾಯರಿಗೂ ಬೆಳೆದುಬಂದಿದ್ದ ಈ ಬಾಂಧವ್ಯವನ್ನು ಕಂಡು ಹಾಸ್ಯಮಾಡಿ ನಗುವವರಿಗೂ ಕೊರತೆಯಿರಲಿಲ್ಲ. ವಯಸ್ಸಿನಲ್ಲಿ ಅಕ್ಕವ್ವ ಕೃಷ್ಣರಾಯರಿಗೆ ತಾಯಿಯಂತಿದ್ದವಳು. ಐವತ್ತೂರರ ಅಕ್ಕವ್ವ, ಇಪ್ಪತ್ತೆಂಟರ ಕೃಷ್ಣರಾಯರ ಪ್ರಣಯ ಸಂಬಂಧ ಹಾಸ್ಯಾಸ್ಪದ ವಸ್ತುವಾಗಿದ್ದುದೂ ಸಹಜವೇ ಆಗಿತ್ತು. ಅವಳಿನ್ನೂ ಯುವತಿಯಾಗಿದ್ದಾಗ ಅವಳ ಪ್ರಿಯಕರರಾಗಿದ್ದ ಭಾಗ್ಯವಂತರನೇಕರು ಇಂದು ಗೋರಿಗಳಲ್ಲಿದ್ದರು; ಇನ್ನೂ ಅನೇಕರು ಕೈಯಲ್ಲಿ ಕೋಲು ಹಿಡಿದುಕೊಂಡು ನಡುಗುತ್ತ ನಡುಗುತ್ತ ತಿರುಗುತ್ತಿದ್ದರು. ಅವಳಿಂದ ಪ್ರಸಾರವಾಗಿ ಪಡೆದ ಭಯಂಕರ ರೋಗಗಳಿಂದ ಜರ್ಜರಿತರಾಗಿ ಅಕಾಲ ವೃದ್ಧಾಪ್ಯಕ್ಕೂ ತುತ್ತಾಗಿದ್ದವರು ಅದೆಷ್ಟು ಜನರೋ! ಅವಳ ಗಂಡನಂತೂ ಅವಳ ಪ್ರತಾಪಕ್ಕೆ ಬಲಿಯಾಗಿ ಇಪ್ಪತ್ತು ವರ್ಷಗಳ ಹಿಂದೆಯೇ ಮಸಣಕಂಡಿದ್ದ.

ಕೃಷ್ಣರಾಯರ ಬಣ್ಣವನ್ನು ಕಂಡೊಡನೆ ಎಂಥ ಕುರೂಪಿ ಸ್ತ್ರೀಯರೂ ಮೂಗು ಮುರಿಯುತ್ತಿದ್ದರು. ಅಕ್ಕವ್ವನಿಗೆ ಮಾತ್ರ ಅದರ ಬಗೆಗೆ ಎಂದೂ ಹೇಸಿಕೆಯೆನ್ನಿಸಿರಲಿಲ್ಲ, "ಬಣ್ಣ ತಗೊಂಡೇನು ಮಾಡೂದು? ಗುಣ ನೋಡಬೇಕು, ಗುಣ!" ಎಂದು ಅವಳು ಆಗಾಗ ಹೇಳುವುದು ವಾಡಿಕೆಯಾಗಿತ್ತು. ಕೃಷ್ಣರಾಯರಲ್ಲಿ ಅವಳು ಅಂಥ ಯಾವ ಗುಣವನ್ನು ಕಂಡಿದ್ದಳೋ ಅವಳೇ ಬಲ್ಲಳು. ಕೃಷ್ಣರಾಯರಾದರೂ ಅವಳಲ್ಲಿ ಯಾವ ಚಮತ್ಕಾರ ಕಂಡಿದ್ದರೋ

ಅವರೇ ಬಲ್ಲರು. ಅಂತೂ ಅವರಿಬ್ಬರ ಸ್ನೇಹವೆಂದರೆ ಕತ್ತಿ ಮತ್ತು ತಿಪ್ಪೆಗಳ ಸ್ನೇಹದಂತೆ ಪರಸ್ಪರ ಶೋಭಾಯಮಾನವಾಗಿತ್ತು. ಕೃಷ್ಣರಾಯರ ವ್ಯಸನಗಳ ವೆಚ್ಚಕ್ಕಾಗಿ ಪ್ರತಿತಿಂಗಳೂ ಹತ್ತಿಪ್ಪತ್ತು ರೂಪಾಯಿಗಳನ್ನು ಉದಾರ ಬುದ್ಧಿಯಿಂದ ಕೊಡುತ್ತಿದ್ದಳು ಅಕ್ಕವ್ವ.

ಚೈನೀ ಚಿದಂಬರರಾಯರು ಮಾತ್ರ 'ಫ್ರೀ ಲಾನ್ಸರ್.' ಅಕ್ಕವ್ವನಂಥ 'ಮೆಚ್ಚಿನ ನಚ್ಚಿನ' ಪ್ರೇಯಸಿಯರಾರೂ ಅವರಿಗೆ ಗಂಟುಬಿದ್ದಿರಲಿಲ್ಲ. ಒಂದು ದಿನ ಲೀಲಾದೇವಿಯಾದರೆ ಇನ್ನೊಂದು ದಿನ ಗೌರೀದೇವಿ, ಮತ್ತೊಂದು ದಿನ ಸುಮಿತ್ರಾದೇವಿ, ಮಗುದೊಂದು ದಿನ ಅಕ್ಕವ್ವ, ಮತ್ತೊಂದು ದಿನ ಮತ್ತೆ ಯಾವಳೊಬ್ಬ ದೇವಿ.

"ಒಮ್ಮೆ ನೋಡಿದ ಸಿನಿಮಾ ಮತ್ತೊಮ್ಮೆ ನೋಡುವದೆಂದರೇನು? ಹಾಗೇ, ಒಮ್ಮೆ ನೋಡಿದ ಹೆಣ್ಣನ್ನು ಮತ್ತೊಮ್ಮೆ ನೋಡುವದೆಂದರೆ ಬೇಜಾರು," ಎಂಬ ಅಭಿಪ್ರಾಯ ಚೈನೀ ಚಿದಂಬರರಾಯರದು.

## ಒಂಭತ್ತು.... ಚೆನ್ನಿಯನ್ನು ಕಂಡ ಬಳಿಕ

ಭಾಜೀರಾವ್ ದೇಶಪಾಂಡೆ ವಕೀಲರು ಮಾತ್ರ ಹೆಂಗಸರ ವಿಷಯದಲ್ಲಿ ಉಳಿದ ವಕೀಲರಿಗಿಂತ ಭಿನ್ನವಾಗಿದ್ದರು. ಲೀಲಾದೇವಿ ಗೌರೀದೇವಿ ಸುಮಿತ್ರಾ ದೇವಿ ಅಕ್ಕವ್ವ ಮೊದಲಾದವರು ಎಂಥ ತಂತ್ರಗಳನ್ನುಪಯೋಗಿಸಿದರೂ ಬಾಜೀರಾಯರೆದುರಿಗೆ ಅವರ ಆಟ ನಡೆಯಲಿಲ್ಲ. ಅದೊಂದು ವಿಚಾರದಲ್ಲಿ ಮಡಿವಾಳರದೂ ಅವರದೂ ಒಂದೇ ರೀತಿಯಾಗಿತ್ತು. ಬಾಜೀರಾಯರಿಗಂಟಿ ಕೊಂಡಿದ್ದ ಕೆಟ್ಟ ವ್ಯಸನವೆಂದರೆ ಕುಡಿತವೊಂದೇ. ಅದರಿಂದ ವಿಶೇಷ ತೊಂದರೆಯೂ ಉಂಟಾಗಿರಲಿಲ್ಲ. ನಾಲ್ಕು ಕಾಸು ಕೈ ಬಿಟ್ಟು ಹೋಗುತ್ತಿದ್ದಿತಷ್ಟೆ. ಇನ್ನಿತರ ವಿಚಾರಗಳಲ್ಲಿ ಅವರು ಅತ್ಯಂತ ಸುಖಿಗಳಾಗಿದ್ದರೆಂದೇ ಹೇಳಬೇಕು. ಬೇಕಾದಷ್ಟು ಆಸ್ತಿ, ಸಾಧ್ವಿಯಾದ ಹೆಂಡತಿ, ಮೇಲೆ ಗಂಡು ಮಗ. ಇನ್ನೇನು ಬೇಕು? ಅಂತೆಯೆ, ಯಾವ ಬಿನ್ನಾಣಗಿತ್ತಿಯೂ ಬಾಜೀರಾಯರ ಮನಸ್ಸನ್ನು ಸೆಳೆಯಲು ಸಮರ್ಥಳಾಗಲಿಲ್ಲ. ಮೇರಿಯ ನೆನಪು ಬಂದಾಗ ಮಾತ್ರ ಅವರಿಗೆ ವ್ಯಸನವಾಗದಿರುತ್ತಿರಲಿಲ್ಲ. ತಮ್ಮ ಹೆಂಡತಿಯ ಹೊರತಾಗಿ ಅವರು ಬಯಸಿದ್ದ ಹೆಣ್ಣೆಂದರೆ ಮೇರಿಯೊಬ್ಬಳೇ. ತನ್ನ ನೆನಪಿಗಾಗಿ ಕುಡಿತವನ್ನು ಅವರಿಗಂಟಿಸಿ ಅವರ ಕೈಬಿಟ್ಟಿದ್ದಳು ಮೇರಿ. ಮದ್ಯದ ಬಟ್ಟಲನ್ನು ಕೈಯಲ್ಲಿ ಹಿಡಿದಾಗಲೆಲ್ಲಾ ಬಾಜೀರಾಯರಿಗೆ ಮೇರಿಯ ನೆನಪಾಗುವುದು, ಬಟ್ಟಲಲ್ಲಿನ ಮದ್ಯ ಗಂಟಲಲ್ಲಿಳಿಯುತ್ತಲೂ ಆ ನೆನಪು ಮರೆತುಹೋಗುವುದು.

ಪಾನ ಪ್ರತಿಬಂಧದ ಖಟ್ಲೆಗಳಿಂದಾಗಿ ಆ ಆರು ಜನ ವಕೀಲರಿಗೂ ಅಲ್ಪ ಸ್ವಲ್ಪ ಪ್ರಾಪ್ತಿಯಾಗತೊಡಗಿತ್ತು. ಬಸಲಿಂಗನಂತೂ ತುಂಬ ಶ್ರಮವಹಿಸಿ ಖಟ್ಲೆಗಳನ್ನು ಹಿಡಿದು ತಂದುಕೊಡುತ್ತಿದ್ದ. ಆ ಖಟ್ಲೆಗಳಲ್ಲಿ ನಿರ್ದೋಷಿಗಳಾಗಿ ಮುಕ್ತರಾಗುವ ಆಸೆ ಆ ಆಪಾದಿತರಿಗೇ ಇರುತ್ತಿರಲಿಲ್ಲ. ಜೈಲುವಾಸವಾದರೂ

ತಪ್ಪಿ ಹತ್ತಿಪ್ಪತ್ತು ರೂಪಾಯಿಗಳ ದಂಡದ ಮೇಲೆ ಬಿಡುಗಡೆಯಾದರೆ ಸಾಕೆಂದು ಅವರು ಈ ವಕೀಲರುಗಳ ಹತ್ತಿರ ಬರುತ್ತಿದ್ದರು. ಈ ರೀತಿಯಾಗಿ ಆ ವಕೀಲರುಗಳಿಗೆ ಸಂಪಾದನೆಯಾಗತೊಡಗುತ್ತಲೂ ಬಸಲಿಂಗನಿಗೂ ನಿಯಮಿತವಾಗಿ ಸಂಬಳ ದೊರಕತೊಡಗಿತು. ತನ್ನ ಹೆಂಡತಿಯನ್ನು ಕರೆದುಕೊಂಡು ಬಂದು ಸಂಸಾರ ಹೂಡುವುದಾಗಿ ಆತ ತನ್ನ ಆರು ಜನ ವಕೀಲರ ಹತ್ತಿರವೂ ಹೇಳತೊಡಗಿದ. ಅವನಿಗಿನ್ನೂ ಮದುವೆಯೇ ಆಗಿಲ್ಲವೆಂದು ಭಾವಿಸಿದ್ದ ಆ ಆರು ಜನರಿಗೂ ಆಶ್ಚರ್ಯವಾಗದಿರಲಿಲ್ಲ.

"ಏನೋ ಬಸಲಿಂಗಾ, ನಿನಗೂ ಹೆಂಡತಿಯಿದಾಳೇನು ಹಾಗಾದರೆ? ಇಷ್ಟುದಿನ ಯಾರಿಗೂ ಹೇಳಲಿಲ್ಲವಲ್ಲ ಮಾರಾಯಾ!" ಎಂದರು ಮೋಜಣ್ಣವರು.

"ಹೇಳಿಯಾವರೂ ಮಾಡೂದೇನು ಅಂತ ಸುಮ್ಮನಿದ್ದಿನಿರೀ ವಕೀಲರೆ. ಇಲ್ಲಿ ಕರತಂದು ಅವಳ ಹೊಟ್ಟಿಗೆ ಹಾಕಲಿಕ್ಕಾಗದ್ದರಿಂದ ತವರುಮನೆಯೊಳಗೇ ಬಿಟ್ಟಿದ್ದಿನಿ. ನೀವೇನೋ ಕಲಿತವರು. ನಿಮಗೆ ತಕ್ಕ ಹೆಂಡರನ್ನೇ ಮಾಡಿಕೊಂಡೀರಿ. ನಾನೇನ್ರೀ....ಬಡವ!"

"ನಿನ್ನ ಹೆಂಡತೀನೂ ನಿನ್ನ ಹಾಗೇ ಇದಾಳೇನೋ ಬಸಲಿಂಗಾ?"

"ನನ್ನ ಹೆಂಡತಿ....ನನ್ನ ಹಾಗೆ? ಅವಳು ಬಂದ ಮ್ಯಾಲ ನೋಡೀರಂತೆ ಅವಳ ರೂಪಾನ! ನೋಡಿ ಬೊಟ್ಟು ಕಚ್ಚುತೀರಿ ಬೊಟ್ಟು!" ಎಂದು ಹೇಳುತ್ತಾ ಬಸಲಿಂಗ ನಗತೊಡಗಿದ.

ಮೋಜಣ್ಣವರ ಮನೆಯಲ್ಲಿ ನಡೆದ ಮಾತು ಊರು ಸೇರಬೇಕಾದರೆ ಬಹಳ ಸಮಯ ಹಿಡಿಯುತ್ತಿರಲಿಲ್ಲ. ವಕೀಲರು ತಮ್ಮ ಪ್ರೇಯಸಿಯರೆಲ್ಲರಿಗೂ ತಿಳಿಸಿದರೆ ಗೌರೀದೇವಿ ತನ್ನ ಪ್ರಿಯಕರರೆಲ್ಲರಿಗೂ ತಿಳಿಸುತ್ತಿದ್ದಳು.

"ಬಸಲಿಂಗನ ಹೆಂಡತಿ ಬಹಳ ಚೆಲುವಿಯಂತೆ," ಎಂದು ಗೌರೀದೇವಿ ಹೇಳುತ್ತಲೂ ಡಾಕ್ಟರ್ ಇಂದ್ರಗೇರಿಯವರಿಗೆ ರೋಮಾಂಚವಾದಂತಾಯಿತು.

"ನಿನಗಿಂತ ಚೆಲುವಿಯಂತೇನು?"

ಇನ್ನೊಬ್ಬ ಹೆಂಗಸು ತನಗಿಂತ ಚೆಲುವೆಯೆಂದು ಯಾವ ಹೆಣ್ಣೂ ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಇನ್ನು, ಗೌರೀದೇವಿಯಂಥ ಅಭಿಮಾನಿನಿ ಒಪ್ಪಿಕೊಳ್ಳುತ್ತಾಳೆಯೇ?

"ನಮ್ಮವರ ಮುಂದೆ ಹಾಗೆ ಹೇಳುತಿದ್ದನಂತೆ ಬಸಲಿಂಗ. ಅದರಲ್ಲಿ ಎಷ್ಟು ಖರೆ ಅದೆಯೋ ಎಷ್ಟು ಸುಳ್ಳಿದೆಯೋ...." ಎಂದಳು ಗೌರೀದೇವಿ.

"ಇರಲಿರಲಿ. ಪ್ರತ್ಯಕ್ಷ ಕಂಡಾಗ ತಾನೇ ತಿಳೀತದಲ್ಲ ಬಣ್ಣ !" ಎಂದರು ಡಾಕ್ಟರು.

ಅಂದಿನಿಂದ ಅವರೆಲ್ಲರೂ ಬಸಲಿಂಗನ ಹೆಂಡತಿಯನ್ನು ನೋಡಲು ಕುತೂಹಲದಿಂದ ಕಾಯತೊಡಗಿದರು. ಚೆನ್ನಿ ಬಂದ ಮರುದಿನವೇ ಮೋಜಣ್ಣವರು ಆತುರತೆಯಿಂದ ಕೇಳಿದರು:

"ಏನು ಬಸಲಿಂಗಾ, ನಿನ್ನ ಹೆಂಡತಿಯ ಮುಖವನ್ನೂ ನಮಗೆ ತೋರಿಸ ಬಾರದಂತ ಮಾಡಿದೀಯೇನು ?"

"ಹಾಗ್ಯಾಕೆ ಮಾಡೇನು ವಕೀಲರೆ? ನಿಮಗೆ ತೋರಿಸದೆ ಇನ್ಯಾರಿಗೆ ತೋರಿಸಲಿ? ಇಲ್ಲಿಯವರೆಗೆ ನನ್ನನ್ನ ಸಾಕಿಕೊಂಡು ಬಂದೀರಿ. ಇನ್ನುಮ್ಯಾಲ ಆವಳನ್ನೂ ಸಾಕಬೇಕಾಗುತದೆ. ಇವತ್ತು ಸಂಜೆ ಎಲ್ಲರಿಗೂ ನಿಮ್ಮ ಮನೆಯಲ್ಲಿ ಚಹಾಪಾರ್ಟಿ ಮಾಡಿಬಿಡೂಣು. ಅದರ ಖರ್ಚು ನಾ ನೋಡಿಕೊಂತೀನಿ. ಪಾರ್ಟಿಯ ಕಾಲಕ್ಕೇ ಎಲ್ಲರೂ ನನ್ನ ಹೆಂಡತೀನ್ನ ನೋಡಿದ ಹಾಗಾಗುತದೆ," ಎಂದ ಬಸಲಿಂಗ.

ಏಕಪತ್ನೀ ವ್ರತಸ್ಥರಾದ ಇಬ್ಬರು ವಕೀಲರನ್ನು ಬಿಟ್ಟು ಉಳಿದ ವಕೀಲರೂ, ಡಾಕ್ಟರರೂ, ಅವರವರ ಪ್ರೇಯಸಿಯರೂ ಅಂದು ಸಾಯಂಕಾಲ ಮೋಜಣ್ಣವರ ಮನೆಯಲ್ಲಿ ಒಟ್ಟುಗೂಡಿದರು. ಗಡಿಯಾರದಲ್ಲಿ ಆರರ ಗಂಟೆ ಬಾರಿಸುತ್ತಿದ್ದ ಹಾಗೆ ಬಸಲಿಂಗ ಮತ್ತು ಚೆನ್ನಿಯರ ಜೊತೆ ಆಗಮಿಸಿತು. ಅಂದು ಬೇಕೆಂತಲೇ ಮದುವಣಿಗನ ಹಾಗೆ ಅಲಂಕಾರ ಮಾಡಿಕೊಂಡು ಬಂದಿದ್ದ ಬಸಲಿಂಗ. ಅವನು ಈ ಮೊದಲೆಂದೂ ತೊಡದಿದ್ದ ಕಪ್ಪುಬಣ್ಣದ ಉಣ್ಣೆಯ ಕೋಟು ತೊಟ್ಟು, ತಲೆಗೆ ಜರಿಯ ರುಮ್ಮಾಲು ಸುತ್ತಿ, ಮರ್ಸರೈಜ್ಡ್ ಧೋತರ ವುಟ್ಟು, ಪಂಪ್ ಷೂ ಮೆಟ್ಟಿ ಎಡಗೈ ಬೆರಳುಗಳಲ್ಲಿ ಎರಡು ಉಂಗುರಗಳನ್ನು ಸಿಕ್ಕಿಸಿಕೊಂಡು ಸಿಂಗಾರಾಗಿದ್ದ, ಕಂಬವೊಂದಕ್ಕೆ ಬಟ್ಟೆಗಳನ್ನುಡಿಸಿದಂತೆ ಕಾಣುತ್ತಿತ್ತು ಅವನ ತೆಳ್ಳನೆಯ ದೇಹ.

ಚೆನ್ನಿ ಮಾತ್ರ ತನ್ನ ಚೆಲುವಿಕೆಯಿಂದಾಗಿ ಎಲ್ಲರ ಕಣ್ಮನಗಳನ್ನೂ ಆಕರ್ಷಿಸಿ ಕೊಂಡಳು. ಬಸಲಿಂಗನ ಪಕ್ಕದಲ್ಲಿ ನಡೆದುಬರುತ್ತಿದ್ದ ಚೆನ್ನಿ ಅವನ ಅಕ್ಕನಂತೆ

ಕಾಣಿಸುತ್ತಿದ್ದಳು. ಬಸಲಿಂಗನಿಗಿಂತ ಅರ್ಧ ಇಂಚು ಎತ್ತರವಾಗಿದ್ದ ತುಂಬಿದ ದೇಹ ಅವಳದು. ಅದು ಲೀಲಾದೇವಿಯಂಥ ಬೊಜ್ಜು ಮೈಯಲ್ಲ. ಯಾವ ತಾಪತ್ರಯವೂ ಇಲ್ಲದೆ ತನ್ನ ಮನೆಗೆಲಸಗಳನ್ನು ತಾನೇ ನೋಡಿಕೊಂಡು ಬರುವ ಹೆಣ್ಣಿನ ದೇಹ ಎಷ್ಟು ಗಾತ್ರವಾಗಿರಬೇಕೋ ಅಷ್ಟೇ ಗಾತ್ರ ಚೆನ್ನಿಯದು; ತೆಳ್ಳನೆಯ ಹೆಣ್ಣಿಗಿಂತ ತುಸು ಹೆಚ್ಚು, ಲೀಲಾದೇವಿಗಿಂತ ಎಷ್ಟೋ ಪಾಲು ಕಡಮೆ. ಅದಕ್ಕೆ ತಕ್ಕ ಹಾಗೆ ಅಗಲವಾಗಿದ್ದ ಮುಖ. ಮೋಜಣ್ಣವರ ಮನೆಯಲ್ಲಿ ನೆರೆದಿದ್ದ ಬೇರಾವ ಹೆಂಗಸಿಗೂ ಇರದಂಥ ಮುದ್ದಾದ ಮೂಗು. ಇನ್ನು ಅವಳ ಕಣ್ಣುಗಳೋ! ಒಮ್ಮೆ ಅತ್ತ ಒಮ್ಮೆ ಇತ್ತ ಹೊರಳಿದರೆ ಸಾಕು, ಮಡಿವಾಳರಂಥ ಏಕನಿಷ್ಠ ವ್ರತದವರನ್ನೂ ವಿಹ್ವಲಗೊಳಿಸುವಂತಿದ್ದುವು. ಗುಲಾಬಿಯ ಪಕಳೆಗಳನ್ನು ನೆನಪಿಗೆ ತರಬಲ್ಲ ತುಟಿಗಳು. ಹಾಲು ಜೇನು ಹರಿಸುವಂಥ ನಗು. ಗದುಗಿನ ತೋಪಿನ ತೆನೆಯ ಸೆರಗಿನ ಸೀರೆಯುಟ್ಟು ಕೆಂಬಣ್ಣದ ರೇಶಿಮೆ ಕುಪ್ಪುಸ ತೊಟ್ಟ ಅವಳ ಅಂಗಾಂಗಗಳು ಮಿಂಚಿನಂತೆ ಕಣ್ಣು ಕೋರೈಸುತ್ತಿದ್ದುವು. ಎಡಗಡೆಯ ಎದೆಯ ಮೇಲಿನ ಸೆರಗನ್ನು ತುಂಬ ಜಾಣತನದಿಂದ ಇರಿಸಿಕೊಂಡಿದ್ದಳಾದುದರಿಂದ ಅವಳ ಆ ಭಾಗದ ಸ್ತನ ಕುಪ್ಪುಸ ವನ್ನೊಡೆದು ಹೊರಗೆ ಬಂದು ಬಿಡುವಂತೆ ಕಾಣುತ್ತಿತ್ತು.

"ಬಸಲಿಂಗ ಅಂದದ್ದೇ ನಿಜ - ಇವಳು ಸುರಸುಂದರಿ. ಮನಮೋಹಿನಿ. ನೋಡಿದವರು ಬೊಟ್ಟು ಕಚ್ಚುವಂಥಾ ಹೆಣ್ಣು," ಎಂದು ಮನಸ್ಸಿನಲ್ಲಿಯೆ ಹೇಳಿಕೊಂಡರು ಮೋಜಣ್ಣವರು. ಡಾಕ್ಟರರಂತೂ ಅವಳನ್ನೇ ಎವೆಯಿಕ್ಕದೆ ದಿಟ್ಟಿಸುತ್ತಿದ್ದರು. ಅಲ್ಲಿ ಕೂಡಿದ್ದ ದೇವಿಯರ ಮುಖಗಳ ಮೇಲೆ ಕಪ್ಪುಛಾಯೆ ಪಸರಿಸಿತು. ತಾವೇ ರಂಭೆಯರೆಂದು ಬೀಗಿದ್ದ ಆ ಹೆಂಗಸರೆಲ್ಲ ನಾಚಿಕೆಯಿಂದ ತಲೆತಗ್ಗಿಸುವಂತೆ ಮಾಡಿದ್ದಳು ಬಸಲಿಂಗನ ಊರ್ವಶಿ!

ಗಂಡಸರೆಲ್ಲರ ಮನಸ್ಸಿನಲ್ಲೂ ಒಂದೇ ವಿಚಾರ:

"ಎಂಥ ರಸಿಕ ಈ ಬಸಲಿಂಗ! ಎಂಥ ದೈವಶಾಲಿ! ಅಪ್ಸರೆಯಂಥಾ ಹೆಂಡತಿ ಸಿಕ್ಕಿದಾಳಲ್ಲ ಇವನಿಗೆ! ಇವಳು ನಮಗೆಂದು ಸಿಕ್ಕಾಳು?"

ಮನೆಯಲ್ಲಿ ಅಡಿಯಿರಿಸಿದೊಡನೆ ಚೆನ್ನಿ ಅವರೆಲ್ಲರಿಗೂ ವಿನಯದಿಂದ ನಮಸ್ಕಾರ ಹೇಳಿದಳು. ಗೌರೀದೇವಿಯ ಎದೆಯಲ್ಲಿ ಮತ್ಸರದ ಹೊಗೆ ಕವಿದಿದ್ದಿತಾದರೂ ಅದನ್ನು ತೋರ್ಪಡಿಸದೆ,

"ಬಾರವ್ವಾ, ಬಾ. ನಿನ್ನ ನೋಡಬೇಕಂತ ಎಲ್ಲರೂ ಕಾದು ಕುಳಿತಿದ್ದಿವಿ," ಎಂದು ಹೇಳುತ್ತಾ ಅವಳನ್ನು ಸ್ವಾಗತಿಸಿದಳು.

ಚೆನ್ನಿ ಒಂದೆಡೆಗೆ ಕುಳಿತುಕೊಂಡು ಎಲ್ಲರ ಮೇಲೂ ಒಂದು ಬಾರಿ ದೃಷ್ಟಿಯೋಡಿಸಿ ಮೆಲುನಗೆಯೊಡನೆ ಹೇಳಿದಳು:

"ನಾನೇನ್ರೀ ಹಳ್ಳೀ ಹೆಂಗಸು. ನಿಮ್ಮ ಹಾಂಗ ಕಲಿತಾಕೆಯಲ್ಲ. ನಿಮ್ಮಂಥಾ ದೊಡ್ಡವರ ಸಂಗಡ ಮಾತಾಡೂದಕ್ಕೂ ಬರೂದಿಲ್ಲ ನನಗೆ. ಏನಾದರೂ ಹೆಚ್ಚು ಕಮ್ಮಿ ಆದರೆ ಏನೂ ತಿಳಕೋಬ್ಯಾಡಿರಿ."

"ಎಲಾ! ಎಂಥ ಬೆರಿಕಿಯಿದ್ದಾಳೀಕೆ! ಮಾತೂ ಕಲಿತಂತೆ ಕಾಣುತದೆ!" ಎಂದು ಡಾಕ್ಟರರು ತಮಗೆ ತಾವೇ ಹೇಳಿಕೊಂಡು ಮೋಜಣ್ಣವರತ್ತ ತಿರುಗಿ ಕಣ್ಣು ಮಿಟುಕಿಸಿದರು.

ಹೆಂಗಸರೆಲ್ಲರೂ ಎದ್ದು ಅಡುಗೆಯ ಮನೆಗೆ ತೆರಳಿದ ತರುವಾಯ ಬಸಲಿಂಗ ಮೋಜಣ್ಣವರನ್ನು ಕುರಿತು,

"ಯಾಕ್ರೀ ಸಾಹೇಬರೆ? ನಾ ಹೇಳಿದ್ದು ಖರೇವೋ ಸುಳ್ಳೋ?" ಎಂದ.

ಅದಕ್ಕೆ ಮೋಜಣ್ಣವರು ಉತ್ತರವೀಯುವ ಮೊದಲೇ ಕಪ್ಪು ಮೋರೆಯ ಕೃಷ್ಣರಾಯರು ಹೇಳಿದರು.

"ಶಹಬ್ಬಾಸ್ ಬಸಲಿಂಗಾ! ಇಂಥಾ ಹೆಂಡತಿಯನ್ನ ಪಡೀಲಿಕ್ಕೆ ಪೂರ್ವ ಜನ್ಮದ ಪುಣ್ಯ ಬೇಕು!" ತಮ್ಮಂಥ ಕಪ್ಪು ಮುಖದವರಿಗೆ ಇಂಥ ಹೆಣ್ಣು ಸಿಕ್ಕುವುದೆಲ್ಲಿ ಸಾಧ್ಯ! ಎಂದುಕೊಂಡಾಗ ಅವರಿಗೆ ಅಸಮಾಧಾನವೂ ಆಗದಿರಲಿಲ್ಲ.

"ಬಿಡೋ ಕೃಷ್ಣರಾವ್! ಅಷ್ಟ್ಯಾಕೆ ಮನಸಿಗೆ ಹಚ್ಚಿಕೊಳ್ಳುತೀ! ನಿನಗೂ ಇಂಥ ಕೆಂಪು ಹೆಣ್ಣನ್ನೇ ನೋಡೋಣ!" ಎಂದು ಹೇಳಿ ಹರಕಸೆಟ್ಟಿಯವರು ಗಟ್ಟಿಯಾಗಿ ನಕ್ಕರು. ಅದರೊಡನೆ ಇತರರ ನಗೆಯೂ ಸೇರಿ, ರಸ್ತೆಯ ಮೇಲೆ ಕಬ್ಬಿಣದ ಪೀಪಾಯಿ ಉರುಳುವಾಗ ಆಗುವಂಥ ಸಪ್ಪುಳಾಯಿತು.

ಒಳಗಡೆ ಅಡುಗೆಯ ಮನೆಯಲ್ಲಿ ಆ ವಕೀಲರುಗಳ ಪ್ರೇಯಸಿಯರು ಚೆನ್ನಿಯ ಅಸಂಸ್ಕೃತ ನಡೆ ನುಡಿಗಳನ್ನು ಕಂಡು ಕುಚೇಷ್ಟೆಮಾಡಿ ನಗುತ್ತಿದ್ದರು. ತಮ್ಮ ಗುಂಪಿನಲ್ಲಿ ಸೇರಿಕೊಳ್ಳಲು ಅವಳು ಅನರ್ಹಳೆಂದೇ ಆ ಸುಸಂಸ್ಕೃತ

ಹೆಣ್ಣುಗಳು ಮೌನವಾಗಿಯೆ ನಿಶ್ಚಯಿಸಿದುವು. ಇತ್ತ ಅವರ ಗಂಡಸರು ಮಾತ್ರ ತಮ್ಮ ಹೆಂಗಸರನ್ನೆಲ್ಲ ಚೆನ್ನಿಯ ಮೇಲೆ ನಿವಾಳಿಸಿ ಒಗೆಯಬಹುದೆಂದು ಯೋಚಿಸುತ್ತಿದ್ದರು. ಗಂಡಸರಿಗೆಲ್ಲ ಒಂದು ಬಗೆಯ ತೃಪ್ತಿಯಾಗಿದ್ದರೆ ಹೆಂಗಸರಿಗೆಲ್ಲ ಅಸಮಾಧಾನವಾಗಿತ್ತು. ತಮ್ಮ ಗಂಡಸರ ಹತ್ತಿರ ಸಂಬಳದ ನೌಕರನಾಗಿರುವವನ ಹೆಂಡತಿಯೊಡನೆ ಸಲುಗೆ ಸಲ್ಲದೆಂದೇ ಅವರು ಅಂದುಕೊಂಡರು. ಚಹಾಪಾನದ ಅನಂತರ ತುಸುಹೊತ್ತು ಆ ಮಾತು ಈ ಮಾತು ನಡೆದು, ನೂತನ ದಂಪತಿಗಳಂತೆ ಬಂದಿದ್ದ ಬಸಲಿಂಗ–ಚೆನ್ನಿಯರು ತಮ್ಮ ಮನೆಗೆ ಹೊರಟರು. ಬಸಲಿಂಗನ ಆ ಹಕ್ಕಿಯನ್ನು ಎಲ್ಲರಿಗಿಂತ ಮೊದಲು ತಾವೇ ಹಾರಿಸುವುದೆಂದು ಪ್ರತಿಯೊಬ್ಬರೂ ಹೇಳಿಕೊಳ್ಳುತ್ತ ವಕೀಲರೂ ಡಾಕ್ಟರರೂ ಕ್ಲಬ್ಬಿಗೆ ಹೊರಟರು. ಗೌರೀದೇವಿ ಲೀಲಾದೇವಿಯರು ಊರು ತಿರುಗುವುದಕ್ಕೆದ್ದರೆ, ಸುಮಿತ್ರಾದೇವಿ ತನ್ನ ಕಲಾಶಾಲೆಗೆ ನಡೆದಳು, ಅಕ್ಕವ್ವನ ಜೊತೆಯಲ್ಲಿ.

ಸವದತ್ತಿಯ ಊರಿನವರಿಂದ ಸೂಳೆಯೆನ್ನಿಸಿಕೊಂಡಿದ್ದ ಚೆನ್ನವ್ವನಿಗೆ ಈ ಕಲಿತ ಹೆಂಗಸರು ತನ್ನನ್ನು ಯಾವ ದೃಷ್ಟಿಯಿಂದ ನೋಡಿದರೆಂಬುದನ್ನರಿತುಕೊಳ್ಳುವುದು ಕಷ್ಟವಾಗದಿರಲಿಲ್ಲ. ಮನೆಗೆ ಹೋಗುತ್ತಾ ಹಾದಿಯಲ್ಲಿಯೆ ಅವಳೆಂದಳು :

"ನೀ ನೋಡಿದಿಯೇನು ಆ ಹೆಂಗಸರ ಬಡಿವಾರ! ಆರು ವಾರದ ಬಾಂಡು ಉಟ್ಟು, ತೋಳು ಕುತ್ತಿಗೆ ಮೊಲೆ ಕಾಣಿಸುವಂಥಾ ಸಣ್ಣ ಬ್ಲೌಜು ತೊಟ್ಟ ಆ ಚದುರಿಯರು ತಾವೇ ಸುಂದರಿಯರಂತ ತಿಳಿದಾಂಗ ಕಾಣುತದೆ. ಈ ತೋಪಿನ ಸೆರಗಿನ ಸೀರೆಯೊಳಗೆ ಚಂದ ಕಾಣುವದಕ್ಕೂ ರೂಪ ಬೇಕಾಗುತೈತಿ ರೂಪ! ನನ್ನ ನೋಡಿ ಅವರ ಹೊಟ್ಟೆಯೊಳಗೆ ಬೆಂಕಿ ಬಿದ್ದಂಗಾಗಿತ್ತು. ಅವರಿಗಿಂತಾ ನಾ ಚೆಲುವಿ ಅಂತ. ಈ ಸವದತ್ತಿಯ ಚೆನ್ನಿ ಅಂದರೇನಂತ ತಿಳಿದಾರೋ ಈ ತುಡುಗಿನ ಸೂಳೇರು!"

"ಈ ಊರಿನ ಹೆಂಗಸರೆಲ್ಲಾ ನಿನ್ನ ನೋಡಿ ಹಾಂಗೇ ಮಾಡಬಹುದು. ಗಂಡಸರಿಗಂತೂ ಹುಚ್ಚು ಹಿಡಿಸಿಬಿಡುವಿ. ಆದರೆ ಅದೆಲ್ಲಾ ನೀ ಸವದತ್ತಿಯ ಚೆನ್ನಿ ಅನ್ನೂದು ಗೊತ್ತಾಗುವತನಕ. ನಿನ್ನ ಗುಟ್ಟು ಗೊತ್ತಾತು ಅಂದರೆ ನಿನ್ನ ಯಾರೂ ಮೂಸಿನೋಡೂದಿಲ್ಲ," ಎಂದ ಬಸಲಿಂಗ.

"ಬಿಡೋ ಜೋಕುಮಾರಾ! ಇಂಥವರನ್ನ ರಗ್ಗಡ ಕಂಡೀನಿ ನಾ! ಈ

ಊರಿನ ಗಂಡಸರನ್ನ ನನ್ನ ಹಿಂದೆ ನಾಯಿಗಳ ಹಾಂಗ ತಿರುಗಲು ಹಚ್ಚದಿದ್ದರೆ ನನ್ನ ಹೆಸರು ಸವದತ್ತಿಯ ಚೆನ್ನಿ ಅಲ್ಲ."

"ಅವರೆಲ್ಲಾ ನಿನಗ ಹುಚ್ಚರಾಗಿ ತಿರುಗಹತ್ತಿದರೆ ನನ್ನ ಗತಿಯೇನೇ?"

"ನಿನಗೇನಾಗುತ್ತೈತಿ ಧಾಡಿ? ಮನಿಯೊಳಗ ಯಜಮಾನ ಆಗಿ ಇರಲ್ಲಾ ನೀ. ನಾ ಇವರನ್ನೆಲ್ಲಾ ನೋಡಿಕೊಂತೀನಿ. ಕೈಯಾಗ ರೊಕ್ಕ ಮಾಡಿಕೊಂಡು ಮೊದಲು ನಿನ್ನ ಹೊಲಾ ಮನೀ ಬಿಡಿಸಿಕೊಳ್ಳೂಣು. ಆಮ್ಯಾಲ ನಾವೇ ಇಲ್ಲಿ ಮನೆ ಕಟ್ಟಿಸಿ ಸಾವುಕಾರರಾಗೂಣು. ವಕೀಲರ ಹೆಂಡರು ಅಂತ ಎಷ್ಟು ದಿಮಾಕು ಮಾಡಿದರಂತೀ ಆ ಹೆಣ್ಣುಗಳು! ಅವೆಲ್ಲಾ ನನ್ನ ಕಾಲ ಮ್ಯಾಲ ಬಂದು ಬೀಳುವ ಹಾಂಗ ನಾ ಸಾವುಕಾರ್ತಿಯಾದಾಗಲೇ ಸಮಾಧಾನ ಆದೀತು ನನಗೆ!"

"ವಾಹವ್ವಾ! ಬಹಾಳ ಉತ್ತಮ!" ಎಂದ ಬಸಲಿಂಗ. ಎಲ್ಲರಿಂದಲೂ 'ಬಸಲಿಂಗಾ' ಎಂದು ಏಕವಚನದಿಂದ ಕರೆಸಿಕೊಳ್ಳುವ ತಾನೂ ಒಂದು ದಿನ ಬಸಲಿಂಗಪ್ಪ ಸೆಟ್ಟರೆಂದು ಕರೆಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆ ಅವನ ಮನಸ್ಸಿನಲ್ಲಿ ಮೂಡಿ ಚೆನ್ನಿಯ ಸಾನ್ನಿಧ್ಯದಲ್ಲಿ ದಿನೇ ದಿನೇ ಬೆಳೆಯತೊಡಗಿತು.

ಆದರೆ, ಯಾವುದೋ ಒಂದು ನಿರ್ಜನ ಪ್ರದೇಶದಲ್ಲಿದ್ದ ಕೊಟಡಿಯಲ್ಲಿ ಮದ್ಯದ ವ್ಯಾಪಾರ ನಡಸಿದ ಹಾಗೆ ದೇಶಪಾಂಡೆಯವರ ಚಾಳದ ಮನೆಯಲ್ಲೂ ನಡಸುವುದು ಸುಲಭವಾಗಿರಲಿಲ್ಲ. ಚಾಳದ ನಿವಾಸಿಗಳಿಗೆ ಅದರ ಸುಳಿವು ತಿಳಿಯುತ್ತಲೂ ಅವರು ರೇಗಿ ಬಸಲಿಂಗನ ವಿರುದ್ಧವಾಗಿ ಬಾಜೀರಾಯರಲ್ಲಿ ದೂರಿಕೊಂಡರು.

"ಹೌದೇನೋ ಬಸಲಿಂಗಾ, ನೀನು ಸೆರೆ ಮಾರುತ್ತೀಯಾ?" ಎಂದು ಅವರು ಪ್ರಶ್ನಿಸಿದಾಗ ಆತ ಸುಳ್ಳು ಹೇಳದೆ ಸತ್ಯವನ್ನೊಪ್ಪಿಕೊಂಡು, ಆ ವ್ಯವಹಾರದಲ್ಲಿನ ಲಾಭದ ವಿಚಾರವಾಗಿ ಅವರೆದುರಿಗೊಂದು ಭಾಷಣವನ್ನೇ ಜಡಿದು ಬಿಟ್ಟ.

"ಭಟ್ಟಿಸೆರೆಯ ವ್ಯಾಪಾರಕ್ಕಿಂತ ಮಶೀರಾ ವ್ಯಾಪಾರ ಬಹಳ ಚಲೋದು ರಾಯರೆ. ಒಂದಕ್ಕೆ ಇಪ್ಪತ್ತು ಪಟ್ಟು ಲಾಭ ಮಾಡಿಕೋಬಹುದು. ನಿಮ್ಮಂಥಾ ದುಡ್ಡಿದ್ದವರು ಇದಕ್ಕಿಳಿದರಂತೂ ಕೋಟ್ಯಾಧೀಶರಾಗಬಹುದು," ಎಂದು ಹೇಳಿ ಬಾಜೀರಾಯರಿಗೂ ಆಸೆ ಹುಟ್ಟುವಂತೆ ಮಾಡಿದ ಬಸಲಿಂಗ.

## ಹತ್ತು.... ಗದ್ದೇಹಳ್ಳಿಯ ಯಾತ್ರೆ

ಮಶೀರಾ ವ್ಯವಹಾರದಲ್ಲಿ ತೊಡಗಿದರೆ ತಾವು ಕೋಟ್ಯಾಧೀಶರಾಗಬಹುದು....

ಕರ್ನಾಟಕದ ಬಿರ್ಲಾ ಆಗಬಹುದು, ಟಾಟಾ ಆಗಬಹುದು....

ಬೆನ್ನು ಹತ್ತಿದ ಭೇತಾಳದಂತೆ ಆ ಆಸೆ ಬಾಜೀರಾಯರ ಮನಸ್ಸನ್ನು ಮುತ್ತಿಕೊಂಡಿತು.

ಉದ್ಯೋಗವೇ ಪುರುಷರ ಲಕ್ಷಣ. ತಾವಂತೂ ಈಗ ನಿರುದ್ಯೋಗಿಯೇ ಸರಿ. ಅಪ್ಪ ಗಳಿಸಿಟ್ಟ ಆಸ್ತಿಯ ಮೇಲೆ ಜೈನಿ ನಡಸುವುದು ಪೌರುಷಕ್ಕೆ ಶೋಭಿಸದ ಮಾತು. ತಾವೂ ಏನನ್ನಾದರೂ ಮಾಡಲೇಬೇಕು, ಹಣವನ್ನೂ ಸಂಪಾದಿಸಬೇಕು. ಮಶೀರಾ ವ್ಯವಹಾರದಲ್ಲಿ ಅಷ್ಟೊಂದು ಲಾಭವಿರುವಾಗ ಅದನ್ನೇ ಏಕೆ ಮಾಡಬಾರದು? ಹಣವನ್ನು ಗಳಿಸುವುದೇ ಒಂದು ಉದ್ದೇಶವಾಗಿರುವಾಗ ಯಾವ ಮಾರ್ಗವಾದರೇನಂತೆ!

ಹಾಗೆ ಯೋಚಿಸಿದ ಬಾಜೀರಾಯರು ಮತ್ತೆ ಬಸಲಿಂಗನನ್ನು ಬರಮಾಡಿಕೊಂಡು ಹೇಳಿದರು:

"ನನ್ನ ಹತ್ತರ ಈಗ ನೂರಾ ಇಪ್ಪತ್ತು ಬಾಟಲು ಮಶೀರಾ ಆದೆ. ಅದರಲ್ಲಿ ಇಪ್ಪತ್ತು ಬಾಟಲು ನನಗಾಗಿ ಇಟ್ಟುಕೊಂಡು ನೂರನ್ನು ಮಾರಬೇಕೆಂತ ವಿಚಾರ ಬಂದದೆ. ಗಿರಾಕಿ ನೋಡುತ್ತೀಯಾ?"

ಆ ಕೆಲಸಕ್ಕಾಗಿಯೆ ಕಾದಿದ್ದ ಬಸಲಿಂಗ ಉತ್ಸಾಹದಿಂದ ಹೇಳಿದ:

"ಆಗಲಿ ವಕೀಲರೆ. ಹುಡುಕುತೀನಿ."

ಇಪ್ಪತ್ತು ರೂಪಾಯಿಗಳಿಗೊಂದರಂತೆ ಬಾಜೀರಾಯರು ಕೊಂಡುಕೊಂಡಿದ್ದ ಮಶೀರಾ ಬಾಟಲುಗಳಿಗೆ ಈಗ ಮೂವತ್ತೈದು ರೂಪಾಯಿಗಳ ಬೆಲೆ

ಬಂದಿತ್ತು. ನೂರು ಬಾಟಲುಗಳಿಗೆ ಹದಿನೈದು ನೂರು ರೂಪಾಯಿ ಲಾಭ. ಒಂದೇ ಒಂದು ದಿನದಲ್ಲಿ ಅಷ್ಟು ಲಾಭ ದೊರಕಿಸುವುದೆಂಡರೆ ಅದೇನು ಸಣ್ಣ ಮಾತೇ!

"ಇಲ್ಲೇ ಕೊಂಡು ಇಲ್ಲೇ ಮಾರೂದರಿಂದ ಅಂಥಾ ಹೆಚ್ಚಿನ ಲಾಭ ಇಲ್ಲ ವಕೀಲರೇ. ಗೋವಾ ಗಡಿಗೇ ಹೋಗಿ ಅಲ್ಲಿಂದಲೇ ತಂದು ಮಾರಬೇಕು ನೋಡಿರಿ. ಒಂದಕ್ಕೆ ಇಪ್ಪತ್ತರಷ್ಟು ಲಾಭ ಬರ್ತದೆ," ಎಂದು ಸೂಚಿಸಿದ ಬಸಲಿಂಗ.

"ಅದೇನೋ ಸರಿಯಪ್ಪ. ಆದರೆ, ಅಲ್ಲಿಯತನಕ ಹೋಗಿ ಮಾಲು ತರುವವರಾದರೂ ಯಾರು?"

"ಯಾಕ್ರೀ, ನಾನಿದೀನಲ್ಲಾ ನಿಮ್ಮ ಸೇವಕ!" ಎಂದು ಕೈಕಟ್ಟಿಕೊಂಡು ನಿಂತು ಹೇಳಿದ ಬಸಲಿಂಗ. "ನೀವು ರೊಕ್ಕ ಕೊಟ್ಟರೆ ಸಾಕು. ಉಳಿದದ್ದೆಲ್ಲಾ ನಾನೇ ನೋಡಿಕೋತೀನಿ."

"ಗೋವಾ ಗಡಿಯೊಳಗೆ ಮಾಲು ಎಲ್ಲಿ ಸಿಗುತದೆ ಅನ್ನೂದು ನಿನಗೆ ಗೊತ್ತೇನು?"

"ಅದರ ಚಿಂತೀನೇ ಬಿಡಿರಿ ನೀವು. ನಾನೆಲ್ಲಾ ಮಾಡುತೀನಿ," ಎಂದು ಭರವಸೆಯಿತ್ತ ಬಸಲಿಂಗ.

ಮಶೀರಾ ಸಾಗಿಸಿ ತಂದು ಮಾರಾಟ ಮಾಡುವಂಥ, ಕೇವಲ ಕೀಳು ಜನಕ್ಕೆ ಸಲ್ಲುವ ಕೆಲಸಮಾಡಲು ಬಸಲಿಂಗ ಟೊಂಕ ಕಟ್ಟಿ ಸಿದ್ಧನಾದ ಬಳಿಕ ಕೇವಲ ಬಂಡವಲು ಪೂರೈಸುವಂಥ ಕೆಲಸಮಾಡಲು ಬಾಜೀರಾಯರಾದರೂ ಏಕೆ ಹಿಂಜರಿದಾರು?

"ನಮಗೊಂದು ಕಾರು ಕೂಡಾ ಬೇಕಾಗ್ತದೆ ವಕೀಲರೆ. ಗದ್ದೇಹಳ್ಳಿಯಿಂದ – ಅಂದರೆ ಮಾಲು ಸಿಗುವ ಊರಿನಿಂದ ಇಲ್ಲಿಯವರೆಗೆ ತರಲಿಕ್ಕೆ ನಮ್ಮದೇ ಆದ ಕಾರಿದ್ದರೇ ಒಳ್ಳೆಯದು. ಬಾಡಿಗೆಯ ಕಾರಿನವರನ್ನು ನಂಬಲಿಕ್ಕೇ ಆಗುವಂತಿಲ್ಲ."

"ಅಂದರೇನು? ನನ್ನ ಕಾರನ್ನೇ ಕೊಡು ಅಂತೀಯಾ ಈ ಕೆಲಸಕ್ಕೆ?"

"ದಿನಾಲೂ ಎಲ್ಲಿ ಬೇಕಾಗುತದೆ ವಕೀಲರೆ. ಏನೋ ಯಾವಾಗಾದರೂ ವಾರಕ್ಕೊಮ್ಮೆ ತಿಂಗಳಿಗೊಮ್ಮೆ."

ವಕೀಲರು ಸ್ವಲ್ಪ ಹೊತ್ತು ಯೋಚಿಸುತ್ತಿದ್ದು ಅನಂತರ ಹೇಳಿದರು:

"ಹಾಗಾದರೆ ಹೀಗೆ ಮಾಡು ಬಸಲಿಂಗಾ. ಮೊದಲನೇ ಸಲ ಗದ್ದೇಹಳ್ಳಿಯಿಂದ ಮಾಲು ತಂದು ಅಕ್ಕೂರಿನ ನಮ್ಮ ವಾಡೆಯಲ್ಲಿಡು. ನಾನು ಅಲ್ಲಿಗೆ ಕಾರು ತಗೊಂಡು ಬರ್ತೀನಿ. ಅದೆಲ್ಲಾ ಸುರಕ್ಷಿತ ಅನ್ನಿಸಿದರೆ ಮುಂಧೆ ಗದ್ದೇಹಳ್ಳಿಗೇ ಕಾರು ಒಯ್ಯಬಹುದು. ಮೊದಲು ಈ ನೂರು ಬಾಟಲು ಮಾರಿಬಿಡೋಣ."

ಅದೇ ದಿನ ಅವರು ತಮ್ಮ ಮನೆಯಲ್ಲಿದ್ದ ನೂರು ಸೀಸೆಗಳನ್ನು ಕಾರಿನಲ್ಲಿ ತುಂಬಿ ಬಸಲಿಂಗನ ಮನೆಗೆ ಸಾಗಿಸಿದರು. ಬಸಲಿಂಗ ನಗರದಲ್ಲೆಲ್ಲ ತಿರುಗಿ ನೂರು ಸೀಸೆ ಮಶೀರಾ ಬಂದ ವಾರ್ತೆಯನ್ನು ಕುಡುಕರಾದ ಸಿರಿವಂತರಿಗೆ ಮುಟ್ಟಿಸಿ ಬಂದ. ರಾತ್ರಿಯಾಗುವುದರೊಳಗಾಗಿ ನೂರು ಸೀಸೆಗಳೂ ಮಾರಾಟವಾದುವು. ಮೂವತ್ತೆರಡು ರೂಪಾಯಿಗಳಿಗೊಂದರಂತೆ ಮೂರುಸಾವಿರದ ಇನ್ನೂರು ರೂಪಾಯಿಗಳಷ್ಟು ಹಣ ವಕೀಲರ ಕೈಗೆ ಬಂತು. ಅವರು ಎಲ್ಲವನ್ನೂ ತಮ್ಮ ಜೇಬಿಗೇ ಸೇರಿಸದೆ ಬಸಲಿಂಗನಿಗೂ ಇನ್ನೂರು ರೂಪಾಯಿಗಳನ್ನು 'ಇನಾಮು' ಕೊಟ್ಟರು. ಅಷ್ಟು ಹಣ ಸಂಪಾದಿಸುವುದಕ್ಕಾಗಿ ಆತ ತನ್ನ ಆರುಜನ ವಕೀಲರ ಹತ್ತಿರ ನಾಲ್ಕು ತಿಂಗಳು ದುಡಿಯಬೇಕಾಗುತ್ತಿತ್ತು.

ಬಸಲಿಂಗನಿಗಾದ ಆನಂದ ಹೇಳಿಮುಗಿಯದು. ಚೆನ್ನಿಗೂ ಪರಮ ಸಂತೋಷವಾಯಿತು. ಬಸಲಿಂಗನಂತೂ ಚೆನ್ನಿಯೆಂದರೆ ಪ್ರತ್ಯಕ್ಷ ಸವದತ್ತಿಯ ಎಲ್ಲಮ್ಮನೆಂದೇ ಭಾವಿಸಿದ. ಅವಳು ಬರುತ್ತಲೂ ಅಷ್ಟು ಸುಲಭವಾಗಿ ಇನ್ನೂರು ರೂಪಾಯಿಗಳ ಲಾಭವಾಯಿತೆಂದು ಹಿಗ್ಗಿ ಅವುಗಳನ್ನು ತನ್ನ ದೇವತೆಯ ಕಾಲುಗಳ ಮುಂದಿರಿಸಿ ಸುಪ್ರೀತಳಾಗಲು ಬೇಡಿಕೊಂಡ. ಭಕ್ತನನ್ನು ಹರಸುವಂತೆ ಅವನ ತಲೆಯನ್ನು ನೇವರಿಸಿವಳು ಚೆನ್ನಿ.

ಮೊದಲೇ ಗೊತ್ತುಪಡಿಸಿದಂತೆ, ಬಾಜೀರಾಯರಿಂದ ಎರಡು ಸಾವಿರ ರೂಪಾಯಿ ಪಡೆದುಕೊಂಡು ಒಂದು ದಿನ ಬೆಳಗಿನ ರೈಲಿಗೆ ಗದ್ದೇಹಳ್ಳಿಗೆ ಪಯಣ ಬೆಳಸಿದ ಬಸಲಿಂಗ. ಲೋಂಡಾ ನಿಲ್ದಾಣದವರೆಗೆ ರೈಲು. ಅನಂತರ ಒಂದು ಟ್ಯಾಕ್ಸಿಯನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು ಗದ್ದೇಹಳ್ಳಿಯತ್ತ ಸಾಗಿದ. ದಟ್ಟವಾದ ಅಡವಿಯ ಮಧ್ಯೆ ಕಡಿದು ಮಾಡಿದ ಪುಟ್ಟ 'ಹಾದಿಯಲ್ಲಿ ಟ್ಯಾಕ್ಸಿ ಧಾವಿಸುತ್ತಿದ್ದ ಹಾಗೆ ಬಸಲಿಂಗನ ಎದೆ ಡವಡವನೆ ಹೊಡೆದು

ಕೊಳ್ಳುತ್ತಿತ್ತು. ಅರಣ್ಯದ ನಡುವೆ ಯಾರಾದರೂ ಟ್ಯಾಕ್ಸಿಯನ್ನು ತಡೆದು, ತನ್ನಲ್ಲಿದ್ದ ಹಣವನ್ನು ದೋಚಿಕೊಂಡು ಹೋದರೆ ತನ್ನ ಕಥೆಯೇ ಮುಗಿಯ ಬಹುದು, ಅನಂತರ ತಾನು ಓರೆಕೋರೆ ನಗರಕ್ಕೆ ಹಿಂತಿರುಗಿ ವಕೀಲರಿಗೆ ಮುಖ ತೋರಿಸುವಂತೆಯೇ ಇಲ್ಲ–ಎಂದು ಮೊದಲಾಗಿ ಯೋಚಿಸುತ್ತ ಆತ ಗಾಬರಿಗೊಳಗಾಗಿದ್ದ, ಆದರೆ ಅಂಥ ಅನಾಹುತವೇನೂ ನಡೆಯದೆ ಆತ ಸುಖ ರೂಪವಾಗಿ ಗದ್ದೇಹಳ್ಳಿಗೆ ತಲಪಿದ.

ಆ ಹಳ್ಳಿಗೆ ಟ್ಯಾಕ್ಸಿಯಾಗಲಿ ಕಾರು ಆಗಲಿ ಬಂದರಾಯಿತು, ಮದ್ಯದ ಗಿರಾಕಿಗಳು ಬಂದರೆಂದೇ ಅಲ್ಲಿಯ ಜನ ಭಾವಿಸಿ ಹತ್ತಿರವೇ ಸುಳಿದಾಡ ಲಾರಂಭಿಸುತ್ತಾರೆ. ಟ್ಯಾಕ್ಸಿಯವನ ಹಣ ಕೊಟ್ಟು ಅವನನ್ನು ಕಳಿಸಿ ವಿಸೂಮಾಮಾನನ್ನು ಹುಡುಕಿಕೊಂಡು ಹೊರಟ ಬಸಲಿಂಗ.

ಕಳ್ಳತನದಿಂದ ಮಶೀರಾ ಮಾರುವವರ ತಂಡಕ್ಕೆ ಅನಭಿಷಿಕ್ತ ರಾಜ ನಂತಿದ್ದವನು ವಿಸೂಮಾಮಾ. ವಿಶ್ವನಾಥ ಎಂಬುದು ಅವನ ಹೆಸರಾದರೂ ಪರಿಚಿತರೆಲ್ಲರೂ ಅವನನ್ನು 'ವಿಶೂಮಾಮಾ' ಎಂದೇ ಪ್ರೀತಿಯಿಂದ ಕರೆಯುವುದು ವಾಡಿಕೆಯಾಗಿತ್ತು. 'ವಿಶೂ' ಎಂಬುದನ್ನು ಬಿಟ್ಟು, ಇನ್ನೂ ಹೆಚ್ಚಿನ ಪ್ರೀತಿಯಿಂದಲೂ ಆತ್ಮೀಯತೆಯಿಂದಲೂ ಕೇವಲ 'ಮಾಮಾ' ಎಂದೇ ಅವನನ್ನು ಸಂಬೋಧಿಸುವವರಿಗೂ ಕೊರತೆಯಿರಲಿಲ್ಲ. ವಿಸೂಮಾಮಾನ ಅಂಥ ಆತ್ಮೀಯರ ಬಳಗದಲ್ಲಿ ಬಸಲಿಂಗನೂ ಒಬ್ಬನಾಗಿದ್ದ.

ವಿಸೂಮಾಮಾ ಒಂದು ಬಾರಿ ತಾನೇ ಮಶೀರಾ ಸೀಸೆಗಳನ್ನು ತೆಗೆದು ಕೊಂಡು ಓರೆಕೋರೆ ನಗರಕ್ಕೆ ಬಂದಿದ್ದಾಗ ಗಿರಾಕಿಯೊಬ್ಬ ದ್ರೋಹ ಬಗೆದು ಅವನನ್ನು ಪೋಲೀಸರ ಕೈಗೆ ಸಿಕ್ಕಿಸಿದ್ದ. ಆ ಸಂದರ್ಭದಲ್ಲಿ ಬಸಲಿಂಗ ಪಂಚನಾಗಿ ಬಂದುದಲ್ಲವೆ ವಿಸೂಮಾಮಾನನ್ನು ಜಾಮೀನಿನ ಮೇಲೆ ಬಿಡಿಸಿಕೊಳ್ಳು ವುವರಲ್ಲೂ ನೆರವಾಗಿ ಆ ಖಟ್ಲೆಯನ್ನು ನಡೆಸಲು ಹರಕಸೆಟ್ಟಿಯವರಿಗೊಪ್ಪಿಸಿದ್ದ. ಆ ಮಾತು ನಡೆದು ಒಂದು ವರ್ಷವಾಗಿದ್ದಿತಾದರೂ ನಗರದ ನ್ಯಾಯಮಂದಿರದಲ್ಲಿ ಇನ್ನೂ ನಡೆದೇ ಇತ್ತು ಆ ಖಟ್ಲೆ. ಆ ನಿಮಿತ್ತದಿಂದಲೇ ಬಸಲಿಂಗನಿಗೂ ವಿಸೂಮಾಮಾನಿಗೂ ಆತ್ಮೀಯತೆ ಬೆಳೆದು ಬಂದಿತ್ತು.

ಮಾಮಾನ ವ್ಯವಹಾರ ಪ್ರಚಂಡವಾದುದು. ಇಪ್ಪತ್ತು ಮಂದಿ ಸೇವಕರು ಅವನ ಕೈಕೆಳಗೆ ದುಡಿಯುತ್ತಿದ್ದರು. ಅವರಲ್ಲಿ ಕೆಲವರು ಗುಡ್ಡಗಳಲ್ಲಿನ ಕಳ್ಳ

ದಾರಿಗಳಿಂದ ಗೋವೆಯಲ್ಲಿ ಪ್ರವೇಶಿಸಿ ಅಲ್ಲಿ ಆರು ರೂಪಾಯಿಗೊಂದರಂತೆ ಸಿಕ್ಕುವ ಮಶೀರಾ ಬಾಟಲು ಕೊಂಡು, ಪ್ರತಿಯೊಬ್ಬನೂ ಹತ್ತು ಹತ್ತು ಬಾಟಲುಗಳನ್ನು ಹೊತ್ತು ಗದ್ದೇಹಳ್ಳಿಗೆ ತರುತ್ತಿದ್ದರು. ಹಳ್ಳಿಯ ಹತ್ತಿರವಿದ್ದ ದಟ್ಟವಾದ ಅಡವಿಯಲ್ಲಿ ಕೆಲವು ಗುಪ್ತ ಸ್ಥಳಗಳಲ್ಲಿ ಅವುಗಳನ್ನು ಬಚ್ಚಿಡುತ್ತಿದ್ದ ಮಾಮಾ. ಹಳ್ಳಿಯ ನಾಲ್ಕೂ ನಿಟ್ಟುಗಳಲ್ಲಿ ಕಾವಲುಗಾರರನ್ನಿರಿಸಿ, ದೂರದಿಂದ ಬರುವ ಕಾರು, ಮೋಟರು ಅಥವಾ ಜನರ ಸುಳುವು ಕಂಡು ಹಿಡಿದು ಸಿಳ್ಳುಹಾಕಿ ಎಚ್ಚರಿಕೆ ಕೊಡುವಂತೆ ಏರ್ಪಾಟುಮಾಡಿದ್ದ. ಆ ಸಿಳ್ಳು ಕೇಳಿಬಂದೊಡನೆಯೆ ಮಾಮಾ ದಕ್ಷನಾಗುತ್ತಿದ್ದ. ಅನಂತರ ಸಾವಿರ ಪೋಲೀಸರು ಬಂದು ಹಳ್ಳಿಯ ಎಲ್ಲ ಮನೆಗಳನ್ನು ಶೋಧಿಸಿದರೂ ಒಂದು ಹನಿ ಮದ್ಯವೂ ಸಿಗುತ್ತಿರಲಿಲ್ಲ.

ಮೊದಲು ಬಾರಿ, ಎಂದರೆ ಎರಡು ವರ್ಷಗಳ ಹಿಂದೆ ಮಾಮಾ ಈ ವ್ಯವಹಾರಕ್ಕಿಳಿಯುವಾಗ ಅವನಲ್ಲಿ ಸಾಕಷ್ಟು ಹಣವಿರಲಿಲ್ಲ. ಎರಡು ವರ್ಷಗಳಲ್ಲಿ ಆತ ಲಕ್ಷಾವಧಿ ಹಣ ಸಂಪಾದಿಸಿದ ಮೇಲೂ ಸಹ ಅವನ ಇರುವಿಕೆಯಲ್ಲಿ ಯಾವ ಬದಲಾವಣೆಯೂ ಉಂಟಾಗಿರಲಿಲ್ಲ. ಮೈಯಲ್ಲಿ, ಮೊದಲಿನಂಥದೇ ಒಂದು ಕೊಳಕು ಅಂಗಿ, ಮರ್ಯಾದೆ ಕಾಯಲು ಒಂದು ಲಂಗೋಟಿ, ತಲೆಗೊಂದು ಚಿಂದಿ; ಇದಿಷ್ಟೆ ಅವನ ವೇಷ. ಇಂಥ ಭಿಕಾರಿ ವೇಷದ ಮಾಮಾ ಕಳ್ಳೀಕಾಯಿನಗರ, ಲೋಂಡಾ, ಅಳ್ನಾವರ ಮೊದಲಾದ ಊರುಗಳಲ್ಲಿ ಮನೆಗಳನ್ನು ಕೊಂಡು, ಅವುಗಳನ್ನು ಚಾಳಗಳನ್ನಾಗಿ ಪರಿವರ್ತಿಸಿ ಬಾಡಿಗೆಗೆ ಕೊಟ್ಟದ್ದುದನ್ನು ಕಂಡು ಅನೇಕರು ಅಚ್ಚರಿಪಟ್ಟುಕೊಳ್ಳುತ್ತಿದ್ದರು. ಅರ್ಥಾತ್ ಅವರಿಗೆ ಮಾಮಾನ ವ್ಯವಹಾರದ ಗುಟ್ಟು ಗೊತ್ತಿರಲಿಲ್ಲ.

ಗದ್ದೇಹಳ್ಳಿ ಸುಮಾರು ನೂರು ಮನೆಗಳ ಪುಟ್ಟ ಊರು. ಅವುಗಳನ್ನು 'ಮನೆ'ಗಳೆಂದು ಕರೆಯುವುದು ಧಾರ್ಷ್ಟ್ಯದ ಮಾತು. ಗುಡಿಸಲುಗಳೆಂದರೇನೇ ಸರಿಯಾದೀತು. ಎಲ್ಲ ಜನರೂ ದಟ್ಟದರಿದ್ರರು. ಅವರೆಲ್ಲರ ಆರ್ಥಿಕ ಸ್ಥಿತಿ ಉತ್ತಮಗೊಳ್ಳಲು ಕಾರಣನಾಗಿದ್ದ ಮಾಮಾ ಎಂದರೆ ಅವರ ಪಾಲಿನ ದೇವರು. ಮಾಮಾ ಸ್ವತಃ ಮಶೀರಾ ಅಲ್ಲದೆ ಬೇರಾವ ಮದ್ಯವನ್ನೂ ಮಾರುತ್ತಿರಲಿಲ್ಲ; ಮಶೀರಾ ಮದ್ಯವಲ್ಲದೆ ಗೋವಾ ಗಡಿಯಲ್ಲಿ ಪ್ರಚಲಿತವಿರುವ 'ಫೇಣಿ' ಮತ್ತು 'ಕಾಜು'ಗಳಂಥ ಕಡಮೆ ದರ್ಜೆಯ ದೇಶೀಯ ಮದ್ಯವನ್ನು ಮಾರಿ ಹಣ ಮಾಡಿಕೊಳ್ಳಲು ಹಳ್ಳಿಯ ಇತರರಿಗೆ ಅನುಮತಿಯಿತ್ತಿದ್ದ. ಆದರಿಂದಾಗಿ

ಅವರಿಗೂ ಅಷ್ಟು ಹಣ ಸಿಕ್ಕತೊಡಗಿತ್ತು. ಮಾಮಾನಿಗೆ ಗೊತ್ತಾಗದಂತೆ ಕಳ್ಳತನದಿಂದ ಮಶೀರಾ ವ್ಯವಹಾರ ಸಾಗಿಸಿ ಹೆಚ್ಚು ಹಣ ಮಾಡಿಕೊಳ್ಳುವ ದುಸ್ಸಾಹಸಕ್ಕೆ ಮಾತ್ರ ಯಾರೂ ತೊಡಗಲಿಲ್ಲ. ಮಾಮಾನಿಗೆ ಪೋಲೀಸರ ಬೆಂಬಲವಿದೆಯೆಂಬ ಭಾವನೆಯೇ ಅವರನ್ನು ಆ ಸಾಹಸದಿಂದ ತಡೆಹಿಡಿದಿದ್ದುದು. ತನ್ನನ್ನು ಹಿಡಿಯುವವರೇ ಈ ಜಗತ್ತಿನಲ್ಲಿಲ್ಲವೆಂದು ಮಾಮಾ ಮತ್ತೆಮತ್ತೆ ಜಂಬ ಕೊಚ್ಚುವುದಿತ್ತು. ತನಗೆ ದ್ರೋಹ ಬಗೆಯಲೆತ್ನಿಸುವ ಜನರನ್ನೇ ಜೈಲಿಗೆ ಕಳಿಸುವ 'ತಾಕತ್ತು' ತನ್ನಲ್ಲಿರುವುದಾಗಿ ಆತ ಮತ್ತೆ ಮತ್ತೆ ಹೇಳುವುದಿತ್ತು. ಅಂಥ ಪ್ರಚಂಡ ಆಸಾಮಿಗೆದುರಾಗಿ ನಿಲ್ಲುವ ಎದೆಗಾರಿಕೆ ಯಾದರೂ ಎಲ್ಲಿಂದ ಬರಬೇಕು ಆ ಬಡಜನಕ್ಕೆ?

ಓರೆಕೋರೆ ನಗರದಲ್ಲಿ ಮಾತ್ರವಲ್ಲ, ಅಳ್ನಾವರ, ಲೋಂಡಾ, ಮಿರಜ, ಕಳ್ಳೀಕಾಯಿ ನಗರಗಳಲ್ಲೂ ಮಾಮಾನ ಗಿರಾಕಿಗಳಿದ್ದರೆಂದರೆ ಅವನ ಸಂಘಟನಾ ಚಾತುರ್ಯದ ಕಲ್ಪನೆ ಬರಬಹುದಾಗಿದೆ. ಆ ಗಿರಾಕಿಗಳು ಕಾರುಗಳಲ್ಲೋ ಟ್ಯಾಕ್ಸಿಗಳಲ್ಲೋ ಬಂದು ಮಾಮಾನಿಗೆ ಸುದ್ದಿ ಕಳಿಸುತ್ತಲೂ ಆತ ಅವರನ್ನು ಗುಡ್ಡದಲ್ಲಿನ ಒಂದು ಸ್ಥಳಕ್ಕೆ ಕರೆದೊಯ್ದು, ಅವರಿಗೆ ಬೇಕಿದ್ದ ಮಶೀರಾ ಮದ್ಯದ ಹಣ ಪಡೆದು ತನ್ನ ನಂಬುಗೆಯ ಮನುಷ್ಯನೊಬ್ಬನ ಕೈಗೆ ಅದನ್ನೊಪ್ಪಿಸಿದ ತರುವಾಯ ಗಿರಾಕಿಗಳನ್ನು, ಸೀಸೆಗಳನ್ನು ಬಚ್ಚಿಟ್ಟ ಜಾಗದ ಹತ್ತಿರ ಕರೆದೊಯ್ಯುವನು. ಆ ಜಾಗ ಅವರಿಗೆ ಕಾಣಿಸದಂಥ ಕಡೆಗೆ ಅವರನ್ನು ಕೂಡ್ರಿಸಿ, ಅವರಿಗೆ ಕೊಡಬೇಕಾದ ಸೀಸೆಗಳನ್ನು ಒಂದು ಗಿಡದ ಬುಡದಲ್ಲಿ ತಂದಿರಿಸುವಂತೆ ತನ್ನ ಆಳುಗಳಿಗೆ ಹೇಳುವನು. ಗಿರಾಕಿಗಳು ಅವುಗಳನ್ನು ಸಾಗಿಸಿಕೊಂಡು ಹೊರಟುಹೋಗುವರು.

ಹತ್ತು ರೂಪಾಯಿಗೊಂದು ಸೀಸೆಯಂತೆ ಮಾರಾಟಮಾಡಿದರೂ ಅವನಿಗೆ ನೂರು ಸೀಸೆಗಳಿಗೆ ನಾಲ್ಕುನೂರು ರೂಪಾಯಿಗಳ ಲಾಭ ಬರುತ್ತಿತ್ತು. ಪ್ರತಿ ದಿನವೂ ನೂರು ಸೀಸೆಗಳಷ್ಟು ಮಾಲು ಮಾರಾಟವಾಗುತ್ತಲೂ ಇತ್ತು. ತನ್ನ ವ್ಯವಹಾರ ಬೆಳೆಯುತ್ತ ಬಂದ ಹಾಗೆ ಆತ ಸುತ್ತಲಿನ ಪೋಲೀಸರ ಸ್ನೇಹ ಸಂಪಾದಿಸಿ ಆಗಾಗ ಅವರಿಗೂ ಹತ್ತಿಪ್ಪತ್ತು ರೂಪಾಯಿಗಳನ್ನೂ ಒಂದೆರಡು ಸೀಸೆ ಮಶೀರಾವನ್ನೂ ಕೊಡುವ ಪರಿಪಾಠವಿಟ್ಟುಕೊಂಡಿದ್ದ. ಸಂಬಳ ಸಾಲದೆ ಒದ್ದಾಡುತ್ತಿದ್ದ ಆ ಪೋಲೀಸರು – ಅರ್ಥಾತ್ – ಧಾನವೀರ ಮಾಮಾನ

ಬಗೆಗೆ ಕೃತಜ್ಞರಾಗಿರುತ್ತಿದ್ದರು. ಕುಡುಕರಾದ ಮೇಲಾಧಿಕಾರಿಗಳಿಗೆ ಮದ್ಯ ಪೂರೈಸಬೇಕಾಗಿ ಬಂದಾಗಲೆಲ್ಲ ಅವರು ಮಾಮಾನಿಗೇ ಮೊರೆಹೋಗಬೇಕಾಗುತ್ತಿತ್ತು. ಒಂದು ಸೀಸೆ ಕೇಳಿದರೆ ಎರಡನ್ನು ಕೊಟ್ಟು ಕಳಿಸುವ ಉದಾರ ಬುದ್ಧಿ ಮಾಮಾನದು. ಪೋಲೀಸರೂ ಮಾನವಪ್ರಾಣಿಗಳೇ ಅಲ್ಲವೆ? ಅಂತೆಯೇ ಅವರು ಮಾಮಾನಿಗೆ ಎರಡು ಬಗೆಯಲಿಲ್ಲ. ಅವನು ನಗರಕ್ಕೆ ಬಂದಾಗಲೆಲ್ಲ ಅವರು ಅವನನ್ನು ಗೌರವದಿಂದ ಕಾಣುವದು. ತಮ್ಮ ಅಧಿಕಾರಿಗಳಿಗೂ ತೋರಿಸದ ಭಕ್ತಿ ವಿಶ್ವಾಸಗಳನ್ನು ಅವನಿಗೆ ತೋರಿಸುವರು. ತಮ್ಮ ಅಧಿಕಾರಕ್ಷೇತ್ರದ ಪೋಲೀಸರೇ ಅಲ್ಲದೆ ಪಾನಪ್ರತಿಬಂಧ ಪಡೆಯವರಾಗಲಿ, ಸಿ. ಐ. ಡಿ. ಗಳಾಗಲಿ ಗದ್ದೇಹಳ್ಳಿಯತ್ತ ಹೊರಡುವ ಸೂಚನೆ ಕಂಡುಬಂದಾಗ ಮಾಮಾನ ಭಕ್ತರಾದ ಆ ಪ್ರಾಮಾಣಿಕ ಪೋಲೀಸರು ತಕ್ಷಣ ಅವನಿಗೆ ಸುದ್ದಿ ತಿಳಿಸುವರು. ಬೇರೆ ಕಡೆಯಿಂದ ಬಂದ ಪೋಲೀಸ್ ಸಿಬ್ಬಂದಿಯವರು ಅಪರಿಚಿತವಾದ ಗುಡ್ಡಗಾಡು ಸೀಮೆಯಲ್ಲಿ ಸಂಚರಿಸಬೇಕಾದರೆ ಸ್ಥಳೀಯ ಪೋಲೀಸರ ನೆರವು ಅಗತ್ಯವಷ್ಟೆ? ಮದ್ಯದ ಕಳ್ಳವ್ಯಾಪಾರವನ್ನು ಮಟ್ಟ ಹಾಕುವ ಸದುದ್ದೇಶದಿಂದ ಬಂದ ವಿಶೇಷ ಪೋಲೀಸ್ ಪಡೆಗೆ ಸ್ಥಳೀಯ ಪೋಲೀಸರಿಂದ ದೊರಕುತ್ತಿದ್ದ ಸಹಾಯವೆಂದರೆ ಇಂಥದು. ಅವರು ಸುದ್ದಿ ತಿಳಿಸಿದೊಡನೆಯೇ ಗದ್ದೇಹಳ್ಳಿಯ ಜನರೆಲ್ಲ ತಮ್ಮ ಗುಡಿಸಲುಗಳಲ್ಲೋ ಹೊಲಗಳಲ್ಲೋ ಇದ್ದು ಬಿಡುವರು. ಪೋಲೀಸ್ ಪಡೆ ಬಂದು ಎಲ್ಲ ಮನೆಗಳನ್ನು ಹೊಕ್ಕು ಶೋಧಿಸುವುದು, ಹೊಲಗದ್ದೆಗಳಿಗೂ ಹೋಗಿ ಪರೀಕ್ಷಿಸುವುದು. ಅರಣ್ಯದ ಮಧ್ಯೆ ಬಚ್ಚಿಟ್ಟ ಮದ್ಯವನ್ನು ಪೋಲೀಸರು ಕಂಡುಹಿಡಿಯುವುದಾದರೂ ಹೇಗೆ ಸಾಧ್ಯ?

ಅವರು ನಿರಾಶರಾಗಿ ಹಿಂತಿರುಗುತ್ತಿದ್ದಾಗ ಮಾಮಾ ಮತ್ತೆ ಕಾಣಿಸಿಕೊಂಡು, ಚಹ ಕಾಫಿ ಬಿಸ್ಕತ್ತು ತರಿಸಿಕೊಟ್ಟು ಆದರಾತಿಥ್ಯ ನಡಸುವನು.

“ಏನಯ್ಯಾ, ಇಲ್ಲಿ ಸೆರೆ ಮಾರುವವರು ಯಾರ‍್ಯಾರಿದಾರೆ, ಹೇಳು,” ಎಂದು ಅಧಿಕಾರಿಗಳು ಕೇಳುತ್ತಲೂ ಮಾಮಾ ದೊಡ್ಡ ಸಭ್ಯಗೃಹಸ್ಥನಂತೆ ನಟಿಸುತ್ತಾ ಹೇಳುವನು.

“ರಾವ್‌ಸಾಬ್! ನಮ್ಮೂರಾಗಿನ ಒಬ್ಬಿಬ್ಬರು ಪಟಿಂಗರು ಮೊದಲು ಈ ವ್ಯಾಪಾರ ಮಾಡುತಿದ್ದದ್ದು ಖರೇ. ಅವರನ್ನೆಲ್ಲಾ ಬಯ್ದು ಬುದ್ಧಿ ಹೇಳಿ

ನಾನೀಗ ಅದನ್ನ ಪೂರಾ ನಿಲ್ಲಿಸಿಬಿಟ್ಟೇನಿ. ನಮ್ಮಂಥಾ ಬಡವರಿಗೆ ಕಲ್ಯಾಣ ಆಗಬೇಕಂತಲೇ ಅಲ್ಲೇನ್ರೀ ಮುರಾರಜಿಭಾಯಿಯವರು ಕಾಯ್ದೆ ಮಾಡಿದ್ದು? ಅಂದಮ್ಯಾಲ ನಾವು ಆ ಕಾಯ್ದೇದ ವಿರುದ್ಧ ಹ್ಯಾಂಗ ಹೋಗಲಿಕ್ಕೆ ಬಂದೀತು?"

"ಬರೋಬ್ಬರಿ. ಬರೋಬ್ಬರಿ. ನಿಮ್ಮಂಥವರು ನಮಗೆ ಸುದ್ದಿ ತಿಳಿಸಿ ಸಹಾಯ ಮಾಡಿದರೆ ಕಳ್ಳವ್ಯಾಪಾರ ಮಟ್ಟಹಾಕಲು ಸುಲಭವಾಗ್ತದೆ. ಗೋವಾ ಗಡಿಯಿಂದ ಸೆರೆ ಹೊತ್ತು ತರುವವರು ನಿಮ್ಮೂರಿನ ಮ್ಯಾಲೇ ಹಾದು ಹೋಗುತ್ತಾರೆ. ಹೌದಲ್ಲೋ?"

"ಛೆ. ಛೆ. ಇಲ್ಲಿ ಅಂಥನರ‍್ಯಾರೂ ಹಾಯುವದಿಲ್ಲ ರಾವ್ ಸಾಬ್! ತುಡುಗಿನಿಂದ ಸೆರೆ ಒಯ್ಯುವವರು ಗುಡ್ಡದಾಗ ಹಾದು ಹೋಗುತಾರೆ. ನಮ್ಮೂರಿಗಂತೂ ಮೋಟರುರಸ್ತೆ ಅದೆ. ಇಂಥಲ್ಲಿ ಅವರ‍್ಯಾಕೆ ಹಾದಾರು? ಖಾನಾಪುರದ ಕಡೆಯಿಂದ ಮಲಪ್ರಭಾದ ದಂಡೆಯ ಗುಂಟ ಹೋಗುತಾರಂತ ಕೇಳೀನಿ," ಎಂದು ಹೇಳಿ, ಪೋಲೀಸು ಅಧಿಕಾರಿಗಳ ಮೇಲೆ ಪ್ರಭಾವ ಬೀರುವ ಉದ್ದೇಶದಿಂದಲೇ ಅಂದು ತನ್ನ ತಲೆಯ ಮೇಲಿಟ್ಟುಕೊಂಡಿದ್ದ ಗಾಂಧೀ ಟೋಪಿಯನ್ನು ಸರಿಮಾಡಿಕೊಳ್ಳುವನು ಮಾಮಾ.

ಪಾಪ! ಆ ಅಧಿಕಾರಿಗಳಾದರೂ ಏನು ಮಾಡಬೇಕು? ಭಾರತವು ಬ್ರಿಟಿಷರ ಅಧೀನದಲ್ಲಿದ್ದಾಗ ಗಾಂಧೀಟೋಪಿಯನ್ನು ಕಾಲ ಕೆಳಗೆ ಹಾಕಿ ತುಳಿದಿದ್ದ ಪೋಲೀಸ್ ಅಧಿಕಾರಿಗಳೇ ಇಂದು ಅದೇ ಟೋಪಿಗೆ ನಮಸ್ಕಾರ ಹಾಕುವ ಪ್ರಸಂಗ ಬಂದಿತ್ತು. ಅಂಥ ಪೂಜ್ಯ ಟೋಪಿ ಧರಿಸಿದ ಮಾಮಾನ ಬಗೆಗೆ ಅವರು ಸಂಶಯ ತಳೆಯುವುದಾದರೂ ಹೇಗೆ ಸಾಧ್ಯ? ಸರಿ. ಗದ್ದೇ ಹಳ್ಳಿಯಲ್ಲಿ ಒಂದು ಹನಿ ಮದ್ಯವೂ ಸಿಕ್ಕಲಿಲ್ಲವೆಂದು ವರದಿಯೊಪ್ಪಿಸುವುದಲ್ಲದೆ ಪಾನಪ್ರತಿಬಂಧ ಕಾರ್ಯದಲ್ಲಿ ನೆರವು ನೀಡುವುದಕ್ಕೂ ಅಲ್ಲಿಯ ಜನರು ಮಾಮಾನ ನೇತೃತ್ವದಲ್ಲಿ ಸಿದ್ಧರಾಗಿರುವರೆಂದು ಶಿಫಾರಸು ಮಾಡುತ್ತಿದ್ದರು ಆ ಅಧಿಕಾರಿಗಳು. ಆ ವಿಷಯ ಪತ್ರಿಕೆಗಳಲ್ಲಿ ಪ್ರಕಟವಾಗಿ ಮಾಮಾನ ಹೆಸರು ಎಲ್ಲ ಕಡೆಗಳಲ್ಲೂ ಪ್ರಸಿದ್ಧವಾಯಿತು.

ಇತ್ತ ಮಾಮಾನ ವ್ಯವಹಾರ ಅಡೆತಡೆಯಿಲ್ಲದೆ ನಡೆದೇ ಇತ್ತು. ಬಸಲಿಂಗ ನಂಥ ಗಿರಾಕಿಗಳು ನಿತ್ಯವೂ ಬಂದು ಮಶೀರಾ ಕೊಂಡು ನಗರಗಳಿಗೆ ಸಾಗಿ ಸುತ್ತಲೇ ಇದ್ದರು.

ಬಸಲಿಂಗನ ಆಗಮನದ ವಾರ್ತೆ ತಿಳಿಯುತ್ತಲೂ ವಿಸೂಮಾಮಾ ತಾನೇ ಧಾವಿಸಿ ಬಂದು, ಅತ್ಯಂತ ಪ್ರೀತಿಯಿಂದ ಅವನನ್ನು ಮನೆಗೆ ಕರೆದೊಯ್ದು ಫಲಾಹಾರವನ್ನಿತ್ತು ಸತ್ಕರಿಸಿ,

"ಏನು ಬಸಲಿಂಗಪ್ಪಾ, ಅಪರೂಪವಾಗಿ ಬಂದಿಯಲ್ಲ. ಏನು ಸುದ್ದಿ? ಆ ಖಟ್ಲಿಯನ್ನ ಇನ್ನೊಂದು ಆರು ತಿಂಗಳು ಹಾಗೇ ದಾಟಿಸು ಮಾರಾಯಾ. ಅಷ್ಟರಲ್ಲಿ ಸರಕಾರ ಈ ಕಾಯದೆಯನ್ನೇ ಬದಲಿಸಿದರೂ ಬದಲಿಸಬಹುದು. ನನ್ನ ಮ್ಯಾಲ ಈಗ ವಾರಂಟು ಗೀರಂಟು ಹೊರಟಿಲ್ಲವಷ್ಟೆ?" ಎಂದು ಕೇಳಿದ.

"ನಿನ್ನ ಮ್ಯಾಲ ವಾರಂಟು ಹೊರಡೂದಾದರೆ ನಾವ್ಯಾಕೆ ಬದುಕಿರಬೇಕು ಮಾಮಾ? ಆರು ತಿಂಗಳು ಯಾಕೆ, ಆರು ವರ್ಷ ಆದರೂ ಖಟ್ಲಿ ಮುಂದೆ ಹಾಕಿಸೂಣು. ನೀನೇನು ಹೆದರಬ್ಯಾಡ. ನಮ್ಮ ವಕೀಲರೇನೂ ಅಳು ಬುರುಕರಲ್ಲ. ಅದೆಲ್ಲಾ ಇರಲಿ. ನಾ ಬಂದಿರೂದು ಅದಕ್ಕಲ್ಲ. ನಮಗೂ ಸ್ವಲ್ಪ ತೀರ್ಥ ಬೇಕು. ನಮ್ಮ ನಗರದಲ್ಲೇನೋ ಸಿಗ್ತದೆ ಬೇಕಷ್ಟು. ಆದರೆ ಪೋಲೀಸರ ಕಾಟ ಬಹಳ. ಅದಕ್ಕೇ ನಿನ್ನ ಹತ್ತರ ಕೊಂಡು ಒಯ್ಯಬೇಕಂತ ಬಂದೀನಿ. ಈಗ ನನಗೆ ಇನ್ನೂರು ಬಾಟ್ಲಿ ಮಶೀರಾ ಬೇಕು."

"ಮಾರಾಯ್ತಾ, ನಾನೆಲ್ಲಿಂದಾ ಕೊಡಲಿ? ನಮ್ಮೂರವರು ಈಗ ಆ ಕೆಲಸ ಬಿಟ್ಟು ಬಿಟ್ಟಾರ."

"ಸಾಕು ನಿನ್ನ ಲೆಕ್ಚರು ಮಾಮಾ. ನನ್ನ ಮುಂದೂ ನಿನ್ನ ವ್ಯವಹಾರದ ಚಲಾಕೇನು? ನಾನೇನು ನಿನಗೆ ಹೊರಗಿನವನೇ? ಇನ್ನೂರು ಬಾಟಲಿಗೆ ಎಲ್ಲಾ ರೋಖು ರಕಮು. ಪೈಗೆ ಪೈ ಸರಿಯಾಗುವ ಹಾಂಗ ಕೊಟ್ಟು ಹೋಗ್ತೀನಿ. ಇಂದೇ ಎಲ್ಲಾ ವ್ಯವಸ್ಥಾ ಆಗಬೇಕು. ಬಾಟಲಿಗಳನ್ನ ಇಲ್ಲಿಂದ ಹತ್ತುಮೈಲು ಒಯ್ಯಲು ನಾಲ್ಕಾರು ಆಳುಗಳನ್ನು ಕೊಡು. ನೀನು ಹೇಳಿದಷ್ಟು ಕೂಲಿಯನ್ನು ಅವರಿಗೆ ಇಲ್ಲೇ ಕೊಟ್ಟುಬಿಡ್ತೀನಿ," ಎಂದವನೇ ಬಸಲಿಂಗ ಎರಡುಸಾವಿರ ರೂಪಾಯಿಗಳ ನೋಟುಗಳನ್ನು ಎಣಿಸತೊಡಗಿದ.

ಇನ್ನೂರು ಸೀಸೆ ಮಶೀರಾ ಸಿಕ್ಕಲು ವಿಲಂಬವಾಗಲಿಲ್ಲ. ಅವುಗಳೊಡನೆ ಬಸಲಿಂಗ ಅದೇ ದಿನ ಅಕ್ಕೂರಿಗೆ ಪಯಣ ಬೆಳಸಿ ಮಬ್ಬುಗತ್ತಲಾಗುವ ವೇಳೆಗೆ

ದೇಶಪಾಂಡೆಯವರ ಮನೆ ಸೇರಿಕೊಂಡ. ಅಂಗಳದಲ್ಲಿ ತಂಬಾಕು ಸೇದುತ್ತ ಕುಳಿತಿದ್ದ ಒಬ್ಬ ಆಳು ಬಸಲಿಂಗನನ್ನು ಗುರುತಿಸಿ,

"ನಮುಸ್ಕಾರರೀ ಕಾರಕೂನರೇ. ಏನು ಅಪರೂಪ ಬಂದಿರಲ್ಲ?" ಎಂದು ಹೇಳುತ್ತಾ ದೇಶಾವರಿ ನಗೆ ಬೀರಿದ.

ದೇಶಪಾಂಡೆಯವರ ಹೊಲಮನೆಗಳ ವ್ಯವಸ್ಥೆ ನೋಡಿಕೊಳ್ಳಲು ಸೇವಕ ರಾಗಿ ಅಲ್ಲಿಯೆ ನೆಲಸಿದ್ದ ಗೋವಿಂದರಾಯರೂ ಬಂದು ಬಸಲಿಂಗನನ್ನು ಸ್ವಾಗತಿಸಿದರು.

"ನಾಳೆ ಧಣೇರು ಬರ್ತಾರೆ. ಅದಕ್ಕೇ ನಾ ಸ್ವಲ್ಪ ಮೊದಲೇ ಬಂದಿನಿ."

"ಚಲೋ ಆತಪ್ಪ, ಚಲೋ ಆತು. ಬರ್ರಿ, ಒಳಕ್ಕೆ ಬರ್ರಿ. ಇದೇನ್ರೀ ಇಷ್ಟೊಂದು ಆಳುಗಳು? ಏನು ಸಾಮಾನು? ಧಣಿಯರು ಇಲ್ಲಿ ಒಂದೆರಡು ವಾರ ಇರುವವರಿದಾರೋ ಏನು?"

"ಇಲ್ಲ. ನಾಳೇ ನಾವಿಬ್ಬರೂ ಹೋಗುತೀವಿ," ಎಂದು ಹೇಳಿ ಬಸಲಿಂಗ ಸೀಸೆಗಳನ್ನೊಳಗೊಂಡ ಬುಟ್ಟಿಗಳನ್ನು ಅಟ್ಟದ ಮೇಲಿರಿಸಿದ.

ಪುರಾತನ ಕಾಲದ ದೊಡ್ಡವಾಡೆ (ಮನೆ) ಅದು. ಎಲ್ಲೆಲ್ಲೂ ಪುಂಡರು ಅಲೆಯುತ್ತಿದ್ದ ಕಾಲದಲ್ಲಿ ತಮ್ಮ ಜೀವಿತಗಳು ಸುರಕ್ಷಿತವಾಗಿರಲೆಂದು ಬಾಜೀ ರಾಯರ ಮುತ್ತಾತಂದಿರು ಕಟ್ಟಿಸಿದ್ದುದು. ಆ ವಾಡೆಯಲ್ಲಿ ಹತ್ತು ಸಾವಿರ ಜನರನ್ನು ಸೇರಿಸಿದರೂ ಗದ್ದಲವಾಗುವಂತಿರಲಿಲ್ಲ. ಅಷ್ಟು ವಿಶಾಲವೂ ಭವ್ಯವೂ ಭದ್ರವೂ ಆದ ಕಟ್ಟಡವದು. ಅಂಥ ಕಟ್ಟಡದಲ್ಲಿ ಮಶೀರಾ ಸೀಸೆಗಳನ್ನು ಬಚ್ಚಿಡುವುದು ಅಂಥ ಕಷ್ಟದ ವಿಚಾರವೇನೂ ಆಗಿರಲಿಲ್ಲ. ತನ್ನ ಧಣಿಯರ ಆಜ್ಞೆಯಿಂದಲೇ ಬಸಲಿಂಗ ಈ ಕೆಲಸಕ್ಕೆ ನಿಂತ ಸಂಗತಿ ತಿಳಿದಾಗ ಗೋವಿಂದ ರಾಯರಿಗೆ ವಿಪರೀತ ದುಃಖವಾಯಿತು.

"ಗೋವಿಂದಾ! ದೇವಾ! ಎಂಥಾ ಕಾಲ ಬಂತು! ಹಾಲು ಜೇನು ತುಂಬಿ ಹರಿದ ವಾಡೆಯಲ್ಲಿ ಸೆರೆ! ಪರಮಾತ್ಮ, ನನ್ನ ಕಣ್ಣು ಮುಚ್ಚು ಇನ್ನು!" ಎಂದು ಮನದಲ್ಲಿಯೇ ಅಂದುಕೊಳ್ಳುತ್ತ ಅವರು ಬಸಲಿಂಗನ ಊಟದ ವ್ಯವಸ್ಥೆಮಾಡಲು ಹೋದರು.

ನಗರದಲ್ಲಿ ತುಟ್ಟಿಯ ಧಾರಣೆಯ ಸೀಸೆಗಳನ್ನು ಮಾರಿದಾಗ ಒಂದು ಸೀಸೆಗೆ ಎರಡು ರೂಪಾಯಿಗಳಂತೆ ತನಗೆ ಹಣ ಕೊಟ್ಟಿದ್ದ ವಕೀಲರು ಈ ಸೀಸೆ

ಗಳಿಗಾಗಿ ಐದು ರೂಪಾಯಿಗಳಂತೆ ಕೊಟ್ಟರೂ ಕೊಟ್ಟಾರು, ಅವರೂ ದೊಡ್ಡ ಮನಸ್ಸಿನವರು, ಚೆನ್ನಿಯ ಕಾಲಗುಣವೂ ದೊಡ್ಡದು, ತನ್ನ ಭಾಗ್ಯದ ಲಕ್ಷ್ಮಿ ಆಕೆ – ಎಂದು ಏನೇನನ್ನೋ ಹೇಳಿಕೊಳ್ಳುತ್ತಾ ಬಸಲಿಂಗ ಹೊಟ್ಟೆ ತುಂಬಾ ಊಟ ಹೊಡೆದು ಮಲಗಿಕೊಂಡ.

ಬಹಳ ಹೊತ್ತು ಕಳೆದರೂ ಅವನಿಗೆ ನಿದ್ದೆ ಬರಲಿಲ್ಲ. ಅವನ ಕಣ್ಣು ಗಳಿಮರಿಗೆ ರೂಪಾಯಿಗಳೇ ಕುಣಿಯುತ್ತಿದ್ದುವು.

## ಹನ್ನೊಂದು.... ಮಶೀರಾ ವ್ಯಾಪಾರ

ಮಶೀರಾ ಮದ್ಯದ ಇನ್ನೂರು ಸೀಸೆಗಳನ್ನು ಕೊಂಡು ತರಲು ಬಸಲಿಂಗನ ಕೈಯಲ್ಲಿ ಎರಡು ಸಾವಿರ ರೂಪಾಯಿಗಳನ್ನು ಕೊಟ್ಟು ಕಳಿಸಿದ ಬಳಿಕ, ಕೆಲ ಹೊತ್ತಿನ ಮೇಲೆ ಬಾಜೀರಾಯರ ಎದೆ ಅದೇಕೋ ಬಡಿದುಕೊಳ್ಳತೊಡಗಿತು.

ಬಸಲಿಂಗನೇನೋ ಹೊರಟುಹೋದ. ಗದ್ದೇಹಳ್ಳಿಯಲ್ಲಿ ಮದ್ಯವನ್ನು ಕೊಂಡು ಅದನ್ನಾತ ಅಕ್ಕೂರಿನ ತಮ್ಮ ವಾಡೆಯಲ್ಲಿ ತಂದಿರಿಸಬಹುದು. ಆತ ಬಹಳ ಬುದ್ಧಿವಂತ. ನಡುವೆ ಯಾರ ಕೈಗೂ ಸಿಕ್ಕಿಬೀಳದೆ ಆ ಕೆಲಸ ಸಾಧಿಸ ಬಲ್ಲ. ಆದರೆ....ಅಕ್ಕೂರಿನಿಂದ ಆ ಸೀಸೆಗಳನ್ನು ಇಲ್ಲಿಯವರೆಗೆ ತರುವುದೇ ಕಷ್ಟದ ವಿಷಯ. ಸ್ವಂತದ ಕಾರೇನೋ ಉಂಟು. ಅದನ್ನು ತಾನೇ ತೆಗೆದುಕೊಂಡು ಹೋಗಬೇಕಲ್ಲವೇ? ಬಸಲಿಂಗ ಮದ್ಯ ತಂದು ವಾಡೆಯಲ್ಲಿರಿಸಿದ ಸುದ್ದಿ ಅಷ್ಟರಲ್ಲಿಯೆ ಪೋಲೀಸ್ ಅಧಿಕಾರಿಗಳಿಗೆ ತಿಳಿದರೆ....? ಸೀಸೆಗಳನ್ನು ತುಂಬಿ ಕೊಂಡು ತಾವು ನಗರಕ್ಕೆ ಹಿಂದಿರುಗಿ ಬರುವಾಗ ದಾರಿಯಲ್ಲಿ ಅಧಿಕಾರಿಗಳು ಕಾರನ್ನು ತಡೆದು ನಿಲ್ಲಿಸಿದರೆ....? ತನ್ನನ್ನು ಬಂಧಿಸಿದರೆ....? ಮುಂದೆ, ನಗರದ ಜನರೆಲ್ಲರೂ ತನ್ನನ್ನೇ ನೋಡಿ ನಗುವಂತಾದೀತು. ತನ್ನ ಬಂಧನದ ಸಂಗತಿ ಪತ್ರಿಕೆಗಳಲ್ಲೂ ಪ್ರಕಟವಾಗಿ ತಮ್ಮ ಮನೆತನದ ಹೆಸರೇ ಕೆಟ್ಟುಹೋದೀತು....

ಹಾಗೆ ಯೋಚಿಸುತ್ತಾ ಬಾಜೀರಾಯರು ಧೈರ್ಯ ಕಳೆದುಕೊಂಡು ಕುಳಿತುಬಿಟ್ಟರು. ಸಂಜೆಯಾಗುತ್ತ ಬಂದಂತೆ ಅವರಿಗೆ ಯಾವುದೂ ಬೇಡ ವಾಯಿತು. ಬೇಸರವನ್ನು ನೀಗಿಸಲೆಂದು ಗೋವಾದೇವಿಯ ಆರಾಧನೆಗಾರಂಭಿ ಸಿದರು. ಒಂದು ಸೀಸೆ ಬರಿಯದಾಯಿತು. ಇನ್ನೊಂದು. ಕುಡಿದಷ್ಟೂ ವ್ಯಸನ ಹೆಚ್ಚಿತೇ ಹೊರತು ಕಡಮೆಯಾಗಲಿಲ್ಲ. ಮತ್ತೆ ಕುಡಿದರು. ಅರಿವು ಇಲ್ಲದಾಗುವ

ವರೆಗೂ ಕುಡಿದು ಹಾಸಿಗೆಯ ಮೇಲೆ ಬಿದ್ದುಕೊಂಡರು. ಮತ್ತೆ ಅವರಿಗೆ ಅರಿವು ಬಂದಾಗ ಬೆಳಗಾಗಿ ಹೋಗಿತ್ತು.

ಅವರು ಕಣ್ಣು ತೆರೆಯುತ್ತಲೂ ಮೊದಲು ಕಂಡದ್ದು ತಮ್ಮ ಪತ್ನಿಯ ಮುಖವನ್ನು. ರಾತ್ರಿ ಊಟವನ್ನೂ ಮಾಡದೆ ಮಲಗಿಕೊಂಡ ಪತಿಗಾಗಿ ಚಿಂತಿಸುತ್ತಾ ತಾವೂ ಊಟಮಾಡದೆ ಹಾಗೇ ಇರುಳು ಕಳೆದಿದ್ದರು ತಾರಾಬಾಯಿ. ಆ ಸಾಧ್ವಿಯ ಸುಪ್ರಸನ್ನ ಮುಖ ದೃಷ್ಟಿಗೆ ಬೀಳುತ್ತಲೂ ಬಾಜೀ ರಾಯರ ಮನಸ್ಸು ಚೇತರಿಸಿಕೊಂಡಿತು. ಅವರು ಹಾಸಿಗೆ ಬಿಟ್ಟು ಎದ್ದವರೇ ಪತ್ನಿಯನ್ನು ತಬ್ಬಿಕೊಂಡು ಪ್ರೀತಿಯಿಂದ ಮುದ್ದಿಸಿದರು. "ಇವರಿಗೇನು ಹುಚ್ಚು ಹಿಡಿದಿಲ್ಲವಷ್ಟೆ?" ಎಂದುಕೊಳ್ಳುತ್ತಾ ತಾರಾಬಾಯಿ ಅವರ ಅಪ್ಪುಗೆ ಯಿಂದ ಬಿಡಿಸಿಕೊಂಡು ಅಡುಗೆಯಮನೆಗೆ ನಡೆದರು.

"ಇವಳ ಮುಖ ನೋಡಿದರೆ ಸಾಕು, ಎಂಥಾ ಚಿಂತೆಯಿದ್ದರೂ ತಾನಾಗೇ ಕರಗಿಹೋಗ್ತದೆ. ಇವಳ ಕೈ ಹಿಡಿದದ್ದು ನನ್ನ ಪುಣ್ಯ" ಎಂದುಕೊಳ್ಳುತ್ತಾ ಬಾಜೀರಾಯರು ಸ್ನಾನಕ್ಕೆ ಹೊರಟರು.

ಸ್ನಾನಮಾಡುತ್ತಿದ್ದ ಹಾಗೇ ಅವರ ತಲೆಯಲ್ಲಿ ಪರಸ್ಪರ ವಿರುದ್ಧ ವಿಚಾರಗಳ ಗೊಂದಲ ನಡೆದೇ ಇತ್ತು. ತಮಗೇನು ಕಡಮೆಯಾಗಿದೆಯೆಂದು ತಾವು ಮದ್ಯದ ವ್ಯಾಪಾರಕ್ಕಾಸೆ ಮಾಡಿದುದು? ಇಂಥ ತುಚ್ಛ ಆಸೆ ತಮಗೆ ಅಂಟಿಕೊಂಡುದು ದಾದರೂ ಹೇಗೆ? ಯಾವ ಜನ್ಮದ ಶಾಪವೋ – ಅಂತೂ ಕುಡಿತದ ವ್ಯಸನ ವೊಂದು ಎಂದೆಂದೂ ಬಿಡಲಾರದಂತೆ ಅಂಟಿಕೊಂಡಿದೆ. ಅದರೊಡನೆಯೇ ಹಣದ ಲಾಲಸೆಯೂ ಅಂಟಿಕೊಳ್ಳುವುದೇ? ತಮ್ಮ ಪೂರ್ವಜರೆಲ್ಲರೂ ಎಂಥ ಪುಣ್ಯ ಪುರುಷರು....ಅಂಥವರ ವಂಶಜರಾದ ತಾವು ಎಂಥ ಪಾಪಿ....ಪತಿತ....ತಾವು ನಡಸಿರುವುದು ಎಂಥ ಕೀಳು ಕೆಲಸ....

ಆದರೆ ಆ ಯೋಚನೆಗಳು ಬಹಳ ಹೊತ್ತು ಬದುಕಲಿಲ್ಲ. ಸ್ನಾನ ಮುಗಿಸಿ ತಿಂಡಿ ತಿನ್ನಲು ಕುಳಿತಿದ್ದಾಗಲೇ ಅವರ ಮನಸ್ಸು ಅಕ್ಕೂರಿನಲ್ಲಿನ ಇನ್ನೂರು ಸೀಸೆಗಳನ್ನು ನೆನೆದು, ಅವುಗಳಿಂದ ಬರಬಹುದಾದ ಲಾಭವನ್ನು ಕಲ್ಪಿಸಿಕೊಂಡು ಹಿಗ್ಗತೊಡಗಿತು. ಚಹ ಸೇವಿಸಿ ಏಳುತ್ತಿದ್ದ ಹಾಗೇ ಅವರು ಹೆಂಡತಿಯನ್ನು ಕುರಿತು ಹೇಳಿದರು:

"ಅಕ್ಕೂರಿಗೆ ಹೋಗಿ ಬಂದು ಬಹಳ ದಿನವಾಯ್ತು ತಾರಾ. ಇವತ್ತು ಹೋಗಿಬರ್ತೀನಿ. ಸ್ವಲ್ಪ ಅಕ್ಕಿಯನ್ನೂ ತರಬೇಕಲ್ಲ? ಈ ರೇಶನ್ನಿನ ಅಕ್ಕಿ ಯಾತಕ್ಕಾಗಬೇಕು?"

"ಯಾವಾಗ ಬರ್ತೀರಿ?"

"ಈಗ ಹೋಗಿ ರಾತ್ರಿಯೂಟದ ವೇಳೆಯೊಳಗಾಗಿ ಬಂದುಬಿಡ್ತೀನಿ. ಆಯಿತೇ?"

ಮತ್ತೆ ಮಹಡಿಗೆ ಬಂದು, ತಮ್ಮ ಬಟ್ಟೆಗಳಿಂದ ತುಂಬಿದ್ದ ನಾಲ್ಕು ದೊಡ್ಡ ಟ್ರಂಕುಗಳನ್ನು ಖಾಲಿ ಮಾಡಿದರು. ಅನಂತರ ತಮ್ಮ ತಂದೆತಾಯಿಗಳ ಭಾವ ಚಿತ್ರದ ಮುಂದೆ ನಿಂತು,

"ನನ್ನನ್ನು ಕ್ಷಮಿಸಿರಿ. ಮಾಡಬಾರದ್ದನ್ನ ಮಾಡುತ್ತಿದೀನಿ. ನನ್ನ ಮಾನ ಕಾಯುವದು ನಿಮ್ಮನ್ನೇ ಕೂಡಿದೆ," ಎಂದು ಪ್ರಾರ್ಥಿಸಿ ನಮಸ್ಕರಿಸಿದರು.

ಭೀಮಾಚಾರಿಯನ್ನು ಕೂಗಿ, ಆ ಟ್ರಂಕುಗಳನ್ನು ಕಾರಿನ ಹಿಂಭಾಗ ದಲ್ಲಿಡಲು ತಿಳಿಸಿದುದಾಯಿತು. ಆಚಾರಿ ಟ್ರಂಕುಗಳನ್ನಿಡುವದನ್ನೆ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡುತ್ತ ನಿಂತಿದ್ದ ತಾರಾಬಾಯಿಯನ್ನು ಕುರಿತು ಬಾಜೀ ರಾಯರು,

"ಅಕ್ಕಿ ತರಲಿಕ್ಕೆ ಒಯ್ತಾ ಇದೀನಿ ಅವನ್ನ. ಟ್ರಂಕುಗಳಲ್ಲಿಟ್ಟರೆ ಯಾರಿಗೂ ಸಂಶಯ ಬರುವದಿಲ್ಲ," ಎಂದರು. ಸರಲಮನಸ್ಸಿನ ಆ ಸತೀಮಣಿ ಆ ಸ್ಪಷ್ಟೀ ಕರಣದಿಂದಲೇ ಸಮಾಧಾನಪಟ್ಟುಕೊಂಡು ಸುಮ್ಮನಾದರು.

ಬಾಜೀರಾಯರ ಕಾರು ಅಕ್ಕೂರಿನ ಹಾದಿ ಹಿಡಿದು ಓಡತೊಡಗಿತು. ನಗರದ ಹೊರಭಾಗದಲ್ಲಿನ ಸುಂಕದಕಟ್ಟೆಯ ಹತ್ತಿರ ಅವರು ಬೇಕೆಂತಲೇ ಕಾರು ನಿಲ್ಲಿಸಿದರು, ಹಿಂಭಾಗದಲ್ಲಿನ ಮುಚ್ಚಳವನ್ನು ತೆಗೆದು 'ಸ್ಕ್ರೂಡ್ರೈವರ್' ತೆಗೆದು ಕೊಂಡು ಏನನ್ನೋ ಸರಿಪಡಿಸುವಂತೆ ನಟಿಸಿದರು. ಹತ್ತಿರದಲ್ಲಿಯೇ ಇದ್ದ ಪೋಲೀಸಿನವನು, ಬಾಜೀರಾಯರಿಗೂ ಪರಿಚಿತನಾಗಿದ್ದವನು, ಬಂದು ರಾಯರಿಗೆ ಸಲಾಮು ಹೊಡೆದು,

"ಏನು ವಕೀಲರೆ, ಫಿರ್ತಿ ಹೊರಟಿರಾ?" ಎಂದು ಕೇಳಿದ.

ಟ್ರಂಕುಗಳು ಅವನ ದೃಷ್ಟಿಗೆ ಬೀಳಬೇಕೆಂಬ ಒಂದೇ ಒಂದು ಉದ್ದೇಶ

ದಿಂದಲೇ ಹಿಂಭಾಗದ ಮುಚ್ಚಳ ತೆಗೆದಿದ್ದ ಬಾಜೀರಾಯರು ಅವನನ್ನು ನೋಡಿ ಮುಗುಳ್ನಗುತ್ತಾ ಹೇಳಿದರು:

"ಎಲ್ಲಿಯ ಫಿರ್ತಿಯಪ್ಪ? ಹೀಗೇ ಊರಿಗೆ ಹೊರಟಿದ್ದೀನಿ. ಅಲ್ಲಿ ಹಿರಿಯರೂ ಸಂಬಂಧಿಕರೂ ಇದ್ದಾರಲ್ಲ? ಅವರಿಗೆಲ್ಲಾ ಆಗಾಗ ಅರಿವೆಗಳನ್ನೊಯ್ದು ಕೊಡಬೇಕಾಗ್ತದೆ. ಯಜಮಾನರಿರುವಷ್ಟುದಿನ ಅದು ಅವರ ಜವಾಬ್ದಾರಿಯಾಗಿತ್ತು. ಈಗ ನನ್ನ ಪಾಲಿಗೇ ಬಂದಿದೆ. ನಾನೂ ಹೋಗದಿದ್ದರೆ ಹಿರಿಯರಿಗೆ ಅಗೌರವವಲ್ಲವೇನು? ಮತ್ತೇನು ಎಲ್ಲಾ ಕ್ಷೇಮವೋ? ಡಿ.ಎಸ್.ಪಿ. ಸಾಹೇಬರು ಊರಲ್ಲಿದ್ದಂತೆ ಕಾಣುವದಿಲ್ಲ. ಎರಡು ದಿನದಿಂದ ನೋಡೇ ಇಲ್ಲವಲ್ಲ?"

"ಹೌದ್ರಿ. ಫಿರ್ತಿ ಹೋಗಿದಾರೆ," ಎಂದ ಪೋಲೀಸ.

ಬಾಜೀರಾಯರ ಕಾರು ಮುಂದೆ ನಡೆಯಿತು. ಮೂವತ್ತು ಮೈಲು ದಾಟಲು ಒಂದು ತಾಸು ಹಿಡಿಯಿತಷ್ಟೆ. ಮಧ್ಯಾಹ್ನದ ಊಟ ಹೊಡೆದು ಮಲಗಿ ನಿದ್ದೆ ತೆಗೆಯುತ್ತಿದ್ದ ಬಸಲಿಂಗ ಕಾರಿನ ಸದ್ದು ಕೇಳಿ ಎದ್ದು ಬಂದ. ಗೋವಿಂದ ರಾಯರು ಬಾಗಿಲಲ್ಲೇ ಇದ್ದವರು ಧಣಿಯರಿಗೆ ನಮಸ್ಕಾರಮಾಡಿ ಬರಮಾಡಿ ಕೊಂಡರು. ಮನೆಯ ಜನರ ಕ್ಷೇಮ ಸಮಾಚಾರದ ಮಾತಿನೊಡನೆ ಬಾಯಾರಿಕೆಗಾಗಿ ಹಾಲು–ಹಣ್ಣು ಬಂದುವು. ಮತ್ತೊಂದು ಗಂಟೆಯ ತರುವಾಯ ಊಟವೂ ಮುಗಿಯಿತು. ಒಂದರ್ಧ ತಾಸು ವಿಶ್ರಾಂತಿ ಪಡೆದಾದ ಬಳಿಕ ಕಾರಿನಲ್ಲಿಯ ಟ್ರಂಕುಗಳನ್ನಿಳಿಸಿ, ಸೀಸೆಗಳನ್ನು ಅವುಗಳಲ್ಲಿ ತುಂಬಿ ಮತ್ತೆ ಕಾರಿನಲ್ಲಿಡಲಾಯಿತು. ಅರ್ಧ ಚೀಲದಷ್ಟು ಸಣ್ಣಕ್ಕಿಯನ್ನೂ ಕಾರಿಗೆ ಹಾಕಿ ಬಾಜೀರಾಯರು ಹೊರಡಲಣಿಯಾಗಿ ಗೋವಿಂದರಾಯರಿಗೆ ಇಪ್ಪತ್ತು ರೂಪಾಯಿಗಳನ್ನು ಇನಾಮಾಗಿ ಕೊಟ್ಟರು. ತಮ್ಮ ಜೀವಮಾನದಲ್ಲಿಯೇ ಗೋವಿಂದರಾಯರಿಗೆ ಅಷ್ಟು ಇನಾಮು ಎಂದೂ ದೊರಕಿರಲಿಲ್ಲ. "ಚಾಳಿ ಕೆಟ್ಟದಾದರೂ ಮನಸು ದೊಡ್ಡದು ನಮ್ಮ ಹೊಸ ಧಣಿಯರದು," ಎಂದು ಕೊಳ್ಳುತ್ತ ಅವರು ಕೃತಜ್ಞತೆಯ ವಂದನೆಗಳನ್ನರ್ಪಿಸಿದರು.

ಬಸಲಿಂಗ ಹಿಂಬದಿಯ ಸ್ಥಳದಲ್ಲಿ ಕುಳಿತುಕೊಂಡ. ಕಾರು ನಗರದತ್ತ ಸಾಗಿತು. ಮತ್ತೆ ಅದು ನಿಂತುಕೊಂಡುದು ನಗರದ ಸುಂಕದಕಟ್ಟೆಯ ಬಳಿಯಲ್ಲಿಯೆ. ಬೆಳಿಗ್ಗೆ ಅಲ್ಲಿದ್ದ ಪೋಲೀಸನೇ ಆಗಲೂ ಅಲ್ಲಿ ಉಪಸ್ಥಿತನಿದ್ದ.

ವಕೀಲರು ಅವನನ್ನು ಕರೆದು ಅವನಿಗಾಗಿ ಸ್ವಲ್ಪ ಅಕ್ಕಿಯನ್ನು ತಂದಿರುವುದಾಗಿ ಹೇಳಿದಾಗ ಅವನಿಗೂ ಹರ್ಷವಾಯಿತು. ಬಡವರಾದ ಪೋಲೀಸರಿಗೆ ಅಂಥ ಚಿಲ್ಲರೆ ಕಾಣಿಕೆ ಸಿಕ್ಕಿದರೂ ಕೂಡಾ ಸ್ವರ್ಗವೇ ಕೈಗೆ ಬಂದಂತಾಗುತ್ತದೆ. ಅಕ್ಕಿಯ ಚೀಲವನ್ನು ಆತ ವಕೀಲರಿಂದ ಸ್ವೀಕರಿಸಿ ಸೆಟೆದು ನಿಂತು ಸಲಾಂ ಹೊಡೆದ. ವಕೀಲರು ನಗುನಗುತ್ತಾ ಕಾರನ್ನು ಮುಂದೆ ಸಾಗಿಸಿ ಬಸಲಿಂಗನ ಮನೆಯೆದುರಿಗೆ ತಂದು ನಿಲ್ಲಿಸಿದರು. ಬಸಲಿಂಗ ಚೆನ್ನಿ ಇಬ್ಬರೂ ಸೇರಿ ಟ್ರಂಕುಗಳನ್ನು ಒಳಗಡೆ ಸಾಗಿಸಿದರು. ವಕೀಲರು ಮಾತ್ರ ಕಾರು ಬಿಟ್ಟು ಇಳಿಯಲಿಲ್ಲ. ಮನೆಯೊಳಗಡೆ ಬಂದು ಚಹ ಕುಡಿದು ಹೋಗಬೇಕೆಂದು ಚೆನ್ನಿ ಮೂರು ನಾಲ್ಕು ಬಾರಿ ಬಿನ್ನವಿಸಿಕೊಂಡರೂ ಅವರು ವಿನಯದಿಂದಲೇ ಅವಳ ಆಮಂತ್ರಣವನ್ನು ನಿರಾಕರಿಸಿ ಹೊರಟುಹೋದರು.

"ಬಾಜೀರಾಯರಂದರೆ ದೇವರಿದ್ದಾಂಗ ಚೆನ್ನೀ. ಅವರ ಮ್ಯಾಲ ನಿನ್ನ ಮಂತ್ರ ಏನೂ ನಡೆಯೂದಿಲ್ಲ. ಹರಕಸೆಟ್ಟರೋ ಮೋಜಣ್ಣವರೋ ಇದ್ದಾಂಗಲ್ಲ ಇವರು. ಎಂಥಾ ಸುಂದರ ಹೆಂಗಸು ತಾನಾಗೇ ಬಂದರೂ ಮುಟ್ಟಾಕಿಲ್ಲ ಇವರು ಅವಳನ್ನ!" ಎಂದ ಬಸಲಿಂಗ.

"ಅಯ್ಯ! ಬಿಡು ಬಿಡು! ನೋಡೀನಿ. ತಾನಾಗೇ ಬಂದರ ಬಿಡೂ ಮಾರಿಯೇ ಗಂಡಸರದು!"

"ನಿನಗ್ಗೊತ್ತಿಲ್ಲ ಚೆನ್ನೀ, ಬಾಜೀರಾಯರ ಸಂಗತಿ!" ಎಂದಿಷ್ಟೆ ನುಡಿದು ಬಸಲಿಂಗ ಸುಮ್ಮನಾಗಿಬಿಟ್ಟ. ಅವಳೊಡನೆ ವಾದಿಸುತ್ತ ಕೂಡಲು ಅವನಿಗೆ ಸಮಯವೂ ಇರಲಿಲ್ಲ. ಮಶೀರಾಸೀಸೆ ಬಂದುದರ ವಾರ್ತೆಯನ್ನು ಕುಡುಕರಾದ ಸಿರಿವಂತರಿಗೆ ಮುಟ್ಟಿಸುವ ಕೆಲಸವೂ ಅವನದೇ ಆಗಿತ್ತು.

ರಾತ್ರಿ ಹತ್ತುಗಂಟೆಯೊಳಗಾಗಿ ಇನ್ನೂರು ಸೀಸೆಗಳು ಮಾರಾಟವಾಗಿ ಎಲ್ಲ ಹಣವೂ ಕೈಗೆ ಬಂತು. ಆ ಸೀಸೆಗಳ ಬೆಲೆ, ಕೂಲಿನಾಲಿ, ಗೋವಿಂದರಾಯರಿಗೆ ಕೊಟ್ಟ ಇನಾಮು, ಬಸಲಿಂಗನ ಪ್ರವಾಸದ ಖರ್ಚು, ಪೆಟ್ರೋಲ್ ಖರ್ಚು ಎಲ್ಲವೂ ಸೇರಿ ಪ್ರತಿಯೊಂದು ಸೀಸೆಗೆ ಹನ್ನೆರಡು ರೂಪಾಯಿಯಷ್ಟಾಯಿತು. ಮಾರಾಟವಾದುದು ಮೂವತ್ತೆರಡು ರೂಪಾಯಿಗೊಂದರಂತೆ. ಒಂದು ಸೀಸೆಗೆ ಇಪ್ಪತ್ತು ರೂಪಾಯಿನಂತೆ ಒಟ್ಟಾರೆ ನಾಲ್ಕು ಸಾವಿರ ರೂಪಾಯಿ

ಲಾಭ, ಒಂದೇ ಒಂದು ದಿನದಲ್ಲಿ. ಬಸಲಿಂಗನಿಗೂ ಒಂದು ಸಾವಿರ ರೂಪಾಯಿ ಕೊಟ್ಟು ಬಾಜೀರಾಯರು ಹೇಳಿದರು :

"ಇನ್ನು ಮುಂದೆ ಪ್ರತಿಸಲವೂ ನೀನು ಬಾಟಲಿ ತಂದಾಗಲೆಲ್ಲಾ ನಾಲ್ಕರಲ್ಲೊಂದು ಪಾಲು ಲಾಭ ನಿನ್ನದು."

ಸಾವಿರ ರೂಪಾಯಿಗಳನ್ನು ತನ್ನ ಟ್ರಂಕಿನಲ್ಲಿಟ್ಟು ಚೆನ್ನಿ ಆನಂದದಿಂದ ನಲಿದಳು. ಆ ರಾತ್ರಿ ಬಸಲಿಂಗನ ಪಾಲಿಗೆ ಸ್ವರ್ಗಸುಖದ ರಾತ್ರಿಯಾಯಿತು.

ಅದೇ ತಿಂಗಳು ಬಸಲಿಂಗ ಮತ್ತೆ ನಾಲ್ಕು ಬಾರಿ ಗದ್ದೇಹಳ್ಳಿಗೆ ಹೋಗಿ ಬಂದ. ವಕೀಲರ ಕಾರು ಅಕ್ಕೂರಿಗೆ ಹೋಗಿ ಸೀಸೆಗಳನ್ನು ಸಾಗಿಸಿ ತಂದುದೂ ಆಯಿತು. ಮಶೀರಾಭಕ್ತರಾಗಿದ್ದ ಸಿರಿವಂತರ ಹತ್ತಿರ ಒಂದು ವರ್ಷಕ್ಕಾಗುವಷ್ಟು ಮದ್ಯ ಸಂಗ್ರಹವಾಯಿತು. ಈ ಉಳ್ಳವರ ಹತ್ತಿರ ಸಾಕಷ್ಟು ಮಾಲು ಇರುವಾಗ ಇನ್ನಿತರ ಮಶೀರಾ ವ್ಯಾಪಾರಿಗಳನ್ನು ಮಾತನಾಡಿಸುವವರಾದರೂ ಯಾರು? ಮಾಲು ತಮ್ಮ ಹತ್ತಿರವೇ ಇರುವುದು ಅಪಾಯಕಾರಕವಾದುದರಿಂದ ಅವರು ಅದನ್ನು ಬೇರೆ ನಗರಗಳಿಗೆ ಸಾಗಿಸಿದರು. ವಾರಕ್ಕೊಮ್ಮೆಯೊ, ತಿಂಗಳಿಗೊಮ್ಮೆಯೋ ಅಥವಾ ಯಾವುದೊಂದು ವಿಶೇಷ ಸಮಾರಂಭದ ಸಮಯದಲ್ಲಿ ಮೋಜಿಗಾಗಿಯೊ ಮಶೀರಾ ಕೊಳ್ಳುತ್ತಿದ್ದ ಸಣ್ಣಪುಟ್ಟ ಗಿರಾಕಿಗಳಿಗೆ ಮಾತ್ರ ಮದ್ಯ ಸಿಕ್ಕದಂತಾಗಿ ಹಾಹಾಕಾರವೆದ್ದಿತು.

ಈ ಗಿರಾಕಿಗಳೆಲ್ಲರೂ ಸಾಮಾನ್ಯವಾಗಿ ಮಧ್ಯಮ ವರ್ಗದವರು. ಯಾವಾಗಲೂ ಅಸಮಾಧಾನದಿಂದಿರುವುದೇ ಈ ವರ್ಗದ ವೈಶಿಷ್ಟ್ಯ. ತಮಗಿಂತಲೂ ಸಿರಿವಂತರಾದವರ ಜೊತೆಗೆ ಓಡಿಯಾಡಿಕೊಂಡಿರಲು ಇವರಲ್ಲಿ ಹಣವಿರುವುದಿಲ್ಲ. ತಮಗಿಂತಲೂ ಬಡವರಾದವರೊಡನೆ ಹೊಂದಿಕೊಂಡಿರಲು ಮನಸ್ಸಿರುವುದಿಲ್ಲ, ಅಂತೆಯೆ, ಅವರು ಈ ಎರಡೂ ವರ್ಗಗಳ ಜನರನ್ನು ದೂಷಿಸುತ್ತ, ಅವರ ಕುಂದುಕೊರತೆ ದೋಷ ದೌರ್ಬಲ್ಯಗಳನ್ನು ಹುಡುಕಿ ಕುಚೋದ್ಯವಾಡುವುದರಲ್ಲಿ ಸಮಾಧಾನಪಟ್ಟುಕೊಳ್ಳುತ್ತಾರೆ. ಅವರು ಜಾಣರೂ ಹೌದು. ಬೇರೆಯವರ ಕುಂದುಕೊರತೆಗಳನ್ನು ಕಂಡುಹಿಡಿಯುವುದಕ್ಕೂ ಜಾಣತನ ಅಗತ್ಯವಲ್ಲವೆ?

ಈ ಗಿರಾಕಿಗಳು ಕೈಕಟ್ಟಿಕೊಂಡು ಕೂಡಲಿಲ್ಲ. ಮಶೀರಾ ಭಕ್ತರಾದ

ಸಿರಿವಂತರ ಸುತ್ತುಮುತ್ತು ಸುಳಿದು ಅವರಿಗೆ ಮಶೀರಾ ಪೂರೈಸಿದವನನ್ನು – ಎಂದರೆ ಬಸಲಿಂಗನನ್ನು – ಅರಿತುಕೊಂಡರು, ಅವನನ್ನು ಪೀಡಿಸತೊಡಗಿದರು.

"ನನ್ನ ಹತ್ತರ ಇಲ್ಲೇ ಇಲ್ಲ ಮಾರಾಯರೆ," ಎಂದ ಬಸಲಿಂಗ.

ಅವನ ಮಾತನ್ನು ಅವರು ನಂಬುವರೇ? ಬಸಲಿಂಗನ ಯಾವ ಮಾತನ್ನು ಯಾರೂ ನಂಬುವಂತಿರಲಿಲ್ಲ.

"ಸುಳ್ಳಾಡಬ್ಯಾಡ್ರಪಾ ಬಸಲಿಂಗಾ. ಜರೂರು ಬೇಕಾಗಿದೆ. ಒಂದರ್ಧ ಬಾಟಲಿಯಾದರೂ ಕೊಡು,"

"ನೋಡೂಣು. ಪ್ರಯತ್ನ ಮಾಡ್ತೀನಿ," ಎಂದು ಹೇಳಿ ಬಸಲಿಂಗ ಗಿರಾಕಿಗಳನ್ನು ಕಳಿಸಿಕೊಟ್ಟು ಬಾಜೀರಾಯರ ಮನೆಗೆ ಧಾವಿಸಿ ಹೋದ. ಇನ್ನೂ ನಾಲ್ಕೈದುನೂರು ಸೀಸೆಗಳಿಗಾದರೂ ಬೇಡಿಕೆಯಿದೆಯೆಂದು ಅವರಿಗೆ ಮನವರಿಕೆ ಮಾಡಿಕೊಟ್ಟ.

ಮತ್ತೆ ಬಸಲಿಂಗನ ಓಡಾಟಕ್ಕಾರಂಭವಾಯಿತು. ಒಂದೆರಡು ತಿಂಗಳುಗಳ ಅವಧಿಯಲ್ಲಿಯೇ ಬಾಜೀರಾಯರಿಗೆ ಇಪ್ಪತ್ತೈದು ಸಾವಿರ ರೂಪಾಯಿ ಲಾಭ ವಾದರೆ ಬಸಲಿಂಗನಿಗೆ ಆರೇಳುಸಾವಿರ ರೂಪಾಯಿ ಸಿಕ್ಕಿದುವು.

"ಈ ಹಣವನ್ನ ನನ್ನ ಸ್ವಂತ ಖರ್ಚಿಗೆ ಬಳಸದೆ ಹಾಗೇ ತೆಗೆದಿಟ್ಟದೀನಿ ಬಸಲಿಂಗಾ. ಹೊರಗಿಂದು ಹೊರಗೇ ಖರ್ಚುಮಾಡಬೇಕಂತ ವಿಚಾರ ಮಾಡಿದ್ದೀನಿ," ಎಂದು ಬಾಜೀರಾಯರೊಂದು ದಿನ ಮಾತು ತೆಗೆದರು.

"ಹೊರಗಿಂದು ಹೊರಗೇ ಅಂದರೆ?" ಎಂದು ಕೊಂಚ ದಿಗಿಲುಗೊಂಡೇ ಕೇಳಿದ ಬಸಲಿಂಗ.

ಬಾಜೀರಾಯರು ನಕ್ಕು ನುಡಿದರು:

"ಅಂಥಾದ್ದೇನೂ ಮಾಡೂದಿಲ್ಲ ಬಸಲಿಂಗಾ. ನೀನೇನು ಗಾಬರಿ ಯಾಗಬೇಡ. ನಮ್ಮಾ ಚಾಳದ ಮುಂದೆ ಖಾಲಿ ಜಾಗ ಅದೆಯಲ್ಲ, ಅಲ್ಲಿ ಇನ್ನೊಂದು ಚಾಳ ಕಟ್ಟಿಸಿ ಮೂರು ಮೂರು ಕೋಣೆಗಳ ಎಂಟು ಬ್ಲಾಕ್ ತಯಾರಿಸಬೇಕಂತ ಯಜಮಾನರ ಇಚ್ಛೆಯಿತ್ತು. ದುರ್ದೈವದಿಂದ ಆ ಇಚ್ಛೆ ಅವರ ಜೀವಮಾನದಲ್ಲೇ ನಡೆಯಲಿಲ್ಲ. ಈಗ ನಾನದನ್ನ ಪೂರೈಸಿ ಅವರ ಆತ್ಮಕ್ಕೆ ಶಾಂತಿಯಾಗುವಂತೆ ಮಾಡಬೇಕಲ್ಲವೇನು? ಇಪ್ಪತ್ತೈದು ಸಾವಿರದಲ್ಲಿ ಸುಂದರವಾದ ಚಾಳ ಎದ್ದೀತು, ಯಾಕೋ ಬಸಲಿಂಗ?"

"ಫಸ್ಟ್‌ಕ್ಲಾಸ್ ಪ್ಲಾನ್ ಹಾಕಿಬಿಡಿರಿ ವಕೀಲರೆ," ಎಂದ ಬಸಲಿಂಗ.

"ಪ್ಲಾನ್‌ಗೀನ್ ಎಲ್ಲಾ ಆಗಲೇ ಸಿದ್ಧವಾಗಿದೆ. ಇನ್ನು ಕಟ್ಟುವದೇ ಬಾಕಿ. ಕಟ್ಟಡ ಪೂರಾ ಮುಗಿದ ಬಳಿಕ ಕಲೆಕ್ಟರರನ್ನೇ ಕರೆಸಿ ಆರಂಭೋತ್ಸವ ಮಾಡಿಸೋಣ ಬಸಲಿಂಗಾ. ಊರಿಗೆ ಊರನ್ನೆಲ್ಲಾ ಆಮಂತ್ರಿಸೋಣ. ನಮ್ಮ ವಿಮಲೆಯ ನರ್ತನ ಕಾರ್ಯಕ್ರಮವನ್ನೂ ಇಟ್ಟರಾಯಿತು, ಏನೆನ್ನುತ್ತೀ?"

"ವಿಮಲಾಬಾಯಿಯವರ ನರ್ತನ? ಅರ್ಭಾಟ್ ಆಗುತದೆ ಬಿಡಿರಿ!" ಎಂದ ಬಸಲಿಂಗ.

## ಹನ್ನೆರಡು....  ಗಂಡುಬೀರಿ ವಿಮಲೆ

**ವಿಮಲೆ—**

ಬಾಜೀರಾಯರು ಕಟ್ಟಿಸಲಿದ್ದ ಹೊಸ ಚಾಳದ ಆರಂಭೋತ್ಸವದಂದು ನರ್ತಿಸಬೇಕಾಗಿದ್ದ ವಿಮಲೆ ಸಾರಸ್ವತರ ಹುಡುಗಿ. ಇನ್ನೂ ಕಾಲೇಜಿನಲ್ಲಿ ಓದುತ್ತಿದ್ದ ವಿದ್ಯಾರ್ಥಿನಿ. ಅವಳೇನು ಹೆಸರಾಂತ ನೃತ್ಯಗಾತಿಯಾಗಿರಲಿಲ್ಲ ವಾದರೂ ಓರೆಕೋರೆ ನಗರದ ಕಲಾಪ್ರೇಮಿಗಳಿಗೆ ಮಾತ್ರ ಅವಳ ಹೆಸರು ಸುಪರಿಚಿತವಾದುದಾಗಿತ್ತು. ಸುಮಿತ್ರಾದೇವಿಯ ಶಿಷ್ಯೆಯಾಗಿದ್ದುಕೊಂಡು ಆಕೆಯ ನೃತ್ಯಶಾಲೆಯಲ್ಲಿಯೆ ತರಬೇತು ಪಡೆದು ಗುರುವಿಗಿಂತಲೂ ಹೆಚ್ಚಿನ ಜನಪ್ರಿಯತೆ ಪಡೆದುಕೊಂಡಿದ್ದವಳು ವಿಮಲಾ.

ಬಸಲಿಂಗನ ಹತ್ತಿರ ಆಕೆಯ ಬಗೆಗೆ ಮಾತನಾಡುವಾಗ "ನಮ್ಮ ವಿಮಲೆ" ಎಂದು ಬಾಜೀರಾಯರು ಹೇಳಿದುದರ ಹಿಂದೆ ಅಂಥ ವಿಶೇಷವೇನೂ ಇರಲಿಲ್ಲ. ಅವರ ಚಾಳದಲ್ಲಿಯೆ, ಅವರ ಮನೆಯೆದುರಿನಲ್ಲಿಯೆ, ಅವರ ಕಣ್ಣೆದುರಿನಲ್ಲಿಯೆ ವಿಮಲೆ ಬಾಲ್ಯಾವಸ್ಥೆಯನ್ನು ದಾಟಿ ಬೆಳೆದುಬಂದಿದ್ದುದ ರಿಂದಲೂ ಅವಳು ತಂದೆಯನ್ನು ಕಳೆದುಕೊಂಡ ಅನಾಥೆಯಾಗಿದ್ದುದರಿಂದಲೂ ಬಾಜೀರಾಯರಲ್ಲಿ ಅವಳ ಕುರಿತು ಸಹಜವಾದ ಅನುಕಂಪವಿತ್ತು.

ಬಾಜೀರಾಯರ ತಂದೆಯವರು 'ದೇಶಪಾಂಡೆ ಮಹಾಲ'ನ್ನು 'ದೇಶ ಪಾಂಡೆ ಚಾಳ'ನ್ನಾಗಿ ಮಾಡಿದ ಹೊಸದರಲ್ಲಿಯೇ ವಿಮಲೆಯ ತಾಯಿ ರಮಾಬಾಯಿ ಅಲ್ಲಿ ನೆಲಸಲು ಬಂದಿದ್ದಳು. ಆಗ ವಿಮಲೆಯಿನ್ನೂ ಪುಟ್ಟ ಹುಡುಗಿ. ಗೊಬ್ಬೂರಿನ ಸರಕಾರಿ ಕಚೇರಿಯೊಂದರಲ್ಲಿ ಗುಮಾಸ್ತೆಯಾಗಿದ್ದ ಅವಳ ತಂದೆ ಇದ್ದಕ್ಕಿದ್ದ ಹಾಗೇ ವಿಷಮಜ್ವರಕ್ಕೆ ಬಲಿಯಾಗಿ ತೀರಿಕೊಂಡಿದ್ದ. ಅವನ ಪ್ರಾವಿಡೆಂಟ್ ಫಂಡಿನ ಒಂದು ಸಾವಿರ ರೂಪಾಯಿಗಳನ್ನು ಮನೆಯಲ್ಲಿದ್ದ

ಚೂರು ಚೂರು ಬಂಗಾರ ಹಾಗೂ ಇತರ ಒಡವೆಗಳನ್ನು ಮಾರಿ ಶೇಖರಿಸಿದ್ದ ಮತ್ತೊಂದು ಸಾವಿರವನ್ನು ಕಟ್ಟಿಕೊಂಡು ರಮಾಬಾಯಿ ಓರೆಕೋರೆನಗರಕ್ಕೆ ಬಂದು ನಾರಾಯಣರಾಯರ ಚಾಳದಲ್ಲಿನ ಪುಟ್ಟ ಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು ನೆಲಸಿದ್ದಳು. ಅವಳ ಕಥೆಯನ್ನು ಕೇಳಿ ನಾರಾಯಣರಾಯರಿಗೆ ತುಂಬಾ ಮರುಕ ಹುಟ್ಟಿತ್ತು. ಅವಳಿಂದ ಬಾಡಿಗೆಯ ಹಣವನ್ನು ಅವರೆಂದೂ ಸ್ವೀಕರಿಸಲಿಲ್ಲ.

ರಮಾಬಾಯಿಯೂ ಪ್ರಾಮಾಣಿಕಳಾದ ಹೆಂಗಸು. ನಾರಾಯಣರಾಯರ ಉಪಕಾರವನ್ನು ಮರೆಯದೆ ಅವರ ಮನೆಗೆಲಸಗಳಲ್ಲಿ ನೆರವಾಗಿ ಋಣ ತೀರಿಸುತ್ತಿದ್ದಳು. ಒಂದೆರಡು ತಿಂಗಳು ಕಳೆದ ಬಳಿಕ ತನ್ನಲ್ಲಿದ್ದ ಹಣದ ಕುರಿತು ತಿಳಿಸಿ ಅದನ್ನು ಎಲ್ಲಿಯಾದರೂ ಸುರಕ್ಷಿತವಾದ ಸ್ಥಳದಲ್ಲಿರಿಸಲು ಆಕೆ ನಾರಾಯಣರಾಯರನ್ನು ಕೇಳಿಕೊಂಡಾಗ ಅವರು, "ಪಾಪ, ಅವಳ ಮಗಳಿಗೂ ಒಂದು ಆಧಾರವಾದೀತು. ಬ್ಯಾಂಕಿನಲ್ಲಿರಿಸೋಣ. ಬಡ್ಡಿಯೂ ಬರುತ್ತದೆ," ಎಂದುಕೊಂಡು ಆ ಎರಡು ಸಾವಿರ ರೂಪಾಯಿಗಳನ್ನು ನಿರ್ದಿಷ್ಟ ಅವಧಿಯ ಠೇವಿನ ರೂಪದಲ್ಲಿ ಬ್ಯಾಂಕಿಗೆ ಸೇರಿಸಿದ್ದರು.

ರಮಾಬಾಯಿ ಮೂರು ನಾಲ್ಕು ಜನ ಸಿರಿವಂತರ ಮನೆಗಳಲ್ಲಿ ಅಡುಗೆಗೆ ನೆರವಾಗುವುದು, ಕಸಮುಸುರೆ ತೆಗೆಯುವುದೇ ಮೊದಲಾದ ಕೆಲಸಮಾಡಿ ತಿಂಗಳೊಂದಕ್ಕೆ ಮೂವತ್ತು ರೂಪಾಯಿಗಳವರೆಗೂ ಸಂಪಾದಿಸುತ್ತಿದ್ದಳು. ಆ ಮನೆಗಳಲ್ಲಿ ಉಳಿದ ತಿಂಡಿತಿನಿಸುಗಳನ್ನು ತನ್ನ ಮನೆಗೆ ತಂದು ಮಗಳೊಡನೆ ಕುಳಿತು ಊಟಮಾಡುವಳು. ಅಷ್ಟು ದಿನ ಬಡತನದಲ್ಲಿ ಕಾಲಕಳೆದಿದ್ದ ಆ ಎರಡು ಜೀವಗಳಿಗೆ ಸಿರಿವಂತರ ಮನೆಯ ಊಟ ರುಚಿಕರವೆನ್ನಿಸುವುದೂ ಸಹಜವಾಗಿತ್ತು. ಬಾಣಂತಿತನ, ಮದುವೆ, ಮುಂಜಿ, ಅಥವಾ ಇನ್ನಿತರ ಸಮಾರಂಭಗಳ ಕಾಲಕ್ಕೆ ರಮಾಬಾಯಿಗೆ ಹೆಚ್ಚಿನ ಕೆಲಸ ದೊರಕುತ್ತಿತ್ತು, ಆ ಕೆಲಸವನ್ನು ಮನಃಪೂರ್ವಕವಾಗಿ ಮಾಡಿ ಆ ಮನೆಯವರೆಲ್ಲರ ಪ್ರೀತಿಯನ್ನು ಗಳಿಸಿಕೊಂಡು ಉಳಿಸಿಕೊಂಡು ಬರುವ ಚಾತುರ್ಯವೂ ಅವಳಲ್ಲಿತ್ತು. ಕೆಲಸಕ್ಕೆ ನಿಲ್ಲುವ ಮೊದಲು ಆಕೆ ಹಣದ ವಿಚಾರವನ್ನೇ ಎತ್ತುತ್ತಿರಲಿಲ್ಲ. "ಕೆಲಸ ಅಂತೂ ಮಾಡಿಸಿಕೊಂಡು ನಿಮಗೆ ತಿಳಿದದ್ದು ಕೊಡಿರಿ," ಎಂದು ಹೇಳಿ ನೇರವಾಗಿ ದುಡಿತಕ್ಕೆ ತೊಡಗುತ್ತಿದ್ದಳು. ಅವಳ ಸೇವೆಯನ್ನು ಕಂಡು

ಮೆಚ್ಚಿಕೊಂಡವರೆಲ್ಲರೂ ನಾಲ್ಕು ರೂಪಾಯಿಗಳ ಬದಲು ಎಂಟು ರೂಪಾಯಿ ಕೊಡುತ್ತಿದ್ದರು.

ಬಾಣಂತಿತನದ ಪ್ರಸಂಗಗಳಲ್ಲೂ ಅವಳು ತುಂಬ ಜಾಣ್ಮೆಯಿಂದ ಕೆಲಸ ಮಾಡುವಳು. ಬಾಣಂತಿಗೆ ಬೇಕಾದುದು ಗಂಡೋ ಹೆಣ್ಣೋ ಎನ್ನುವುದನ್ನು ಸೂಕ್ಷ್ಮವಾಗಿ ವಿಚಾರಿಸಿ ಅರಿತುಕೊಂಡು ಅವಳನ್ನು ಕುರಿತು ಹೇಳಿದಳು:

“ಬಾಯಿಯವರೇ, ನೀವೇನೂ ಕಾಳಜೀ ಮಾಡಬ್ಯಾಡ್ರಿ. ನೀವು ಬಯಸಿದಂತೇ ಬಂಗಾರದಂಥ ಮಗನ ತಾಯಿಯಾಗುತ್ತೀರಿ.”

“ಹಾಗಾದರೆ ರಮಾಬಾಯಿ, ನಿಮ್ಮ ಬಾಯಿ ತುಂಬ ಸಕ್ಕರೆ. ನಿಮಗೊಂದು ಸೀರೆ, ಖಣ....”

“ಆಯ್ತವ್ವಾ. ನನ್ನದಾಯ್ತು. ನನ್ನ ವಿಮಲೆಯದೂ ತುಸು ನೆನಪಿರಲಿ. ನಿಮ್ಮ ಬಾಲಗೋಪಾಲನ್ನ ಎತ್ತಿ ಆಡಿಸುವದಕ್ಕೆ ಬರುತ್ತಾಳೆ ಆಕೆ,” ಎಂದು ಉಪಾಯವಾಗಿ ಹೇಳುವಳು ರಮಾಬಾಯಿ.

“ಅವಳಿಗೂ ಒಂದು ಲಂಗ ಒಂದು ಅಂಗಿ,” ಎನ್ನುವಳು ಮನೆಯೊಡತಿ.

ಅನೇಕ ಬಾರಿ ರಮಾಬಾಯಿ ಹೇಳಿದ ಭವಿಷ್ಯ ಸತ್ಯವಾಗಿ ಪರಿಣಮಿಸಿ ಅವಳಿಗೆ ಸೀರೆ-ಖಣಗಳೂ ವಿಮಲೆಗೆ ಲಂಗ-ಅಂಗಿಗಳೂ ದೊರಕಿದ್ದುವು. ಒಂದು ಮನೆಯಿಂದ ಇನ್ನೊಂದು ಮನೆಗೆ, ಒಬ್ಬ ಗೃಹಿಣಿಯಿಂದ ಇನ್ನೊಬ್ಬ ಗೃಹಿಣಿಗೆ ರಮಾಬಾಯಿಯ ಜಾಣತನದ ಮಾತು ಮುಟ್ಟಿ ನಗರದ ಪ್ರಸಿದ್ಧ ಮನೆತನಗಳಲ್ಲೆಲ್ಲ ಅವಳಿಗೆ ಲೌಕಿಕ ಪ್ರಾಪ್ತವಾಗಿ, ಬರಬರುತ್ತಾ ಅವಳು ಹತ್ತಿರ ವಿರದಿದ್ದರೆ ಯಾರೂ ಪ್ರಸವಿಸದಂತಾಯಿತು, ಯಾರಲ್ಲಿಯೂ ಮದುವೆ ಮುಂಜಿಗಳಾಗದಂತಾಯಿತು. “ರಮಾಬಾಯಿ ಇದ್ದರೇನೇ ಎಲ್ಲಾ ಚೆನ್ನಾಗಿ ನಡೀತದೆ ನೋಡಿರಿ,” ಎಂದು ಹೇಳುವವರೇ ಎಲ್ಲರೂ.

ವಿಮಲೆಗೆ ಸ್ವಲ್ಪವಾದರೂ ವಿದ್ಯೆ ಕಲಿಸಬೇಕೆಂದು ಅವಳ ತಂದೆ ಆಸೆಯಿಟ್ಟುಕೊಂಡಿದ್ದ. ಮಗಳನ್ನು ವಿದ್ಯಾವತಿಯನ್ನಾಗಿಸುವ ಹಂಬಲ ರಮಾಬಾಯಿಗೂ ಇರದಿರಲಿಲ್ಲ. ತನ್ನ ಜೀವನದ ಎಲ್ಲ ಆಸೆ ಆಕಾಂಕ್ಷೆಗಳನ್ನೂ ಮಗಳಲ್ಲಿಯೇ ಕೇಂದ್ರೀಕರಿಸಿ ಆಕೆ ವಿಮಲೆಯನ್ನು ಶಾಲೆಗೆ ಕಳಿಸಿದ್ದಳು. ವಿಮಲೆಯೂ ಚುರುಕು ಬುದ್ಧಿಯ ಹುಡುಗಿ. ಅಭ್ಯಾಸದಲ್ಲಿ ಮಾತ್ರವಲ್ಲ, ಆಟಪಾಟಗಳಲ್ಲೂ ಸಂಗೀತ ನೃತ್ಯಗಳಲ್ಲೂ ಅವಳು ಪ್ರಗತಿ ಸಾಧಿಸಿದಳು.

ಪ್ರಾಥಮಿಕ ಶಾಲೆಯಿಂದ ಹೈಸ್ಕೂಲಿಗೆ ಅಡಿಯಿಟ್ಟು ಅಲ್ಲಿಯೂ ಜಾಣೆಯೆನ್ನಿಸಿ ಕೊಂಡು ಶಿಕ್ಷಕರ ಮೆಚ್ಚುಗೆಗೆ ಪಾತ್ರಳಾದಳು. ಅವಳ ಬುದ್ಧಿ ಶಕ್ತಿಗೆ ಶೋಭೆ ಯನ್ನುಂಟುಮಾಡುವಂಥ ಸುಂದರ ರೂಪವೂ ಅವಳಿಗಿತ್ತು. ಮನೆಯಲ್ಲೂ ಅವಳಿಗೆ ವಿಶೇಷ ಕೆಲಸವಿರುತ್ತಿರಲಿಲ್ಲ. ಅಡುಗೆ ಕಸ ಮುಸುರೆ ಮೊದಲಾದು ವನ್ನೆಲ್ಲ ತಾಯಿಯೇ ನೋಡಿಕೊಳ್ಳುತ್ತಿದ್ದಳು. ಅಂತೆಯೇ ವಿಮಲೆ ಕೆಲಸ ಗಿತ್ತಿಯ ಮಗಳಾದರೂ ತಕ್ಕಮಟ್ಟಿಗೆ ಸುಖದಲ್ಲಿಯೇ ಬೆಳೆದು ಬಂದಿದ್ದಳು.

ನಾರಾಯಣರಾಯರ ಮನೆಯಲ್ಲಿ ಹಿರಿಯ ಹೆಂಗಸರಿರಲ್ಲಿಲ್ಲವಾದುದ ರಿಂದ ರಮಾಬಾಯಿಯೇ ಅಲ್ಲಿ ಗಣ್ಯವ್ಯಕ್ತಿಯಾಗಿದ್ದಳು. ಅವಳ ಸಲಹೆ ಸೂಚನೆಗಳಿಗೆ ಅಲ್ಲಿ ಯಾವಾಗಲೂ ಬೆಲೆಯಿರುತ್ತಿತ್ತು. ತನ್ನ ಸ್ಥಾನಮಾನ ಗಳನ್ನು ಕಾಯ್ದುಕೊಂಡು ಹೋಗುವುದರಲ್ಲಿ ರಮಾಬಾಯಿಯೂ ಜಾಣೆ. ಬಾಜೀರಾಯರಿಗೆ ಮದುವೆಯಾಗಿ ತಾರಾಬಾಯಿ ಮನೆಗೆ ಬರುತ್ತಲೂ ಒಂದೆರಡು ವಾರಗಳಲ್ಲಿಯೆ ಅವಳ ಪ್ರೀತಿ ವಿಶ್ವಾಸ ಗಳಿಸಿಕೊಂಡು, ಅವಳು ಕರೆಸದಿದ್ದಾಗಲೂ ತಾನೇ ಹೋಗಿ ಅವಳ ತಲೆಗೆ ಎಣ್ಣೆ ಹಚ್ಚುವುದು, ನೀರು ಹಾಕುವುದು, ಜಡೆ ಹೆಣೆಯುವುದೇ ಮೊದಲಾದ ಚಿಕ್ಕಪುಟ್ಟ ಕೆಲಸಗಳನ್ನು ಮಾಡುತ್ತ ಬಂದು ಆ ಮನೆಯಲ್ಲಿ ತನಗಿದ್ದ ಸ್ಥಾನವನ್ನು ಭದ್ರಪಡಿಸಿಕೊಂಡಳು. ವಿಮಲೆಯೂ ಸಹ ತನ್ನ ಬುದ್ಧಿ ಶಕ್ತಿ, ಚುರುಕುತನ, ಸಲುಗೆಯ ವರ್ತನೆ, ಸಂಗೀತದಲ್ಲಿನ ಜಾಣ್ಮೆಗಳಿಂದಾಗಿ ಆ ಮನೆಯವರ ಆತ್ಮೀಯತೆ ಗಳಿಸಿಕೊಂಡಿ ದ್ದಳು. ನಾರಾಯಣರಾಯರ ಕಿರಿಯ ಕುವರಿ ಸುಶೀಲೆಗೂ ವಿಮಲೆಗೂ ಗಾಢ ಸ್ನೇಹ ಬೆಳೆದು ಬಂದಿತ್ತು.

ಹೈಸ್ಕೂಲಿನ ನಾಲ್ಕನೆಯ ತರಗತಿಗೇ ಸುಶೀಲೆ ಶಿಕ್ಷಣಕ್ಕೆ ಶರಣು ಹೊಡೆದಳು. ವಿಮಲೆ ಮಾತ್ರ ಅಷ್ಟಕ್ಕೇ ತೃಪ್ತಿಪಟ್ಟುಕೊಳ್ಳದೆ ವಿದ್ಯಾಭ್ಯಾಸ ವನ್ನು ಮುಂದುವರಿಸಿದಳು. ಶಿಕ್ಷಕರ ದೃಷ್ಟಿಯಲ್ಲಿ ಅವಳು ಜಾಣ ವಿದ್ಯಾರ್ಥಿನಿ ಯಾಗಿ ಕಾಣಿಸಿಕೊಂಡರೆ ವಿದ್ಯಾರ್ಥಿಗಳ ದೃಷ್ಟಿಯಲ್ಲಿ ರತಿಯಾಗಿ ಕಾಣಿಸಿ ಕೊಂಡಳು. ನಗರದ ಯುವಕವೃಂದಕ್ಕೂ ಅವಳೊಬ್ಬಳು ಅಪ್ಸರೆ, ನೃತ್ಯ ವಿಶಾರದೆ, ಗಾನಕೋಕಿಲೆ. ಹೈಸ್ಕೂಲಿನ ಮೇಲಿನ ತರಗತಿಗಳಿಗೇರಿದಂತೆ, ಯುವಕರ ಕಣ್ಮಣಿಯಾದಂತೆ, ತಾಯಿಯ ಹಿತೈಷಿಗಳಿಂದ ದೊರಕುತ್ತಿದ್ದ ಬಟ್ಟೆ ಬರೆಗಳು ಅವಳಿಗೆ ಸಾಲದಾದುವು. ಸೀರೆ ಬೇಕು, ರವಕೆ ಬೇಕು, ಪೌಡರು

ಬೇಕು ಎಂದು ಅವಳು ಪದೇ ಪದೇ ಪೀಡಿಸತೊಡಗುತ್ತಲೂ ರಮಾಬಾಯಿ ಒಂದು ದಿನ ಹೇಳಿದಳು :

“ ಹೀಗೆಲ್ಲಾ ಮಾಡಬಾರದು ವಿಮಲಾ. ನಾವು ಶ್ರೀಮಂತರಲ್ಲ ತಾಯಿ. ನಿಮ್ಮಪ್ಪ ಕಾರಕೂನರಾಗಿದ್ದರು. ನಾನಂತೂ ಅಡಿಗೆಯವಳಾಗಿ ಹೊತ್ತಾಗಿ ದುಡೀತಿದ್ದೀನಿ. ನಾವು ಬಡವರು ಬಡವರ ಹಾಗೇ ಇರಬೇಕಮ್ಮ. ಇಲ್ಲದ ಬಡಿವಾರ ನಮಗ್ಯಾಕೆ? ನಿನ್ನದೊಂದು ಮ್ಯಾಟ್ರಿಕ್ ಆದರೆ ಸಾಕು, ಮದುವೆಯನ್ನೂ ಮುಗಿಸಿಬಿಡೋಣ. ನಾರಾಯಣರಾಯರೂ ಹಾಗೇ ಅಂತಾರೆ.”

ಬಡವರು ಬಡತನ ಎಂಬ ಶಬ್ದಗಳನ್ನು ಕೇಳಿದರೆ ಸಾಕು, ರೋಸಿ ಹೋಗುತ್ತಿತ್ತು ವಿಮಲೆಗೆ. ತನ್ನ ಸೌಂದರ್ಯ, ತನ್ನ ಕಲಾವಂತಿಕೆ, ತನ್ನ ಬುದ್ಧಿವಂತಿಕೆ, ತನ್ನ ಜನಪ್ರಿಯತೆ ಎಂದರೆ ಅವಳಿಗೆ ತುಂಬ ಹೆಮ್ಮೆ. ತನಗೆ ಸರಿಸಮಾನರಾದವರು ಯಾರೂ ಇಲ್ಲವೆಂಬ ಅಹಂಕಾರವೂ ಇತ್ತು. ಅಂತೆಯೆ, ತನ್ನ ಅಂತಸ್ತಿಗೆ ತಕ್ಕ ಬಟ್ಟೆಬರೆಗಳನ್ನು ದೊರಕಿಸಲು ಆಕೆ ಕಾತರಳಾಗಿದ್ದಳು.

“ ಬಡವರು.....ಬಡವರು.....ಬಡವರು.....ನಾವು ಶ್ರೀಮಂತರಂತ ನಾನೇನು ಯಾರ ಮುಂದೂ ಹೇಳುವದಿಲ್ಲ. ಆದರೆ ಹೈಸ್ಕೂಲಿಗೆ ಹೋಗುವವಳಿಗೆ ಸರಿಯಾದ ಬಟ್ಟೆ ಬೇಡವೇನು? ನಿನ್ನ ಹತ್ತಿರ ಏನು ದುಡ್ಡಿಲ್ಲವೇನು? ಒಂದೆರಡು ಸೀರೆ ಕೊಡಿಸಲ್ಲ?” ಎಂದು ವಾದಿಸುವಳು. ರಮಾಬಾಯಿಯೂ ಮತ್ತೆ ವಾದ ಹೂಡುತ್ತಿರಲಿಲ್ಲ. ಪಾಪ, ವಿಮಲೆಯನ್ನು ಬಿಟ್ಟರೆ ಅವಳಿಗಾದರೂ ಯಾರಿದ್ದರು? ಆ ಒಬ್ಬ ಮಗಳೇ ಅವಳ ಸರ್ವಸ್ವ. ಅವರಿವರ ಮನೆಗಳಲ್ಲಿ ಆಕೆ ಬೆವರು ಸುರಿಸುತ್ತಿದ್ದುದು ಆ ಮಗಳಿಗಾಗಿಯೆ ಅಲ್ಲವೆ? ತನ್ನೊಬ್ಬಳ ಹೊಟ್ಟೆಯ ಸಮಸ್ಯೆಯಾಗಿದ್ದರೆ ಹದಿನೆಂಟು ಜನರ ಮನೆಗಳಿಗೆ ಹೋಗಬೇಕಾದ ಅಗತ್ಯವಿರುತ್ತಿರಲಿಲ್ಲ. ನಾರಾಯಣರಾಯರ ಮನೆಯಲ್ಲಿಯೆ ಇದ್ದುಬಿಡಬಹುದಾಗಿತ್ತು. ವಿಮಲೆಯಾದರೂ ತನ್ನ ಆಸೆ ಆಕಾಂಕ್ಷೆ ಬಯಕೆಗಳನ್ನು ತಾಯಿಯ ಹತ್ತಿರ ಹೇಳದೆ ಇನ್ನಾರ ಹತ್ತಿರ ಹೇಳಬೇಕು? ಅಣ್ಣ ತಮ್ಮಂದಿರಿಲ್ಲ, ತಂದೆಯೂ ಇಲ್ಲ. ಪಾಪ, ಅನಾಥೆ....

ಅಂಥ ಯೋಚನೆಗಳೊಡನೆಯೆ ರಮಾಬಾಯಿಯ ಹೃದಯ ಕರಗಿ ಹೋಗುತ್ತಿತ್ತು. ಅವಳು ಒಂದು ತಿಂಗಳ ಕಾಲ ಮೈಮುರಿದು ದುಡಿದು ಗಳಿಸಿದ ಹಣ ಒಂದು ದಿನದಲ್ಲಿ ಒಂದು ಸೀರೆಗಾಗಿ ಕರಗಿಹೋಗುತ್ತಿತ್ತು. ಏನೇ ಆದರೂ

ರಮಾಬಾಯಿ ಬ್ಯಾಂಕಿನಲ್ಲಿನ ಹಣವನ್ನು ಮಾತ್ರ ಮುಟ್ಟಲಿಲ್ಲ. ಆ ಹಣದ ವಿಚಾರ ವಿಮಲೆಗೂ ತಿಳಿದಿದ್ದ ಹಾಗಿರಲಿಲ್ಲ.

ಚೆಲುವೆಯಾಗಿಯೆ ಹುಟ್ಟಬಂದ ಸಾರಸ್ವತ ಹೆಣ್ಣು ವಿಮಲೆ. ಹೈಸ್ಕೂಲಿನ ಐದನೆಯ ತರಗತಿಗೆ ಆಕೆ ಬರುವುದರೊಳಗಾಗಿಯೆ ಅವಳ ಎತ್ತರವಾದ ಬಳ್ಳಿಯಂತೆ ಬಳುಕುವ ಬಂಗಾರ ಬಣ್ಣದ ಶರೀರ ಅವಳಿಗೆ 'ಹೈಸ್ಕೂಲಿನ ರೂಪರಾಣಿ'ಯೆಂಬ ಬಿರುದನ್ನು ತಂದುಕೊಟ್ಟಿತ್ತು. ಹಿರಿಯರ ಅಂಜಿಕೆ ಅಳುಕುಗಳಿಲ್ಲದೆ ಬೆಳೆದುಬಂದವಳಾದುದರಿಂದ ಸಹಜವಾದ ದಿಟ್ಟತನವೂ ಅವಳಲ್ಲಿ ಮನೆಮಾಡಿಕೊಂಡಿತ್ತು. ಹೈಸ್ಕೂಲಿನ ಸ್ತ್ರೀ ವಿಭಾಗದ ಆಟದ ಸ್ಪರ್ಧೆಗಳಲ್ಲಿ, ಗಾಯನ ನರ್ತನ ಭಾಷಣ ಕಾವ್ಯಗಾಯನ – ಅಷ್ಟೇ ಏಕೆ – ಚಿತ್ರಕಲಾ ಸ್ಪರ್ಧೆಯಲ್ಲೂ ಅವಳೇ ಮೊದಲಿಗಳು. ಅಭ್ಯಾಸದಲ್ಲೂ ಅಷ್ಟೆ. ವರುಷ ವರುಷಕ್ಕೂ ಅವಳು ಗೆದ್ದು ತರುತ್ತಿದ್ದ ಪದಕಗಳನ್ನೂ ಕಪ್ಪುಗಳನ್ನೂ ಪ್ರಶಸ್ತಿ ಪತ್ರಿಕೆಗಳನ್ನೂ ಕಂಡು ರಮಾಬಾಯಿಗೂ ಅಭಿಮಾನವೆನ್ನಿಸುತ್ತಿದ್ದಿತಾದರೂ ಆಟಗಾರಿಕೆಯಲ್ಲಿ ಮಗಳು ತೋರಿಸುವ ಅತ್ಯಾಸಕ್ತಿ ಮಾತ್ರ ಅವಳಿಗೆ ಹಿಡಿಸುತ್ತಿರಲಿಲ್ಲ

"ವಿಮಲಾ, ಓಡುವದು ಜಿಗಿಯುವದು ಮಾಡಲು ನೀನೇನು ಗಂಡಸೇನೇ? ನಾಟಕದಲ್ಲಿ ಪಾತ್ರ ಮಾಡುವದೂ ಚಲೋದಲ್ಲ. ನೀನು ಗಂಡುರಾಮಿ ಅಂತ ನಿನ್ನ ಯಾರೂ ಮದುವೆಯಾಗಲು ಬರಲಿಕ್ಕಿಲ್ಲವ್ವಾ," ಎಂದು ತಾಯಿಯೆಂದಾಗಲೆಲ್ಲ ವಿಮಲೆ ಮೂಗು ಮುರಿದು ಹೇಳುವಳು:

"ನನಗೆ ಗಂಡುರಾಮಿ ಅಂತ ಅನ್ನುವ ಗಂಡಸುತನವಾದರೂ ಯಾರದು? ಆಟ ಓಟ ಅಂದರೇನು ಗಂಡಸರು ಗುತ್ತಿಗೆ ಹಿಡಿದಾರೇನು ಅವ್ವಾ? ಝಾಂಸಿ ಲಕ್ಷ್ಮೀಬಾಯಿ ಅಂದರೆ ನಿನಗೆ ಗೊತ್ತಿಲ್ಲವೇನು? ಅವರೂ ಚಿಕ್ಕವರಿದ್ದಾಗಿನಿಂದ ಗಂಡಸರ ಆಟ ಆಡಿದ್ದರು, ಕತ್ತಿ ತಿರುಗಿಸುವದನ್ನೂ ಕುದುರೆ ಏರುವದನ್ನೂ ಕಲಿತುಕೊಂಡಿದ್ದರು. ಬ್ರಿಟಿಷರ ವಿರುದ್ಧ ಯುದ್ಧ ಮಾಡಿ ಸ್ವತಃ ಸೇನಾಪತಿಯಾಗಿ ಹೋರಾಡಿದರು. ಅವರೇನು ಗಂಡುರಾಮಿಗಳೇ? ಅವ್ವಾ. ನೀನು ಹಳೇಕಾಲದವಳು. ಈ ಕಾಲ ಬೇರೆ. ರೀತಿನೀತಿ ಬೇರೆ. ಓಡುವ ಸ್ಪರ್ಧೆಗೆ ಈ ಸಲ ನಾನು ಗಂಡುಹುಡುಗರ ಸಂಗಡ ಹೋರಾಡಬೇಕಂತ ಇದೀನಿ.

ಅವರನ್ನೆಲ್ಲಾ ನಾನು ಹಿಂದೆ ಹಾಕುವದರಲ್ಲಿ ಏನೂ ಸಂಶಯವಿಲ್ಲ. ಆದರಿಂದ ಗಂಡಸು ಜಾತಿಗೇ ಅವಮಾನವಾಗುತ್ತದಲ್ಲವೇನು? ಅದನ್ನ ತಪ್ಪಿಸಬೇಕಂತಲೇ ಗಂಡಸರಿಗೆ ಹೆಂಗಸರಿಗೆ ಬೇರೆ ಬೇರೆ ಸ್ಪರ್ಧೆ ಇಡುತ್ತಾರೆ, ಧೂರ್ತ ಗಂಡಸರು. ಹಿಂದಿನ ವರ್ಷದ ಸ್ಪರ್ಧೆಗಳ ಕಾಲಕ್ಕೂ ಹದಿನಾರು ವರ್ಷದ ಕೆಳಗಿನ ವಿದ್ಯಾರ್ಥಿನಿಯರ ಓಟದ ಸ್ಪರ್ಧೆಯಲ್ಲಿ ನಾನೇ ಚಾಂಪಿಯನ್ ಆಧೆನಲ್ಲ? ಗಂಡುಹುಡುಗರಲ್ಲಿ ಪಾಟೀಲ ಎಂಬ ವಿದ್ಯಾರ್ಥಿ ಮೊದಲು ಬಂದಿದ್ದ. ಅವನ ಓಟದ ವೇಳೆಗೂ ನನ್ನ ಓಟದ ವೇಳೆಗೂ ಹೋಲಿಸಿ ನೋಡಿದಾಗ ಅವನಿಗಿಂತ ನಾನೇ ಬೇಗ ಓಡಿದ್ದು ಗೊತ್ತಾಯಿತು. ಅವ್ವಾ, ನನಗೆ ಹೊಟ್ಟೆ ಉರೀತದೆ. ಸ್ತ್ರೀ ಪುರುಷರೆಲ್ಲಾ ಸಮಾನರು ಅಂತ ಬಾಯಲ್ಲಿ ಹೇಳುತಾರೆ. ಕೃತಿಯಲ್ಲಿ ಮಾತ್ರ ಯಾವಾಗಲೂ ಇಂಥಾ ಭೇದಭಾವ. ಗಂಡಸರಂದರೇ ಹೀಗೇ," ಎಂದು ಮೊದಲಾಗಿ ಒಂದು ದೊಡ್ಡ ಉಪನ್ಯಾಸವನ್ನೇ ಕೊಟ್ಟುಬಿಡುವಳು ವಿಮಲೆ.

ರಮಾಬಾಯಿಗೆ ಮಾತ್ರ ಇದಾವುದೂ ಹಿಡಿಸುತ್ತಿರಲಿಲ್ಲ. ಇವಳು ತನ್ನಂಥ ಬಡವಿಯ ಹೊಟ್ಟೆಯಲ್ಲಿ ಹುಟ್ಟಬಾರದಾಗಿದ್ದಿತೆಂದುಕೊಂಡು ತನ್ನ ಕೆಲಸಕ್ಕೆ ಹೊರಟುಹೋಗುವಳು.

ಪ್ರತಿದಿನವೂ ಬೆಳಿಗ್ಗೆ ಎದ್ದೊಡನೆ ಸೂರ್ಯನಮಸ್ಕಾರ ಹಾಕುವುದು ವಿಮಲೆಯ ಕಟ್ಟುನಿಟ್ಟಿನ ನಿಯಮವಾಗಿತ್ತು. ಸೀರೆಯನ್ನು ತಿರುವಿ ಗಂಡು ಗಚ್ಚೆ ಬಿಗಿದು ಅವಳು ಸೂರ್ಯನಮಸ್ಕಾರಕ್ಕೆ ತೊಡಗುತ್ತಲೂ ರಮಾಬಾಯಿ ಕೌತುಕದಿಂದ ಕಣ್ಣು ಬಿಟ್ಟುಕೊಂಡು ಮಗಳನ್ನು ದಿಟ್ಟಿಸುತ್ತ ನಿಲ್ಲುವಳು.

"ನೀನೇನು ಕುಸ್ತಿ ಹಿಡಿಯುವಾಕೆಯೇನೇ ವಿಮಲಾ? ನಿನಗ್ಯಾಕೆ ಇದೆಲ್ಲಾ?" ಎಂದು ರಮಾಬಾಯಿ ಒಂದು ಬಾರಿ ಅಂದು ನಕ್ಕುಬಿಟ್ಟಾಗ ವಿಮಲೆ ಮುನಿದುಕೊಂಡು ಎರಡು ದಿನ ಊಟವನ್ನೂ ತ್ಯಜಿಸಿ, ತಾಯಿಯ ಬಾಯಿಯಿಂದ ಮತ್ತೆಂದೂ ಅಂಥ ಮಾತು ಹೊರಬೀಳದಂತೆ ಮಾಡಿಬಿಟ್ಟಿದ್ದಳು.

ಅವಳ ಶಾಲೆಯಲ್ಲಿನ ತರುಣ ಶಿಕ್ಷಕರೂ ಪ್ರೌಢ ವಿದ್ಯಾರ್ಥಿಗಳೂ ಅವಳ ಸ್ನೇಹವನ್ನು ಬಯಸುತ್ತಿದ್ದರಾದರೂ ಇತರ ಹುಡುಗಿಯರನ್ನು ಪೀಡಿಸುವಂತೆ ಅವಳನ್ನೆಂದೂ ಪೀಡಿಸುತ್ತಿರಲಿಲ್ಲ. ಅವಳಿಗಾದರೋ ಗಂಡುಹುಡುಗರೆಂದರೆ ಒಂದು ಬಗೆಯ ತಿರಸ್ಕಾರ. "ಏನು ಗಂಡುಗಳು! ನನ್ನೊಡನೆ ಓಟದ

ಸ್ಪರ್ಧೆಗೂ ಹಿಂಜರಿಯುವ ಹೇಡಿಗಳು!" ಎಂದು ಆಕೆ ಅತ್ಯಂತ ತಾತ್ಸಾರದಿಂದ ಆಗಾಗ ಹೇಳುವುದಿತ್ತು. ಅಧಿಕ ಪ್ರಸಂಗಕ್ಕೆ ನಿಲ್ಲುವ ಹುಡುಗರಿಗೆ ಅನೇಕ ಬಾರಿ ಛೀ ಥೂ ಎಂದು ಮಂಗಳಾರತಿಯನ್ನೂ ಮಾಡಿದ್ದಳು. ಅಂತೆಯೆ ಅವಳನ್ನು ಕಂಡರೆ ಎಲ್ಲರೂ ಹೆದರುತ್ತಿದ್ದರು.

ವಿಮಲೆಯ ದಿನಚರಿಯೂ ಕ್ರಮಬದ್ಧವಾದುದು. ಬೆಳಗಿನ ನಾಲ್ಕು ಗಂಟೆಗೇ ಎದ್ದು ಎರಡು ತಾಸುಗಳ ತನಕ ಅಭ್ಯಾಸ ಮಾಡುವುದು. ಅನಂತರ ಅರ್ಧ ತಾಸು ವ್ಯಾಯಾಮ. ಸ್ನಾನ, ಪೂಜೆ, ಚಹ, ಅಷ್ಟರಲ್ಲಿ ರಮಾಬಾಯಿ ಮನೆಯ ಅಡುಗೆ ಮುಗಿಸಿ ಕೆಲಸಕ್ಕೆ ಹೊರಡುವಳು. ವಿಮಲೆ ತಾನೇ ಬಡಿಸಿಕೊಂಡು ಊಟಮಾಡಿ ಶಾಲೆಗೆ ಹೋಗುವಳು. ಸಾಯಂಕಾಲ ಏಳು ಗಂಟೆಗೆ ಆಟಪಾಟಗಳನ್ನು ಮುಗಿಸಿ ಮನೆ ಸೇರಿ, ಬಟ್ಟೆ ಬದಲಿಸಿ, ದೀಪ ಹೊತ್ತಿಸಿ ಅಭ್ಯಾಸಕ್ಕೆ ಕೂಡುವಳು. ಅಷ್ಟರಲ್ಲಿ ರಮಾಬಾಯಿಯೂ ನಿತ್ಯದ ಕೆಲಸ ಮುಗಿಸಿಕೊಂಡು ಮನೆಗೆ ಬಂದು ಅಡುಗೆ ಮಾಡುವಳು. ಊಟವಾದ ನಂತರ ಮತ್ತೆ ಒಂದು ತಾಸು ಅಭ್ಯಾಸ. ಒಂಭತ್ತು ಗಂಟೆಗೆ ಸರಿಯಾಗಿ ದೀಪ ಆರಿಸಿ ಮಲಗಿಬಿಡುವರು. ಈ ನಿಯಮಿತತನದಿಂದಾಗಿ ಅವರಿಬ್ಬರಲ್ಲೂ ಅಚ್ಚು ಕಟ್ಟುತನವೂ ಶಿಸ್ತೂ ಮನೆಮಾಡಿಕೊಂಡಿದ್ದುವು.

ವಿಮಲೆ ದೊಡ್ಡವಳಾದ ಹಾಗೆ, ಶಾಲೆಯಲ್ಲಿನ ಎಲ್ಲ ಪ್ರಥಮ ಸ್ಥಾನ ಗಳನ್ನು ದೊರಕಿಸುತ್ತ ಹೋದ ಹಾಗೆ ತನ್ನ ಚಟುವಟಿಕೆಗಳಿಗಾಗಿ ಶಾಲೆಯ ಸಂಕುಚಿತ ಕ್ಷೇತ್ರ ಸಾಲದೆಂದೇ ಅವಳಿಗೆನ್ನಿಸತೊಡಗಿತು. ಸಾರ್ವಜನಿಕ ಕ್ಷೇತ್ರದಲ್ಲೂ ಅಡಿಯಿರಿಸಿ ಸ್ತ್ರೀಯರ ಕಾರ್ಯಕಲಾಪಗಳಲ್ಲೆಲ್ಲ ಭಾಗವಹಿಸು ವುದಕ್ಕಾರಂಭಿಸಿದಳು. ಆ ಕ್ಷೇತ್ರದಲ್ಲಿ ಮಾತ್ರ ತನ್ನ ವಿದ್ಯಾಬುದ್ಧಿಗಳ ಅಲ್ಪತೆ ಎದ್ದು ಕಾಣಿಸಿತು. ಅದರಿಂದಾಗಿ ಅವಳಿಗೆ ವ್ಯಸನವಾಯಿತಾದರೂ ಅವಳು ಅಷ್ಟರಿಂದ ಧೈರ್ಯಗೆಡದೆ ತನ್ನ ಸಾಧನೆಯನ್ನು ಬಲಗೊಳಿಸಿದಳು. ಸಂಗೀತ ದಲ್ಲಿ ಹೆಚ್ಚಿನ ಪ್ರಾವೀಣ್ಯತೆ ಪಡೆಯಲು ತನ್ನದೇ ಆದುದೊಂದು ಹಾರ್ಮೋನಿಯಂ ಅತ್ಯವಶ್ಯವೆಂದು ತೋರುತ್ತಲೂ ಅದಕ್ಕಾಗಿ ತಾಯಿಯ ಹತ್ತಿರ ಹಟ ಹಿಡಿದಳು. ನಾರಾಯಣರಾಯರ ಕೃಪೆಯಿಂದ ಅದೂ ಸಾಧ್ಯವಾಯಿತು. ಈ ವೇಳೆಗೇ ಅವಳು ಸುಮಿತ್ರಾದೇವಿಯ ಗುಂಪಿಗೆ ಸೇರಿ ಸಂಗೀತ ನೃತ್ಯಗಳನ್ನು ಮನಮುಟ್ಟಿ ಅಭ್ಯಸಿಸಿದಳು. ನಗರದ ಹಲವೆಡೆಗಳಲ್ಲಿ ನಡೆದ ವಿಶೇಷ ಸಮಾರಂಭಗಳ

ಕಾಲಕ್ಕೆ ಹಾಡುವ ನರ್ತಿಸುವ ಅವಕಾಶಗಳೂ ಅವಳಿಗೆ ಲಭಿಸಿದುವು. ಅವಳು ನೃತ್ಯದೇವತೆಯಾಗಿ ಗಾನಕೋಕಿಲೆಯಾಗಿ ರಸಿಕರ ಆರಾಧ್ಯದೇವತೆಯಾದಳು. ಅವಳ ಹಾಡು ಕೇಳಿದವರನೇಕರು, "ಗಂಗೂಬಾಯಿಯ ತರುವಾಯ ಅವಳ ಪಟ್ಟಕ್ಕೆ ಬರುವಾಕೆ ಇವಳೇ," ಎಂದದ್ದೂ ಉಂಟು. ಅದರಿಂದ ವಿಮಲೆಗೆ ಸಂತೋಷವಾದರೂ ಸೊಕ್ಕು ಬರಲಿಲ್ಲ. ಅದರಿಂದ ಗಂಗೂಬಾಯಿಯೆ ತನ್ನ ಗುರುವೆಂದು ತಿಳಿದು ಅವರ ಭಾವಚಿತ್ರವೊಂದನ್ನು ದೊರಕಿಸಿ ಅದಕ್ಕೆ ಕನ್ನಡಿ ಕಟ್ಟು ಕೂಡಿಸಿ ಮನೆದೇವರುಗಳ ಮಧ್ಯೆ ಇಟ್ಟು ಪೂಜಿಸತೊಡಗಿದಳು. ಗಂಗೂಬಾಯಿಯವರಿಂದ ಪ್ರತ್ಯಕ್ಷವಾದ ರೀತಿಯಲ್ಲಿ ಶಿಕ್ಷಣ ದೊರಕುವುದು ಸಾಧ್ಯವೇ ಇರಲಿಲ್ಲ. ಅಂತೆಯೆ, ಅವರ ಭಾವಚಿತ್ರವೆ ವಿಮಲೆಗೆ ಸ್ಫೂರ್ತಿಯನ್ನೊದಗಿಸತೊಡಗಿತು. ಅವರ ಗ್ರಾಮಫೋನ್ ರಿಕಾರ್ಡುಗಳನ್ನೂ ರೇಡಿಯೋ ಕಾರ್ಯಕ್ರಮಗಳನ್ನೂ ಮತ್ತೆ ಮತ್ತೆ ಕೇಳಿ ಪಾಠ ಮಾಡಿಕೊಂಡು ಆ ವಿಶಿಷ್ಟ ರಾಗತಾಳಗಳನ್ನು ಬೇರೆಯವುಗಳೊಡನೆ ಹೋಲಿಸಿನೋಡಿ ಅವುಗಳಲ್ಲಿನ ಅಂತರವನ್ನರಿಯಲು ಯತ್ನಿಸಿದಳು, ಗಂಗೂಬಾಯಿಯವರಂತೆಯೇ ತಾನೂ ಒಂದಿಲ್ಲೊಂದು ದಿನ ಅಖಿಲ ಭಾರತ ಖ್ಯಾತಿಯ ಗಾಯಿಕೆಯಾಗಿಯೇ ತೀರುವುದಾಗಿ ನಿರ್ಧರಿಸಿದಳು.

ಅಷ್ಟರಲ್ಲಿಯೆ ಅವಳ ಮ್ಯಾಟ್ರಿಕ್ ಪರೀಕ್ಷೆಯೂ ಮುಗಿದುಹೋಗಿ ಅದರಲ್ಲೂ ಅವಳು ಮೇಲ್ತರಗತಿಯಲ್ಲಿ ತೇರ್ಗಡೆ ಹೊಂದಿದಳು. ಕಾಲೇಜಿಗೆ ಹೋಗುವ ಆಸೆಯಂತೂ ಬಲವತ್ತರವಾಗಿತ್ತು. ತನ್ನಂಥ ಜಾಣೆ ಕಾಲೇಜಿಗೆ ಹೋಗದಿದ್ದರೆ ಅದೊಂದು ಹಾಸ್ಯಾಸ್ಪದ ಸಂಗತಿಯೇ ಅಲ್ಲವೇ?

"ಮ್ಯಾಟ್ರಿಕ್ ಆಯಿತಲ್ಲ. ಇನ್ನು ಸಾಕು. ಕಾಲೇಜಿನ ಶಿಕ್ಷಣಕ್ಕೆ ರೂಪಾಯಿ ಎಲ್ಲಿಂದ ತರಲಿ?" ಎಂದಳು ತಾಯಿ.

"ಮನೆಯೊಳಗೆ ಖಾಲಿ ಕೂತುಕೊಂಡಾದರೂ ನಾನೇನು ಮಾಡಲಿ?" ಎಂದು ಮಗಳು ವಾದಿಸಿದಳು.

"ಎಲ್ಲಾದರೂ ವರ ಹುಡುಕುತೀನಿ. ಮದುವೆಯಾಗಿ ಸಂಸಾರಮಾಡು," ಎಂದಳು ತಾಯಿ.

"ಊಹೂಂ. ನಾನಿನ್ನೂ ಕಲೀಬೇಕು. ಬಿ.ಎ. ಆದರೂ ಮಾಡಬೇಕು – ಅದುವರೆಗೂ ಮದುವೆಯ ಮಾತೇ ಇಲ್ಲ," ಎಂದಳು ಮಗಳು.

ಆ ವೇಳೆಗಾಗಲೆ ನಾರಾಯಣರಾಯರು ತೀರಿಕೊಂಡಿದ್ದರು. ತಾಯಿ ಮಕ್ಕಳ ವಾದ ಬಾಜೀರಾಯರೆದುರಿಗೆ ಬಂತು.

ತಮ್ಮ ಚಾಳದಲ್ಲಿಯೇ ಇದ್ದು ತಮ್ಮ ಮನೆಯಲ್ಲಿಯೂ ಓಡಾಡಿಕೊಂಡಿದ್ದ ವಿಮಲೆಯನ್ನು ಬಾಜೀರಾಯರು ಅದುವರೆಗೂ ಅಷ್ಟು ಸಮೀಪದಿಂದ ನೋಡಿರಲಿಲ್ಲ. ಅವಳ ನಿಲುವು, ರೂಪ, ಲಾವಣ್ಯ, ಬೆಡಗು, ಅವಳ ದಿಟ್ಟತನ ಗಳನ್ನು ಕಂಡು ಅವರು ಬೆರಗುಗೊಂಡರು. ಮೇರಿಯ ತರುವಾಯ ಯಾವ ಹೆಣ್ಣೂ ಹೀಗೆ ಅವರ ಮನಸ್ಸನ್ನಾಕರ್ಷಿಸಿಕೊಂಡಿರಲಿಲ್ಲ. ಅವರ ವಿಚಾರಶಕ್ತಿ ಎಲ್ಲೋ ಅದೃಶ್ಯವಾದಂತಾಯಿತು. ತಾಯಿಮಕ್ಕಳು ಯಾವ ಸಂಕೋಚವೂ ಇಲ್ಲದೆ ವಕೀಲರೆದುರಿಗೆ ವಾದ ಮಾಡುತ್ತಲಿದ್ದರು. ವಕೀಲರು ಮಾತ್ರ ಒಂದು ಮಾತನ್ನೂ ಆಡಬಾರದವರಾಗಿ ನ್ಯಾಯಾಧೀಶರಂತೆ ಗಂಭೀರವಾಗಿ ಕುಳಿತು ಕೊಂಡಿದ್ದರು. ಅವರಿಬ್ಬರೂ ಮಾತನಾಡುತ್ತಿದ್ದುದೇನೆಂಬುದೂ ಅವರಿಗೆ ತಿಳಿಯಲಿಲ್ಲ. ಕೊನೆಗೆ ವಿಮಲೆಯೇ ಕೇಳಿದಳು:

"ಏನಂತೀರಿ ವಕೀಲರೆ? ನಾನು ಕಾಲೇಜಿಗೆ ಹೋಗಲೋ ಬೇಡವೋ?

ಆಗ ಕೊಂಚ ಪ್ರಜ್ಞೆ ಬಂತು ವಕೀಲರಿಗೆ.

"ಯಾರು ಹೇಳಿದರು ಬೇಡ ಅಂತ. ಅವಶ್ಯ ಹೋಗು."

"ಅದಾಯಿತು ವಕೀಲರೆ. ನಾವಂತೂ ಬಡವರು." ರಮಾಬಾಯಿ ಆಕ್ಷೇಪಿಸತೊಡಗಿದಳು: "ಕಾಲೇಜಿನ ಖರ್ಚು ಅಷ್ಟಿಷ್ಟೇ? ಅಡಿಗೆಯ ತೊತ್ತು ನಾ ಅಷ್ಟು ತರುವದೆಲ್ಲಿಂದ? ಈಗ ಇವಳು ಕಲಿತಷ್ಟೆ ಸಾಕು. ಎಲ್ಲಾದರೂ ಒಬ್ಬ ಬಡ ಹುಡುಗನ್ನ ಗೊತ್ತುಮಾಡಿ ಮದುವೆ ಮುಗಿಸಿ ಕಣ್ಣು ಮುಚ್ಚಿ ಕೊಳ್ತೀನಿ."

"ರಮಾಬಾಯಿ, ವಿಮಲೆ ಅಂಥಿಂಥ ಹುಡುಗಿಯಲ್ಲ. ಇವಳು ಫಸ್ಟ್ ಕ್ಲಾಸ್ ಗ್ರ್ಯಾಜುಯೇಟ್ ಆದಾಳು. ವಿಶ್ವವಿದ್ಯಾಲಯಗಳ ಆಟಗಳಲ್ಲಿ ಚಾಂಪಿಯನ್ ಆದಾಳು. ಜಾಗತಿಕಸುಂದರಿಯರ ಸ್ಪರ್ಧೆಯಲ್ಲಿ ಭಾರತದ ಪ್ರತಿನಿಧಿಯಾದಾಳು. ಇಂಥ ರತ್ನವನ್ನ ಯಾವನಾದರೊಬ್ಬ ನಿರ್ಗತಿಕನಿಗೆ ಕಟ್ಟುವದೇ? ಛೆ. ಛೆ. ನೀವು ನಿಶ್ಚಿಂತರಾಗಿರಿ. ನಾನೆಲ್ಲಾ ವ್ಯವಸ್ಥೆ ಮಾಡುತ್ತೀನಿ ಖರ್ಚಿನದು," ಎಂದು ಹೇಳಿ ಬಾಜೀರಾಯರು ರಮಾಬಾಯಿ ಯನ್ನು ಸಮಾಧಾನಗೊಳಿಸಿದರು.

ದೇಶಪಾಂಡೆಯವರ ಮನೆತನದ ವಿಚಾರವಾಗಿ ಎಂದಿನಿಂದಲೂ ಆದರ ಭಾವವಿರಿಸಿಕೊಂಡು ಬಂದಿದ್ದ ರಮಾಬಾಯಿ ಬಾಜೀರಾಯರ ಮಾತನ್ನು ಮೀರುವಂತಿರಲಿಲ್ಲ.

ವಿಮಲೆ ಕಾಲೇಜು ಸೇರಿದುದೂ ಆಯಿತು. ಅವಳ ಫೀಯ ಹಣ ಕೊಟ್ಟುದುದಲ್ಲದೆ ಸೀರೆ, ರವಕೆ, ಪುಸ್ತಕ ಮೊದಲಾದುವುಗಳಿಗಾಗಿಯೂ ವಕೀಲರೇ ನೆರವು ನೀಡಿದರು. ದೇಶಪಾಂಡೆ ಮನೆತನದವರ ಸಹಾಯವನ್ನು ಎಂದಿನಿಂದಲೂ ಸ್ವೀಕರಿಸುತ್ತ ಬಂದಿದ್ದುದರಿಂದ ಈಗಲೂ ಅವರ ನೆರವನ್ನು ಸ್ವೀಕರಿಸಲು ವಿಮಲೆಗೆ ಸಂಕೋಚವೇನೂ ಆಗಲಿಲ್ಲ. ತನಗೆ ಹಣ ಬೇಕೆನ್ನಿಸಿದಾಗಲೆಲ್ಲ ಆಕೆ ಸಂಕೋಚವಿಲ್ಲದೆ ಬಂದು ಬಾಜೀರಾಯರನ್ನು ಕೇಳುತ್ತಿದ್ದಳು. ಅವರೂ ಕೂಡ, ಅವಳು ಹತ್ತು ಕೇಳಿದಾಗ ಇಪ್ಪತ್ತು ಕೊಟ್ಟು ಕಳಿಸುತ್ತಿದ್ದರು. ಅವರಿಬ್ಬರ ಒಡನಾಟ ಹೆಚ್ಚಿದ ಹಾಗೇ ಸಲುಗೆಯೂ ಬೆಳೆಯುತ್ತ ಬಂತು. ಆದರೂ ವಕೀಲರು ಸಲ್ಲದ ಕೃತ್ಯಕ್ಕೆ ಮಾತ್ರ ತೊಡಗಲಿಲ್ಲ. ಅವರ ಹೃದಯದ ಮೇಲಿದ್ದ ತಾರಾಬಾಯಿಯ ಪ್ರಭಾವವೇ ಆ ಸಂಯಮಕ್ಕೆ ಮುಖ್ಯ ಕಾರಣವೆಂದು ಹೇಳಬೇಕು.

## ಹದಿಮೂರು....　　　　ಗಾಂಧೀಸದನ

"ವಿಮಲಾಬಾಯಿಯ ನರ್ತನ? ಅಭ್ರಾಟ್ ಆಗುತದೆ ಬಿಡಿರಿ," ಎಂದ ಬಸಲಿಂಗ.

ಅದು 'ಅಭ್ರಾಟ್' ಆಗುವ ವಿಚಾರವಾಗಿ ಬಾಜೀರಾಯರಿಗೂ ಅನುಮಾನವಿರಲಿಲ್ಲ.

ವಾಸ್ತವವಾಗಿ ಆದುದೂ 'ಅಭ್ರಾಟ್' ಆಗಿಯೇ.

ಕೈಯಲ್ಲಿ ಹಣವಿರುವಾಗ ಕಟ್ಟಡ ಸಿದ್ಧವಾಗಲು ತಡವಾಗುತ್ತದೆಯೆ? ಮೂರೇ ಮೂರು ತಿಂಗಳುಗಳ ಅವಧಿಯಲ್ಲಿ ಹೊಸ ಮಾದರಿಯ ಮನೆಗಳ ನ್ನೊಳಗೊಂಡ ದೊಡ್ಡ 'ಚಾಳ' ಎದ್ದುನಿಂತಿತು ಬಯಲಿನಲ್ಲಿ. ಅಂಗಳದಲ್ಲಿ ಬಾವಿ, ಕಕ್ಕಸುಗಳೂ ನಿರ್ಮಿತವಾದುವು. ವಿದ್ಯುದ್ದೀಪದ ಜೋಡಣೆಯೂ ಮುಗಿಯಿತು.

"ಈ ಚಾಳಕ್ಕೇನು ಹೆಸರಿಡೋಣ ಬಸಲಿಂಗಾ?" ಎಂದು ಬಾಜೀ ರಾಯರು ಕೇಳಿದರು.

"ನನಗೇನು ತಿಳೀತೈತ್ರೀ ಹಳ್ಳಿಯವಗೆ? ನೀವೇನು ಇಡಬೇಕಂತ ವಿಚಾರ ಮಾಡೀರಿ?"

"ಬಹಳ ದಿನದಿಂದ ವಿಚಾರ ಮಾಡಿ ಮಾಡಿ ಗಾಂಧೀಜಿಯವರ ಹೆಸರನ್ನೇ ಇಡಬೇಕಂತ ಮನಸಿನಲ್ಲಿ ಬಂದದೆ. ಅಂಥ ಮಹಾತ್ಮರ ಹೆಸರಿಟ್ಟರೆ ಅವರಿಗೂ ಮರ್ಯಾದೆ ನಮಗೂ ಮರ್ಯಾದೆ. ಆ, ಏನಂತೀ?"

"ಅಭ್ರಾಟ್ ವಿಚಾರ ಬಿಡಿರಿ ವಕೀಲರೆ," ಎಂದ ಬಸಲಿಂಗ.

ಮಶೀರಾ ಮಾರಾಟದಿಂದ ಬಂದ ಹಣದಿಂದ ಕಟ್ಟಸಲ್ಪಟ್ಟ ಆ ಚಾಳಕ್ಕೆ 'ಗಾಂಧೀಸದನ'ವೆಂಬ ಹೆಸರು ಬಂದುದು ಹಾಗೆ!

ಚಾಳದ ಹೆಬ್ಬಾಗಿಲಿನೆದುರಿಗೆ ತೂಗಹಾಕಲು ದೊಡ್ಡದೊಂದು ಹಲಗೆ ಯನ್ನು ಬರೆಸಿದುದಾಯಿತು.

ಕಲೆಕ್ಟರರಿಂದ ಆರಂಭೋತ್ಸವ. ಆಮಂತ್ರಣ ಪತ್ರಿಕೆಗಳೂ ಅಚ್ಚಾಗಿ ಸಿದ್ಧವಾದುವು. ಬಾಜೀರಾಯರೇ ಹೋಗಿ ಕಲೆಕ್ಟರರಿಗೂ ಡಿ.ಎಸ್.ಪಿ. ಯವರಿಗೂ ಹೇಳಿ ಬಂದರು. ನಗರದ ಗಣ್ಯವ್ಯಕ್ತಿಗಳಿಗೆಲ್ಲ ಆಮಂತ್ರಣ ಹೋಯಿತು. ಭೋಜನ ಸಮಾರಂಭದ ಸಿದ್ಧತೆಗಾರಂಭವಾಯಿತು. ಸುಮಿತ್ರೆಯ ಸಹಕಾರದಿಂದ ವಿಮಲೆ ಒಂದು ನೂತನ ನೃತ್ಯವನ್ನು ಅಣಿಗೊಳಿಸಿದಳು.

ನಿಶ್ಚಿತಗೊಳಿಸಿದ ದಿನವೂ ಬಂತು. ಮನೆಗಳಿಗೆಲ್ಲ ಸುಣ್ಣ ಬಣ್ಣ ಬಳಿದು ಸಿಂಗರಿಸಲಾಗಿತ್ತು. ಅವುಗಳೆದುರಿಗೆ ತುಸು ಬಯಲು ಜಾಗ. ಅಲ್ಲಿ ಇನ್ನೂ ಎಂಟು ಹತ್ತು ಮನೆಗಳನ್ನು ಕಟ್ಟಿಸಲು ಅವಕಾಶವಿತ್ತು. ಆ ಬಯಲಿನ ನಡುವೆಯೇ ಸಿಹಿ ನೀರಿನ ಬಾವಿ. ಓರೆಕೋರೆ ನಗರದಲ್ಲಿನ ನೀರಿನ ತೊಂದರೆ ಯನ್ನು ಈ ಚಾಳದ ನಿವಾಸಿಗಳು ಅನುಭವಿಸುವ ಅಗತ್ಯವಿರಲಿಲ್ಲ. ನಲ್ಲಿಯ ನೀರು ಸಿಕ್ಕಿದರೂ ಅಷ್ಟೆ, ಸಿಕ್ಕದಿದ್ದರೂ ಅಷ್ಟೆ. ಸಿಹಿನೀರಿನ ಬಾವಿಯೇ ಚಾಳ ದಲ್ಲಿರುವಾಗ ನಲ್ಲಿಯ ನೀರಿಗಾಗಿ ಬಾಯಿ ಬಿಟ್ಟುಕೊಂಡು ಕೂಡುವವರಾದರೂ ಯಾರು ?

ಆರಂಭೋತ್ಸವದ ನಿಮಿತ್ತವಾಗಿ ಅಲ್ಲಿಂದ ಇಲ್ಲಿಂದ ಹೂವಿನ ಕುಂಡಗಳನ್ನು ತಂದು ಸಾಲುಸಾಲಾಗಿ ಇರಿಸಲಾಗಿತ್ತು. ತಳಿರು – ತೋರಣ, ಬಣ್ಣ ಬಣ್ಣಗಳ ಕಾಗದದ ಹೂವಿನ ಮಾಲೆಗಳು, 'ಫರಫರಿಗಳು' ಹಾರಾಡುತ್ತಿದ್ದುವು. ಮುಂಭಾ ಗದ ಹೆಬ್ಬಾಗಿಲನ್ನು ಮುಚ್ಚಲಾಗಿತ್ತು. ಅದಕ್ಕೆ ಕಟ್ಟಿದ ಜರಿಯ ದಾರವನ್ನು ಕಲೆಕ್ಟರರು ಕತ್ತರಿಸಿ ಒಳಬಂದಾಗಲೇ ಕಟ್ಟಡದ ಉದ್ಘಾಟನೆಯಾದ ಹಾಗೆ. ಅತಿಥಿಗಳನ್ನು ಹಿಂಭಾಗದ ಬಾಗಿಲಿನಿಂದ ಬರಮಾಡಿಕೊಳ್ಳಲಾಗುತ್ತಿತ್ತು.

ಉಚ್ಚದರ್ಜೆಯ ಅಧಿಕಾರಿಗಳು ಮತ್ತು ಗಣ್ಯವ್ಯಕ್ತಿಗಳಿಗಾಗಿ ನೂರಾರು ಕುರ್ಚಿಗಳನ್ನು ತರಿಸಿ ಇಡಿಸಲಾಗಿತ್ತು. ಉಳಿದ 'ಸಣ್ಣಪುಟ್ಟ' ಜನರಿಗಾಗಿ ಗುಡಾರ ಹಾಸಿತ್ತು. ವಿಮಲೆಯ ನೃತ್ಯ ಕಾರ್ಯಕ್ರಮಕ್ಕಾಗಿ ಸುಮಿತ್ರೆಯ ಶಾಲೆಯಿಂದ ಎರಡು ವೇದಿಕೆಗಳನ್ನು ತರಿಸಿ ಸಜ್ಜುಗೊಳಿಸಲಾಗಿತ್ತು.

ಸಾಯಂಕಾಲದ ಐದು ಗಂಟೆಗೆ ಆರಂಭವಾಗಲಿದ್ದ ಉತ್ಸವಕ್ಕೆ ನಾಲ್ಕೂವರೆ ಯಿಂದಲೇ ಜನ ಕೂಡತೊಡಗಿತು. ಸ್ತ್ರೀಯರನ್ನು ಬರಮಾಡಿಕೊಳ್ಳಲು

ತಾರಾಬಾಯಿ, ಲೀಲಾದೇವಿ, ಗೌರೀದೇವಿ, ಚೆನ್ನಿ, ಸುಮಿತ್ರಾದೇವಿ ಮೊದಲಾದವರೂ, ಪುರುಷರನ್ನು ಸ್ವಾಗತಿಸಲು ಬಾಜೀರಾಯರು, ಮೋಜಣ್ಣವರು, ಬಸಲಿಂಗ ಮೊದಲಾದವರೂ ಬಾಗಿಲಿನ ಹತ್ತಿರ ನಿಂತುಕೊಂಡಿದ್ದರು. ಬಸಲಿಂಗನ ಇತರ ವಕೀಲರೂ, ಡಾಕ್ಟರ್ ಇಂದ್ರಗೇರಿಯವರೂ ಅತಿಥಿಗಳನ್ನು ಅವರವರಿಗೆ ಉಚಿತವಾದ ಆಸನಗಳಲ್ಲಿ ಕೂಡಿಸುವ ಹೊಣೆ ಹೊತ್ತುಕೊಂಡಿದ್ದರು.

ನಗರದ ಫೌಜದಾರರೂ ಆ ವೇಳೆಗಾಗಲೆ ಬಂದು ಉಪಸ್ಥಿತರಾಗಿದ್ದರು. ಡಿ ಎಸ್ ಪಿ. ಮತ್ತು ಕಲೆಕ್ಟರರು ಬರುವವರಿದ್ದಾಗ ಫೌಜದಾರರೂ ಬರಲೇ ಬೇಕಷ್ಟೆ? ಮಡಿಮಾಡಿದ ಸಮವಸ್ತ್ರ ಧರಿಸಿ, ಕಂಕುಳಲ್ಲಿದ್ದ ಬೆತ್ತವನ್ನು ಮತ್ತೆ ಮತ್ತೆ ಮುಟ್ಟಿಕೊಳ್ಳುತ್ತ ಅವರು ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಾ ಅಲ್ಲಿ ಸೇರಿದ ಜನರ, ವಿಶೇಷವಾಗಿ ಸ್ತ್ರೀಯರ ಲಕ್ಷ್ಯವನ್ನಾಕರ್ಷಿಸಲು ಯತ್ನಿಸುತ್ತಿದ್ದ ದೃಶ್ಯ ಬಲು ಮೋಜಿನದಾಗಿತ್ತು. ಅವರೊಡನೆ ಬಂದಿದ್ದ ಪೋಲೀಸರು ಬಾಗಿಲ ಬಳಿ ನಿಂತು, ಉಪದ್ವ್ಯಾಪಿ ಜನರು ಒಳಗೆ ಬರದಂತೆ ನೋಡಿಕೊಳ್ಳುತ್ತಿದ್ದರು.

ಐದು ಗಂಟೆಗೆ ಒಂದೆರಡು ನಿಮಿಷಗಳಿರುವಾಗ ಡಿ.ಎಸ್.ಪಿ. ಯವರು ಬಂದರು. ಅವರ ಕಾರು ಇನ್ನೂ ಒಂದು ಫರ್ಲಾಂಗು ದೂರದಲ್ಲಿದ್ದಾಗಲೇ ಫೌಜದಾರರು ಅದನ್ನು ಗುರುತಿಸಿ, ಚಾಳದ ಹೊರಭಾಗದಲ್ಲಿ ಬಂದು ಸೇರಿದ್ದ ಜನರನ್ನು ಗದರಿಸಿ, "ಸರೀರ್‍ಯೋ ಮಕ್ಕಳಿರಾ! ಇದೇನು ಜಾತ್ರೆ ಅಂತ ತಿಳಿದಿರಾ? ಹೋಗಿರಿ. ಕರೆಯದೆ ಬಂದು ಗದ್ದಲಕ್ಕೆ ನಿಂತಾರೆ ಕಳ್ಳ.... ಸೂ...." ಎಂದು ಕೂಗಿಕೊಂಡರು. ಅಷ್ಟರಲ್ಲಿ ಡಿ.ಎಸ್.ಪಿ. ಯವರ ಕಾರೂ ಬಂದು ನಿಂತುಕೊಂಡಿತು. ಫೌಜದಾರರು ಥಟ್ಟನೆ ಓಡುತ್ತ ಹೋಗಿ ಕಾರಿನ ಬಾಗಿಲು ತೆಗೆದು, ಸೆಟೆದು ನಿಂತು ಸಲಾಂ ಹೊಡೆದರು. ವಕೀಲರೂ ಅಲ್ಲಿಗೆ ಧಾವಿಸಿ ಬಂದು ಡಿ.ಎಸ್.ಪಿ. ಯವರನ್ನು ಸ್ವಾಗತಿಸಿ, "ಕಲೆಕ್ಟರ್ ಸಾಹೇಬರಿನ್ನೂ ಬರಲಿಲ್ಲ,"ವೆಂದು ಹೇಳುತ್ತಿದ್ದ ಹಾಗೇ ದೂರದಲ್ಲಿ ಕಲೆಕ್ಟರರ ಕಾರೂ ಕಾಣಿಸಿಕೊಂಡಿತು. ಮತ್ತೆ ಫೌಜದಾರರು ಹಾಗು ಪೋಲೀಸರ ಗಡಿಬಿಡಿ. ಫೌಜದಾರರು ಮತ್ತೊಮ್ಮೆ ಕಾರಿನ ಬಾಗಿಲು ತೆಗೆದು ಮತ್ತೊಂದು 'ಸಲಾಂ' ಹೊಡೆದರು.

ಕಲೆಕ್ಟರರು ಕಾರಿನಿಂದಿಳಿದವರೇ ಮಹಾದ್ವಾರದತ್ತ ನಡೆದರು. ಅವರ ಅಕ್ಕಪಕ್ಕಗಳಲ್ಲಿ ಡಿ.ಎಸ್.ಪಿ. ಯವರೂ ಬಾಜೀರಾಯರೂ ಡಾಕ್ಟರ್ ಇಂದ್ರ

ಗೇರಿಯವರೂ ಇನ್ನೂ ನಾಲ್ಕಾರು ಜನರೂ ಇದ್ದರು. ಕಲೆಕ್ಟರರು ಮಹಾ ದ್ವಾರವನ್ನು ತೆರೆದು ಅಡ್ಡವಾಗಿ ಕಟ್ಟಿದ್ದ ಜರಿಯ ದಾರವನ್ನು ಬೆಳ್ಳಿಯ ಕತ್ತರಿಯಿಂದ ಕತ್ತರಿಸುತ್ತಿದ್ದ ಹಾಗೇ ಛಾಯಾ ಚಿತ್ರಕಾರರು ತಮ್ಮ ಕೆಮರಾಗಳನ್ನು 'ಕ್ಲಿಕ್'ಗೊಳಿಸಿದರು.

ಕಲೆಕ್ಟರರು ಬಾಗಿಲನ್ನು ದಾಟಿ ಈಚೆಗೆ ಬರುತ್ತಲೂ ಇಬ್ಬರು ಪೋಲೀಸರು ಅಲ್ಲಿ ನಿಂತುಕೊಂಡರು. ಫೌಜದಾರರು ಬೆತ್ತವನ್ನು ಕುಣಿಸುತ್ತ ಅತ್ತಿತ್ತ ಸುಳಿದಾಡತೊಡಗಿದರು.

ಕಲೆಕ್ಟರರು ಪ್ರವೇಶಿಸುತ್ತಿದ್ದಂತೆಯೆ ವಿಮಲೆ ಸ್ವಾಗತಗೀತೆಯನ್ನು ಹಾಡತೊಡಗಿದಳು. ಧ್ವನಿವರ್ಧಕ ಯಂತ್ರದ ವ್ಯವಸ್ಥೆಯಿದ್ದುದರಿಂದ ದೂರ ನಿಂತುಕೊಂಡಿದ್ದ ಜನರೂ ಅವಳ ಹಾಡು ಕೇಳಿ ತಣಿದರು. ಅದಾದನಂತರವೇ ನೃತ್ಯ ಕಾರ್ಯಕ್ರಮ. ವಿಮಲೆ ರಾಧೆಯಾಗಿ ಸುಮಿತ್ರೆ ಕೃಷ್ಣನಾಗಿ. ಸುಮಿತ್ರೆಯ ಶಿಷ್ಯೆಯರು ಕೆಲವರು ಗೋಪಿಯರಾಗಿ ನರ್ತಿಸಿದರು. ಅರ್ಧಗಂಟೆಯ ಕಾಲ ಸಭಿಕರೆಲ್ಲ ಇಹಲೋಕದ ಅರಿವನ್ನೇ ಮರೆತು ನರ್ತನದ ಅಪ್ಸರಾಲೋಕದಲ್ಲಿ ವಿಹರಿಸುತ್ತಿದ್ದರು. "ನರ್ತನ ಅಭ್ಭಾಟ್ ಆಯಿತು," ಎಂದು ಫೌಜದಾರರೂ ಹೊಗಳಿದರು.

ಆ ಮೇ ಲೆ ಆ ಮಂ ತ್ರಿ ತ ರಿ ಗೆ ಲ್ಲ ಉಪಾಹಾರವಾಯಿತು. ಅದಾದ ತರುವಾಯ ಕಲೆಕ್ಟರರ ಭಾಷಣ. ಅವರು ಧ್ವನಿವರ್ಧಕ ಯಂತ್ರದ ಮುಂದೆ ಬಂದು ನಿಲ್ಲುತ್ತಲೂ ಹೊರಗಡೆ ನಿಂತಿದ್ದ ಜನರು ಒಬ್ಬೊಬ್ಬರಾಗಿ ಕಾಲ್ದೆಗೆಯತೊಡಗಿದರು. ಕಲೆಕ್ಟರರಿಗೆ ಅತ್ತ ಲಕ್ಷ್ಯವೇ ಇರಲಿಲ್ಲ. ಅವರು ಟೈ ಸರಿಪಡಿಸಿಕೊಂಡು ಗಂಭೀರವಾದ ಧ್ವನಿಯಲ್ಲಿ ಆರಂಭಿಸಿದರು. ದೇಶಭಕ್ತರ ಭಾಷಣಗಳಂತೆ ಅದು ದೀರ್ಘವಾಗಿರದೆ ಬಹಳ ಚಿಕ್ಕದಾಗಿತ್ತು: ಭಾರತದಲ್ಲಿ ಇಂದು ವಾಸದ ಮನೆಗಳ ಕೊರತೆಯಿದೆ, ಅದನ್ನು ಹೋಗಲಾಡಿಸಲು ಬಾಜೀರಾವ್ ದೇಶಪಾಂಡೆಯವರಂಥ ಹಣವಂತರು ಮುಂದೆ ಬರುತ್ತಿರುವುದು ಶ್ಲಾಘನೀಯವಾದ ಸಂಗತಿ, ಬಡವರಿಗಾಗಿ ಮನೆಗಳನ್ನು ಕಟ್ಟಿಸಲು ಹಣವಂತರಿಗೆ ಪದೇ ಪದೇ ಉಪದೇಶಿಸುತ್ತಿದ್ದ ಪೂಜ್ಯ ಗಾಂಧೀಜಿಯವರ ಹೆಸರನ್ನೇ ಈ ಚಾಳಕ್ಕಿರಿಸಿದುದು ಉಚಿತವೇ ಆಗಿದೆ, ಇತ್ಯಾದಿ, ಇತ್ಯಾದಿ. ವಿಮಲೆ ಮತ್ತು ಸುಮಿತ್ರೆಯರ

ನರ್ತನ ಕಾರ್ಯಕ್ರಮದ ವಿಚಾರವಾಗಿಯೂ ನಾಲ್ಕು ಮಾತುಗಳನ್ನಾಡಿ ವಿಮಲೆಯನ್ನು ಮುಕ್ತಕಂಠದಿಂದ ಪ್ರಶಂಸಿಸುವುದನ್ನೂ ಅವರು ಮರೆಯಲಿಲ್ಲ.

ವಂದನಾರ್ಪಣೆಯೊಡನೆಯೆ ಅತಿಥಿಗಳೆಲ್ಲರೂ ಹೊರಟುಹೋದರು. ಬಾಜೀರಾಯರ ಆಪ್ತಮಿತ್ರರೂ ಬಸಲಿಂಗನ ಬಳಗದವರೂ ಹೋಗುವ ಅವಸರ ಮಾಡದೆ ಅಲ್ಲಿಯೆ ಉಳಿದುಕೊಂಡರು. ಅದಕ್ಕೆ ಕಾರಣವೇನೆಂಬುದು ಬಾಜೀ ರಾಯರಿಗೆ ಚೆನ್ನಾಗಿ ಗೊತ್ತು. ಅವರಲ್ಲಿ ಕೆಲವರು ಮಹೀರಾದೇವಿಗಾಗಿ ಕಾದಿದ್ದರೆ ಇನ್ನು ಕೆಲವರು ವಿಮಲಾದೇವಿಯ ವಿಚಾರ ಅರಿತುಕೊಳ್ಳಲು ಉತ್ಸುಕರಾಗಿ ಹಿಂದೆ ಉಳಿದಿದ್ದರು.

“ಹ್ಯಾಗಾಯ್ತು ಉತ್ಸವ ಡಾಕ್ಟರರೇ? ನಿಮ್ಮ ಸ್ಪಷ್ಟ ಅಭಿಪ್ರಾಯ ಬರಲಿ,” ಎಂದರು ಬಾಜೀರಾಯರು.

“ನಾನೇನ್ರೀ, ಮನೆಯವನ ಹಾಗೇ ಇರುವವನು. ಅಪ್ಪಾಸಾಹೇಬ ದೇಸಾಯಿಯವರೇ ಅಭಿಪ್ರಾಯ ಕೊಡಲಿ,” ಎಂದರು ಡಾಕ್ಟರರು.

“ಅದ್ಭುತವಾಗಿತ್ತು, ಅದ್ಭುತವಾಗಿತ್ತು,” ಎಂದು ಹೃತ್ಪೂರ್ವಕವಾಗಿಯೇ ಹೇಳಿದ ಅಪ್ಪಾಸಾಹೇಬ ದೇಸಾಯಿ.

“ನಮ್ಮ ವಿಮಲೆಯ ಸಂಗೀತ–ನೃತ್ಯ. ಮೇಲೆ ಸುಮಿತ್ರಾದೇವಿಯವರ ಸಹಾಯ. ಅಂದಮೇಲೆ ಕೇಳಬೇಕೇ? ವಿಮಲೆಯೇನೋ ನಮ್ಮ ಮನೆಯ ಹುಡುಗಿ. ಸುಮಿತ್ರಾದೇವಿಯವರ ಸಹಕಾರ ಮಾತ್ರ ಬೆಲೆಯುಳ್ಳದ್ದು,” ಎಂದರು ಬಾಜೀರಾಯರು.

“ವಿಮಲೆ ನಮ್ಮ ಮನೆಯ ಹುಡುಗಿ,” ಎಂಬ ಬಾಜೀರಾಯರ ಮಾತಿಗೆ ಅಲ್ಲಿ ಕೂಡಿದವರೆಲ್ಲರೂ ಬಗೆಬಗೆಯ ಅರ್ಥ ಕಲ್ಪಿಸಿಕೊಂಡರು. ಅನೇಕರಿಗೆ ನಿರಾಸೆಯೂ ಉಂಟಾಗದಿರಲಿಲ್ಲ. ಮತ್ತೆ ಆ ವಿಚಾರವಾಗಿ ಯಾರೂ ಮಾತನಾಡ ಲಿಲ್ಲವಾದರೂ ಅಪ್ಪಾಸಾಹೇಬ ದೇಸಾಯಿ ಮಾತ್ರ ಆ ವಿಷಯವನ್ನು ಅಲ್ಲಿಗೇ ಬಿಡದೆ,

“ವಿಮಲಾಬಾಯಿ ಸುಂದರಿ. ಕಂಠಮಾಧುರ್ಯವಿದೆ. ನೃತ್ಯಕಲೆಯಲ್ಲೂ ಪಳಗಿದವಳು. ಕಾಲೇಜ್ ವಿದ್ಯಾರ್ಥಿನಿ. ನಮ್ಮ ನಿಮ್ಮ ಸ್ನೇಹ ಇಷ್ಟು ದಿನದಿಂದ

ಇದ್ದರೂ ನಿಮಗೆ ಇಂಥ ಆಪ್ತಳೊಬ್ಬಳು ಇದ್ದದ್ದನ್ನು ಇದುವರೆಗೂ ಹೇಳಲಿಲ್ಲವಲ್ಲ ವಕೀಲರೇ?" ಎಂದು ಕೇಳಿದ.

"ಆಪ್ತಳೆಂದರೆ ಅಂಥ ವಿಶೇಷ ಅರ್ಥವೇನೂ ಇಲ್ಲ ಅಪ್ಪಾಸಾಹೇಬ್. ಅವಳು ಚಿಕ್ಕವಳಿದ್ದಾಗಿನಿಂದ ನಮ್ಮಲ್ಲೇ ಬೆಳೆದವಳು. ಪಾಪ, ಪರದೇಶಿ...."

"ಹೀಗೇನು?" ಎಂದು ಕುತೂಹಲದಿಂದ ಕೇಳಿದ ಅಪ್ಪಾಸಾಹೇಬ್.

## ಹದಿನಾಲ್ಕು....                ಅಪ್ಪಾಸಾಹೇಬ್ ದೇಸಾಯಿ

'ಸರದಾರ್ಸ್ ಕ್ಲಬ್'ಗೆ ಹೊಸದಾಗಿ ಸೇರಿದ ಸರದಾರರಲ್ಲಿ ಅಪ್ಪಾಸಾಹೇಬ ದೇಸಾಯಿಯೂ ಒಬ್ಬ. ಅವನು ನಿಜವಾಗಿಯೂ ಸರದಾರನೆಂದೇ ಹೇಳಬೇಕು. 'ಸರದಾರ' ಎಂಬ ಬಿರುದು ಅವರ ಮನೆತನಕ್ಕೆ ತಲೆತಲಾಂತರಗಳಿಂದಲೂ ನಡೆದುಬಂದಿತ್ತು.

ಅವರು ಸಂಗನಹಳ್ಳಿಯ ದೇಸಾಯಿಗಳೆಂದು ಸಂಬೋಧಿಸಲ್ಪಡುತ್ತಿದ್ದರೂ ಸುತ್ತಲಿನ ಹದಿಮೂರು ಹಳ್ಳಿಗಳಿಗೂ ಧಣಿಯರಾಗಿದ್ದರು. ಎಂಭತ್ತು ಸಾವಿರಕ್ಕೆ ಮೇಲ್ಪಟ್ಟ ವಾರ್ಷಿಕ ಉತ್ಪನ್ನವಿತ್ತು. ಚಿಕ್ಕಂದಿನಲ್ಲಿಯೆ ತಂದೆತಾಯಿಗಳನ್ನು ಕಳೆದುಕೊಂಡು, ಸೋದರಮಾವನಾದ ರಾಮರಾಯರ ಪಾಲನೆಯಲ್ಲಿ ಬೆಳೆದು ಬಂದಿದ್ದ ಅಪ್ಪಾಸಾಹೇಬ್ ಈಚೆಗಷ್ಟೆ ಸ್ವತಂತ್ರನಾಗಿದ್ದ.

ಅವನ ತಂದೆ ತೀರಿಕೊಳ್ಳುತ್ತಲೂ ಆಸ್ತಿಯ ಉಸ್ತುವಾರಿ ಸರಕಾರಕ್ಕೆ ಸೇರಿದ್ದಿತಾದರೂ ರಾಮರಾಯರೇ ಅವನ 'ಗಾರ್ಡಿಯನ್' ಆಗಿ ಹನ್ನೆರಡು ವರ್ಷಗಳ ಅವಧಿಯಲ್ಲಿ ಇಪ್ಪತ್ತು ಇಪ್ಪತ್ತೈದು ಸಾವಿರದ ಆಸ್ತಿ ಗಿಟ್ಟಿಸಿ ಕೊಂಡಿದ್ದರು.

ದೇಸಾಯಿಯವರ ಮನೆತನ ಪೇಶವೆಯರ ಕಾಲದಿಂದಲೂ ನಡೆದು ಬಂದ ಆಗರ್ಭಶ್ರೀಮಂತ ಮನೆತನ. ತನ್ನ ತಾಯಿ ವಜ್ರ ವೈಢೂರ್ಯಗಳ ಆಭರಣ ಗಳನ್ನು ಧರಿಸುತ್ತಿದ್ದುದನ್ನು ಅಪ್ಪಾಸಾಹೇಬ್ ಚಿಕ್ಕವನಾಗಿದ್ದಾಗಲೇ ಕಂಡಿದ್ದ. ಸಂಗನಹಳ್ಳಿಯಲ್ಲಿ ಪ್ಲೇಗ್‌ರೋಗ ಕಾಲಿರಿಸಿ ಅವನ ತಂದೆತಾಯಿಗಳಿಬ್ಬರನ್ನು ಏಕ ಕಾಲಕ್ಕೇ ಬಲಿ ತೆಗೆದುಕೊಂಡಿತ್ತು. ಅವರಿನ್ನೂ ಮರಣದೆಸೆಯಲ್ಲಿದ್ದಾಗಲೇ ಆತನನ್ನು ಊರು ಬಿಡಿಸಿ ಓರೆಕೋರೆನಗರಕ್ಕೆ ಕಳಿಸಲಾಗಿತ್ತು. ಆಗಲೇ ಅವನ ತಾಯಿಯ ಸೋದರ ರಾಮರಾಯರು ಅವರ ಮನೆಯಲ್ಲಿ ಚಂಚು ಪ್ರವೇಶ

ಮಾಡಿದ್ದರು. ತಮ್ಮ ಏಕಮಾತ್ರ ಪುತ್ರನ ಹೊಣೆಯನ್ನು ರಾಮರಾಯರಿಗೊಪ್ಪಿಸಿ ಅಪ್ಪಾಸಾಹೇಬನ ತಂದೆ ತಾಯಿಗಳು ಇಹಲೋಕ ತ್ಯಜಿಸಿದ್ದರು. ತನ್ನ ಆಭರಣಗಳೆಲ್ಲವನ್ನೂ ಸೋದರನ ಕೈಗೊಪ್ಪಿಸಿ ಅವುಗಳನ್ನು ತನ್ನ ಸೊಸೆಗಾಗಿ ಕಾದಿಡುವಂತೆ ಅಪ್ಪಾಸಾಹೇಬನ ತಾಯಿ ಕೇಳಿಕೊಂಡಾಗ ತಂಗಿಯ ಕೈಮೇಲೆ ಕೈಹಾಕಿ, ಅವಳ ಇಷ್ಟದಂತೆಯೇ ಮಾಡುವುದಾಗಿ ಆಣೆ ಮಾಡಿದ್ದರು ರಾಮರಾಯರು. ಶವಗಳ ದಫನಕ್ರಿಯೆ ಮುಗಿಯುತ್ತಲೂ ಅಲ್ಲಿದ್ದುದೆಲ್ಲವನ್ನೂ ದೋಚಿಕೊಂಡು ರಾಯರು ನಗರಕ್ಕೆ ಬಂದು ಎಲ್ಲ ಒಡವೆಗಳನ್ನೂ ತಮ್ಮ ಪತ್ನಿ ಭಾಗೀರಥಿಬಾಯಿಯವರ ಕೈಗೊಪ್ಪಿಸಿ ಅವುಗಳ ವಿಚಾರವನ್ನು ಗುಪ್ತವಾಗಿಡಲು ಕಟ್ಟಪ್ಪಣೆ ಮಾಡಿದ್ದರು. ಅಳಿಯನ ಆಸ್ತಿಯನ್ನು ಸರಕಾರದ ಕೋರ್ಟ್ ಆಫ್ ವಾರ್ಡಿನ ವಶಕ್ಕೊಪ್ಪಿಸಿ. ತಾವೇ 'ಗಾರ್ಡಿಯನ್'ರಾಗಿ ಪ್ರತಿ ತಿಂಗಳೂ ಒಂದು ಸಾವಿರ ರೂಪಾಯಿ ಅಪ್ಪಾಸಾಹೇಬನ ಖರ್ಚಿಗಾಗಿ ಸಿಕ್ಕುವಂತೆ ವ್ಯವಸ್ಥೆ ಮಾಡಿದ್ದರು.

ರಾಮರಾಯರೂ ಕೂಡಾ ದೇಸಾಯರ ಮನೆತನವೊಂದರಲ್ಲಿ ಹುಟ್ಟಿ ಬಂದವರಾಗಿದ್ದರೂ ವಿಷಯಲಂಪಟತನ ಮತ್ತು ಮದ್ಯಪಾನಗಳಂಥ ದುರ್ವ್ಯಸನಗಳಿಂದಾಗಿ ಆಸ್ತಿಪಾಸ್ತಿಗಳೆಲ್ಲವನ್ನೂ ಕಳೆದುಕೊಂಡು ಹೆಸರಿಗೆ ಮಾತ್ರ ದೇಸಾಯರಾಗಿ ಉಳಿದಿದ್ದರು. ಅವರ ಹತ್ತಿರ ಹಣವಿರುವವರೆಗೂ ಅವರಂಥ ಉದಾರಿಗಳು ಇನ್ನೊಬ್ಬರಿಲ್ಲವೆನ್ನುವಂತೆ ವರ್ತಿಸಿದ್ದರು. ಅವರು ಒಬ್ಬರೇ ಕುಳಿತು ಎಂದೂ ಕುಡಿದವರಲ್ಲ. ಒಬ್ಬರೇ ವಿಲಾಸಜೀವನ ನಡಸಿದವರೂ ಅಲ್ಲ. ಕುಡಿಯುವಾಗ ಹತ್ತು ಮಂದಿ ಗೆಳೆಯರಿರಲೇಬೇಕು. ಆ ಗೆಳೆಯರಿಗೂ ಹೆಂಗಸರ ಪೂರೈಕೆಯಾಗಬೇಕು. ಇಂಥ ಸದ್ಗುಣಗಳ ಫಲವಾಗಿಯೆ ಅವರು ಕೆಲವರ್ಷಗಳಲ್ಲಿಯೆ ಎಲ್ಲವನ್ನೂ ಕಳೆದುಕೊಂಡುದು. ಆ ಸಮಯದಲ್ಲಿ ಅವರ ಭಾವ–ಅಪ್ಪಾಸಾಹೇಬನ ತಂದೆ–ನವರೇ ಅವರನ್ನುಳಿಸಿಕೊಂಡಿದ್ದರು. ಸಕಾಲದಲ್ಲಿಯೆ ಅ ರ ನೆರವು ಸಿಕ್ಕದೆ ಹೋಗಿದ್ದಲ್ಲಿ ರಾಮರಾಯರು ಹಣೆಗೆ ಗುಂಡಿಟ್ಟು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಸಂಗ ಬರುತ್ತಿತ್ತು.

ಕೈಯಲ್ಲಿದ್ದ ಕಾಸೆಲ್ಲವೂ ತೀರಿದ ಬಳಿಕ ದೇವರ ಪೂಜೆಯೇ ಅವರ ಏಕಮಾತ್ರ ಉದ್ಯೋಗವಾಯಿತು. ಆಗ ಅವರಿಗಿನ್ನೂ ಮಕ್ಕಳೂ ಆಗಿರಲಿಲ್ಲ. ಅಪ್ಪಾಸಾಹೇಬನ ತಂದೆಯವರು ವರ್ಷ ವರ್ಷವೂ ಕೊಡುತ್ತಿದ್ದ ಒಂದು ಸಾವಿರ ರೂಪಾಯಿಗಳಲ್ಲಿಯೆ ಎಲ್ಲ ಖರ್ಚು ನಡೆಯಬೇಕಾಗಿತ್ತು. ಭಾಗೀರಥಿಬಾಯಿ

ಜಾಣೆ. ಕೈ ಬಿಗಿಹಿಡಿದು ಖರ್ಚುಮಾಡುವ ಹೆಂಗಸು. ಅಂತೆಯೆ, ಅಪ್ಪಾಸಾಹೇಬನ ತಂದೆಯವರಿಂದ ಸಾವಿರ ರೂಪಾಯಿ ಬರುತ್ತಲೂ ಆಕೆ ಒಂದು ವರ್ಷಕ್ಕೆ ಬೇಕಾದ ಸಾಮಗ್ರಿಗಳೆಲ್ಲವನ್ನೂ ಶೇಖರಿಸಿ, ಉಳಿದ ಹಣವನ್ನು ಗಂಡನಿಗೆ ಗೊತ್ತಾಗದಂತೆ ಬಚ್ಚಿಟ್ಟುಬಿಡುತ್ತಿದ್ದರು. ನಡುನಡುವೆ ಅದೂ ಖರ್ಚಾಗಿ ಹೋಗಿ ವರ್ಷಾಂತ್ಯಕ್ಕೆ ಒಂದು ಕಾಸೂ ಉಳಿಯುತ್ತಿರಲಿಲ್ಲ.

ಇಂಥ ಸ್ಥಿತಿಯಲ್ಲಿ ಅವರು ದಿನಗಳೆಯುತ್ತಿದ್ದಾಗ ಅಪ್ಪಾಸಾಹೇಬನ ತಂದೆತಾಯಿಗಳು ಇದ್ದಕ್ಕಿದ್ದ ಹಾಗೆ ತೀರಿಕೊಂಡುದುದರಿಂದ ಅವರ ಮನಸ್ಸು ಬಹಳ ಖಿನ್ನವಾಗಿತ್ತು. ರಾಮರಾಯರಿಗಂತೂ ಒಂದು ಬಗೆಯ ವೈರಾಗ್ಯ ಭಾವವೇ ಬಂದುಬಿಟ್ಟಂತಾಗಿತ್ತು. ಆದರದು ಬಹುಕಾಲ ಉಳಿಯಲಿಲ್ಲ. ತಂಗಿಯ ಲಕ್ಷಾಂತರ ಬೆಲೆಯ ಆಭರಣಗಳು ಕೈಸೇರುತ್ತಲೂ ಅವುಗಳನ್ನು ಯಾರಿಗೂ ಗೊತ್ತಾಗದಂತೆ ಹೇಗೆ ಎತ್ತಿ ಹಾಕುವುದೆಂದು ಯೋಚಿಸುವುದ ರಲ್ಲಿಯೆ ಅವರ ದಿನಗಳು ಕಳೆಯತೊಡಗಿದುವು. ಅಪ್ಪಾಸಾಹೇಬನ 'ಗಾರ್ಡಿಯನ್' ಆಗಿ ತಿಂಗಳಿಗೆ ಸಾವಿರ ರೂಪಾಯಿ ಸಂಪಾದಿಸುವ ಸುಪ್ರಸಂಗ ಬರುತ್ತಲೂ ಅವರ ವೈರಾಗ್ಯ ಹೇಳದೆ ಕೇಳದೆ ಓಡಿಹೋಯಿತು. ತನ್ನ ದುರ್ದಶೆಯನ್ನು ಕಂಡು ನೊಂದುಕೊಂಡು, ತನಗೆ ಸುದಿನಗಳನ್ನು ತಂದುಕೊಡುವ ಇಚ್ಛೆಯಿಂದಲೇ ತನ್ನ ತಂಗಿಯೂ ಭಾವನೂ ಇಷ್ಟು ಬೇಗ ತೀರಿಕೊಂಡರೇನೊ ಎಂದು ಹೇಳಿಕೊಳ್ಳುತ್ತಾ ರಾಯರು ಸಂತೋಷದಿಂದ ನಲಿದರು.

ಅಪ್ಪಾಸಾಹೇಬನಂಥ ದೊಡ್ಡ ದೇಸಾಯಿ ವಾಸವಾಗಿರಲು ಅವನ ಅಂತಸ್ತಿಗೆ ತಕ್ಕಂಥ ದೊಡ್ಡ ಬಂಗಲೆ ಬೇಡವೆ? ಸರಿ. ಓರೆಕೋರೆ ನಗರದ ಬೋಳಗುಡ್ಡದಲ್ಲಿ ನೂರು ರೂಪಾಯಿ ಬಾಡಿಗೆಯ ಭವ್ಯ ಬಂಗಲೆಯೊಂದನ್ನು ಗೊತ್ತುಮಾಡಲಾಯಿತು. ಅಪ್ಪಾಸಾಹೇಬನ ಹೆಸರಿನಲ್ಲಿ ಹೊಸದೊಂದು ಕಾರೂ ಬಂತು. ಸಂಗನಹಳ್ಳಿಯ ವಾಡೆಯಲ್ಲಿದ್ದ ಮಹತ್ವದ ಸಾಮಾನುಗಳನ್ನೆಲ್ಲ ಬಂಗಲೆಗೇ ಸ್ಥಳಾಂತರಿಸಲಾಯಿತು. ನಗರದ ವಾತಾವರಣದಲ್ಲಿ ಅಪ್ಪಾಸಾಹೇಬ ಹಳ್ಳಿಯನ್ನು ಮರೆತನಾದರೂ ತಂದೆತಾಯಿಗಳನ್ನು ಮಾತ್ರ ಮತ್ತೆ ಮತ್ತೆ ನೆನಪು ಮಾಡಿಕೊಳ್ಳುತ್ತಲೇ ಇದ್ದ. ಅವರ ಮರಣದ ವಾರ್ತೆಯನ್ನು ಬೇಕೆಂತಲೇ ಅವನಿಗಿನ್ನೂ ತಿಳಿಸಲಾಗಿರಲಿಲ್ಲ.

"ಅಪ್ಪ ಅವ್ವ ಎಲ್ಲಿದಾರೆ ಮಾಮಾ?" ಎಂದು ಆತ ಮತ್ತೆ ಮತ್ತೆ ಕೇಳಿದಾಗ,

"ಕಾಶಿಗೆ ಹೋಗಿದಾರಪ್ಪಾ. ಇನ್ನೇನು ಬಂದುಬಿಡುತಾರೆ," ಎಂದು ಅವನನ್ನು ಸಂತೈಸುತ್ತಿದ್ದರು ರಾಮರಾಯರು.

ಆದರೆ, ಒಂದು ವರ್ಷ ಕಳೆದರೂ ತಂದೆತಾಯಿಗಳು ಬರಲಿಲ್ಲವಾದುದ ರಿಂದ ಅಪ್ಪಾಸಾಹೇಬನಿಗೆ ಸಂದೇಹ ಉತ್ಪನ್ನವಾಯಿತು. ತನ್ನ ತಾಯಿ ಬಂದು ಉಣ್ಣಿಸದಿದ್ದರೆ ತಾನು ಊಟವನ್ನೇ ಮಾಡುವದಿಲ್ಲವಾಗಿ ಒಂದು ದಿನ ಆತ ಹಟ ತೊಟ್ಟು ಕುಳಿತುಕೊಂಡ. ಆಗ ಮಾತ್ರ ರಾಮರಾಯರು ಅವನ ತಂದೆ ತಾಯಿಗಳ ಮರಣದ ಸಂಗತಿಯನ್ನು ತಿಳಿಸಲೇಬೇಕಾಯಿತು.

ದುಃಖವನ್ನು ಸಹಿಸಲಾರದೆ ಹುಡುಗ ಹಾಸಿಗೆ ಹಿಡಿದು ಮಲಗಿದ. ಡಾಕ್ಟರುಗಳ ಓಡಾಟಕ್ಕಾರಂಭವಾಯಿತು. ದೊಡ್ಡವರ 'ಫ್ಯಾಮಿಲಿ ಡಾಕ್ಟರು' ಇಂದ್ರಗೇರಿಯವರು ಬಂದು ಔಷಧಿ ಕೊಟ್ಟಾಗಲೇ ಅವನಿಗೆ ಗುಣವಾಯಿತು. ತಾನು ಹಾಸಿಗೆ ಹಿಡಿದು ಮಲಗಿದಾಗ ತನ್ನ ಅತ್ತೆ – ಮಾವಂದಿರು ತನ್ನ ವಿಚಾರ ವಾಗಿ ವ್ಯಕ್ತಗೊಳಿಸಿದ ಪ್ರೀತಿಯನ್ನೂ ಮಮತೆಯನ್ನೂ ಗುರುತಿಸಿಕೊಂಡ ಅಪ್ಪಾಸಾಹೇಬ ನಿಧಾನವಾಗಿ ತನ್ನ ದುಃಖವನ್ನು ಮರೆಯುತ್ತ ಬಂದ.

ಡಾ. ಇಂದ್ರಗೇರಿಯವರ ಬಳಕೆ ಆ ಮನೆಯಲ್ಲಿ ವಿಶೇಷವಾದ ಹಾಗೆ ಭಾಗೀರಥಿಬಾಯಿಯವರಿಗೆ ಮಕ್ಕಳಿಲ್ಲದಿರುವ ಸಂಗತಿಯನ್ನೂ ಅವರು ತಿಳಿದು ಕೊಂಡರು. ಸೂಳೆಯರಿಂದ ರಾಮರಾಯರಿಗಂಟಿಕೊಂಡಿದ್ದ ರೋಗಗಳೆಲ್ಲವೂ ಭಾಗೀರಥಿಬಾಯಿಯವರನ್ನೂ ಹಿಡಿದುಕೊಂಡಿದ್ದುವು. ಅಷ್ಟು ವರ್ಷಗಳವರೆಗೆ ಚಿಕಿತ್ಸೆಗಾಗಿ ಹಣವೂ ಇರಲಿಲ್ಲ. ಈಗ ಕೈಯಲ್ಲಿ ಹಣವೂ ಇತ್ತು. ಇಂದ್ರಗೇರಿ ಯವರಂಥ ಕುಶಲ ಡಾಕ್ಟರು ಚಿಕಿತ್ಸೆ ಮಾಡಲೂ ಸಿದ್ಧರಿದ್ದರು.

ಮತ್ತೊಂದು ತಿಂಗಳು ಡಾಕ್ಟರು ಓಡಿಯಾಡಿದರು. ಪತಿ – ಪತ್ನಿಯರಿಬ್ಬ ರಿಗೂ ಸರಿಯಾದ ಚಿಕಿತ್ಸೆ ಲಭಿಸಿತು. ಮುಂದೆ ಆರು ತಿಂಗಳುಗಳಲ್ಲಿಯೆ ಭಾಗೀ ರಥಿಬಾಯಿ ಗರ್ಭ ಧರಿಸಿದ ಶುಭ ಸಮಾಚಾರವೂ ಹೊರಬಿದ್ದಿತು.

ಗಂಡುಮಗ ಹುಟ್ಟಬೇಕೆಂದು ರಾಮರಾಯರು ಆಶಿಸಿದ್ದುದು ಸಹಜವೇ. ಭಾಗೀರಥಿಬಾಯಿಗೆ ಮಾತ್ರ ಹೆಣ್ಣೇ ಆಗಲೆಂಬ ಬಯಕೆ. ಆ ಹೆಣ್ಣನ್ನು ಅಪ್ಪಾ ಸಾಹೇಬನಿಗೆ ಕೊಟ್ಟು ಮದುವೆ ಮಾಡಿದರೆ ಒಂದು ರೀತಿಯಿಂದ ಅವನ ಆಸ್ತಿಗೆ

ತಾವೂ ಒಡೆಯರಾದಂತೆ, ಅವನ ತಾಯಿಯ ಆಭರಣಗಳೂ ನ್ಯಾಯವಾಗಿ ತಮಗೇ ಎಂದರೆ–ತಮ್ಮ ಮಗಳಿಗೆ ಸೇರಿದಂತೆ, ಎಂದು ಆ ಹೆಣ್ಣುಜೀವ ಯೋಚಿಸಿತು. ಕೊನೆಗೂ ಅವರ ಬಯಕೆಯೇ ಫಲಿಸಿ ಹೆಣ್ಣುಕೂಸೇ ಹುಟ್ಟಿತು. ಅವಳಿಗೆ ನಿರ್ಮಲಾ ಎಂದು ಹೆಸರಿಟ್ಟು ಬಹಳ ಮುದ್ದಿನಿಂದ ಬೆಳಸುತ್ತ ಬಂದರು. ಅಪ್ಪಾಸಾಹೇಬನಿಗೂ ಅವಳಿಗೂ ಬಾಲ್ಯದಲ್ಲಿಯೇ ಜೊತೆಯಾಯಿತೆಂದು ಭಾವಿಸಿಕೊಂಡರು.

ಹುಡುಗರು ಬೆಳೆದು ದೊಡ್ಡವರಾದರು. ಅಪ್ಪಾಸಾಹೇಬನಿಗೆ ಈಗ ಇಪ್ಪತ್ತಾರರ ಪ್ರಾಯ. ನಿರ್ಮಲೆಗೆ ಹದಿನಾರು. ನಿರ್ಮಲಾ ಮ್ಯಾಟ್ರಿಕ್ ಮುಗಿಸಿ ಕಾಲೇಜಿಗೆ ಸೇರಿಕೊಂಡಿದ್ದಳು. ಅಪ್ಪಾಸಾಹೇಬ ಮಾತ್ರ ಮ್ಯಾಟ್ರಿಕ್ ದಾಟಲಾರದೆ ಶಿಕ್ಷಣಕ್ಕೇ ನಮಸ್ಕಾರ ಹಾಕಿ ಚೈನಿಯ ಜೀವನಕ್ಕಾರಂಭಿಸಿದ್ದ.

ಅವನು ವಯಸ್ಕನಾಗುತ್ತಲೂ ಆಸ್ತಿಯ ವ್ಯವಸ್ಥೆಯನ್ನು ತಾನೇ ವಹಿಸಿಕೊಂಡು ಓರೆಕೋರೆ ನಗರದಲ್ಲಿ ಒಂದೆರಡು ಚಾಳಗಳನ್ನೂ ಕಟ್ಟಿಸಿ ಬಾಡಿಗೆ ಬರುವಂತೆ ಏರ್ಪಡಿಸಿದ್ದ. ಮದಿರಾ–ಮೋಹಿನಿಯರ ಬಗೆಗೆ ಮಾವನಿಗಿದ್ದ ವ್ಯಸನವನ್ನು ಆತ ಮೊದಲಿನಿಂದಲೂ ಬಲ್ಲವನು. ಆಸ್ತಿಯೆಲ್ಲವನ್ನೂ ಕಳೆದುಕೊಂಡ ಬಳಿಕ ಕೆಲವು ವರ್ಷಗಳ ಕಾಲ ಅವರು ಕುಡಿಯುವುದನ್ನು ನಿಲ್ಲಿಸಿದ್ದರಾದರೂ ಅಪ್ಪಾಸಾಹೇಬನ ವೆಚ್ಚಕ್ಕಾಗಿ ಪ್ರತಿತಿಂಗಳೂ ಸಾವಿರ ರೂಪಾಯಿ ಬರಲಾರಂಭಿಸಿದಾಗ ಮತ್ತೆ ಆ ವ್ಯಸನವೂ ಮುಂದುವರಿದಿತ್ತು. ಆದರೆ, ಮೊದಲಿನ ಹಾಗೆ ಗೆಳೆಯರ ಗುಂಪು ಸೇರುತ್ತಿರಲಿಲ್ಲ. ಹೆಣ್ಣಿನ ಮೋಹವೂ ಕಡಿಮೆಯಾಗಿತ್ತು. ಅಂತೆಯೇ, ಕುಡಿತಕ್ಕಾಗಿ ಹಣ ಹಾಳು ಮಾಡಿಯೂ ಅವರ ಹತ್ತಿರ ಹತ್ತಿಪ್ಪತ್ತು ಸಾವಿರದಷ್ಟು ನಗದು ಹಣ ಕೂಡಿಬಿದ್ದಿತ್ತು.

'ಕೋರ್ಟ್ ಆಫ್ ವಾರ್ಡ್ಸ್'ದಿಂದ ತನ್ನ ಆಸ್ತಿ ಕೈಸೇರುತ್ತಲೂ ಅಪ್ಪಾಸಾಹೇಬ ತನ್ನ ಹಳ್ಳಿಗಳಿಗೂ ಹೋಗಿ ಬರತೊಡಗಿದ. ಹೊಲಗಳ ಉತ್ಪನ್ನವೆಲ್ಲವೂ ಅವನ ಕೈಗೇ ಬರತೊಡಗಿತು. ಬಂದುದನ್ನೆಲ್ಲ ಪೋಲುಮಾಡದೆ ಅದನ್ನು ಬ್ಯಾಂಕಿಗೆ ಕಟ್ಟುತ್ತ ಬಂದ. ಹಲವು ವರ್ಷಗಳಿಂದ ನಡೆದು ಬಂದ ರೀತಿಯಂತೆ ಪ್ರತಿ ತಿಂಗಳೂ ಒಂದು ಸಾವಿರ ರೂಪಾಯಿಗಳನ್ನು ಮಾತ್ರ ಮಾವನ ಕೈಗೆ ಕೊಡುತ್ತಿದ್ದ.

ಇಂಥ ದೊಡ್ಡ ದೇಸಾಯಿ, ಪ್ರತಿಷ್ಠಿತ ಸಮಾಜದಿಂದ ದೂರವಿರಲು ಸಾಧ್ಯವೆ? ಇಂದ್ರಗೇರಿಯವರು ಮೆಲ್ಲನೆ ಅವನನ್ನು ಕ್ಲಬ್ಬಿಗೆಳೆದರು. ಬಾಜೀರಾಯರು 'ಮಶೀರಾ'ದ ರುಚಿ ತೋರಿಸಿದರೆ ಹರಕಸೆಟ್ಟರಂಥವರು ಹೆಣ್ಣುಗಳ ಆಸೆ ಹಚ್ಚಿದರು. ಇನ್ನು ಕೆಲವರು ಇಸ್ಪೀಟು ಚಟ ಕಲಿಸಿದರು. ಬ್ಯಾಂಕಿನಲ್ಲಿ ಕೂಡಿಬಿದ್ದ ಹಣ ಹನಿಹನಿಯಂತೆ ಹರಿದುಬರತೊಡಗಿತು. ಅಪ್ಪಾಸಾಹೇಬನ ಅಪರಂಪಾರ ಉತ್ಪನ್ನದೆದುರಿಗೆ ಈ ಖರ್ಚು ತೀರ ಸಾಮಾನ್ಯವಾದುದು. ತಿಂಗಳಿಗೆ ಸುಮಾರು ಒಂಭತ್ತು ಸಾವಿರದಷ್ಟು ಆದಾಯ ಆತನದು. ಚಾಳಗಳ ಬಾಡಿಗೆಯ ಹಣ ಬೇರೆ. ಬ್ಯಾಂಕಿನಲ್ಲಿನ ಹಣದ ಬಡ್ಡಿ ಬೇರೆ. ಅವನ ಪ್ರತಿ ದಿನದ ಮಶೀರಾ ವೆಚ್ಚ ಬಹಳವಾದರೆ ಮೂವತ್ತೈದು ರೂಪಾಯಿ. ಇನ್ನಿತರ ಖರ್ಚು ಬಹಳವಾದರೆ ಮೂವತ್ತು. ಮನೆಯ ಖರ್ಚು ತಿಂಗಳಿಗೆ ಒಂದು ಸಾವಿರ. ವರ್ಷಕ್ಕೆ ನಲವತ್ತು ಸಾವಿರ ಖರ್ಚಾದರೂ ಇನ್ನೂ ನಲವತ್ತು ಸಾವಿರ ಕೂಡಿಬೀಳುತ್ತಿತ್ತು. ಇಂಥ ಹಣವಂಥ ಸುಂದರ ಯುವಕನ ಮೇಲೆ ಅವಿವಾಹಿತ ಕನ್ಯೆಯರ ತಂದೆ ತಾಯಿಗಳ ದೃಷ್ಟಿ ಬಿದ್ದುದೂ ಸಹಜವೇ ಸರಿ.

ಬಾಜೀರಾಯರ ತಂದೆಯವರಾದ ನಾರಾಯಣರಾಯರು ತಮ್ಮ ಕಿರಿಯ ಮಗಳು ಸುಶೀಲೆಯನ್ನು ಅಪ್ಪಾಸಾಹೇಬನಿಗೆ ಕೊಟ್ಟು ಮದುವೆ ಮಾಡಬೇಕೆಂದು ಯೋಚಿಸಿದ್ದರಾದರೂ, ರಾಮರಾಯರ ಮಗಳೇ ಮನೆಯಲ್ಲಿ ಬೆಳೆದು ಬರುತ್ತಿದ್ದುದನ್ನು ಕಂಡು ವಿವಾಹದ ಪ್ರಸ್ತಾಪವೆತ್ತದೆ ದೂರ ಉಳಿದಿದ್ದರು. ನಿರ್ಮಲೆ ಅಪ್ಪಾಸಾಹೇಬನ ಪತ್ನಿಯಾಗಲೆಂದೇ ಹುಟ್ಟಿದ ಹುಡುಗಿಯೆಂದು ರಾಮರಾಯರೂ ಹೇಳುತ್ತ ಬಂದಿದ್ದರು. ಅಪ್ಪಾಸಾಹೇಬನಿಗೆ ಮಾತ್ರ ಅವಳ ವಿಚಾರವಾಗಿ ಅಂಥ ಭಾವನೆ ಬರಲಿಲ್ಲ. ಅವಳು ತನ್ನ ಪರಿಚಯ ಹಾಗೂ ಸ್ನೇಹದಲ್ಲಿ ಬೆಳೆದ ಹುಡುಗಿಯಾದುದರಿಂದ ತನ್ನ ಹೆಂಡತಿಯಾಗಲು ಅಯೋಗ್ಯಳೆಂದೇ ಅವನು ಭಾವಿಸಿದ್ದ. ಒಂದೆರಡು ಬಾರಿ ಅವನ ಅತ್ತೆ ಮಾವಂದಿರು ಮದುವೆಯ ಮಾತೆತ್ತಿದಾಗ, ತಾನು ಮದುವೆಯನ್ನೇ ಮಾಡಿಕೊಳ್ಳುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿದುದಲ್ಲದೆ ನಿರ್ಮಲೆಗಾಗಿ ಬೇರೆ ಕಡೆ ವರ ಹುಡುಕಬೇಕೆಂದೂ ತಿಳಿಸಿಬಿಟ್ಟಿದ್ದ. ಅವನ ಪ್ರಚಂಡ ಆಸ್ತಿಯ ಮೇಲೆ ಕಣ್ಣಿಟ್ಟುಕೊಂಡಿದ್ದ ನಿರ್ಮಲೆಗೂ ಅವಳ ತಂದೆತಾಯಿಗಳಿಗೂ ಅವನ ಮಾತಿನಿಂದಾಗಿ ವ್ಯಸನವಾಗದಿರಲಿಲ್ಲ. ಏನನ್ನಾದರೂ ಮಾಡಿ ಅಪ್ಪಾಸಾಹೇಬನನ್ನು ಮದುವೆಗೆ

ಒಪ್ಪಿಸಲೇಬೇಕೆಂದು ಅವರು ನಿರ್ಧರಿಸಿಕೊಂಡರು. ನಿರ್ಮಲೆಯೂ ಅದೇ ರೀತಿಯಾಗಿ ಯೋಚಿಸಿ, ಅಪ್ಪಾಸಾಹೇಬನನ್ನು ತನ್ನ ಮೋಹಜಾಲದಲ್ಲಿ ಸಿಲುಕಿಸುವ ಸಾಹಸಕ್ಕೆ ತೊಡಗಿದಳು. ಅದಕ್ಕೆ ತಂದೆತಾಯಿಗಳ ಅಪ್ರತ್ಯಕ್ಷ ಪ್ರೋತ್ಸಾಹವೂ ಇದ್ದೇ ಇತ್ತು.

ಪ್ರಣಯ ಮತ್ತು ಪ್ರೀತಿ ಎರಡೂ ಒಂದೇ ಆಗಿದ್ದು, ಪ್ರಣಯದಾಟದಲ್ಲಿಯೇ ಪ್ರೀತಿ ಹುಟ್ಟಿಬರುವುದೆಂದು ಧೃಡವಾಗಿ ನಂಬಿಕೊಂಡಿದ್ದವಳು ನಿರ್ಮಲೆ–ಗಂಡು ಹೆಣ್ಣುಗಳ ಶರೀರ ಸಂಯೋಗದಿಂದ ಆ ಪ್ರೀತಿ ಧೃಡವಾಗುವುದೆಂದೂ ಅವಳು ಭಾವಿಸಿದ್ದಳು. ಶರೀರಗಳು ಕೂಡಿದ ಬಳಿಕ ಮನಸ್ಸುಗಳು ಕೂಡುವುದು ಕಷ್ಟಕರವಲ್ಲವೆಂದೇ ಅವಳು ತಿಳಿದಿದ್ದಳು. ತನ್ನ ತಂದೆತಾಯಿಗಳ ನಿದರ್ಶನವೇ ಕಣ್ಣೆದುರು ಇದ್ದಿತಲ್ಲ? ಕುಡಿತ ಮತ್ತು ವ್ಯಭಿಚಾರಗಳಲ್ಲಿ ಮಗ್ನನಾಗಿ ಆಸ್ತಿಯನ್ನೆಲ್ಲ ಸಾಲಗಾರರ ವಶಕ್ಕೊಪ್ಪಿಸಿ ಬೇರೆಯವರ ಔದಾರ್ಯದಿಂದ ಜೀವಿಸಿದ್ದ ತನ್ನ ತಂದೆಯ ವಿಚಾರವಾಗಿ ತನ್ನ ತಾಯಿಯಲ್ಲಿ ಕೊಂಚವೂ ಆದರದ ಭಾವವುಳಿದಿರಲಿಲ್ಲ; ತಿರಸ್ಕಾರವೇ ಇತ್ತು. ಆದರೂ ಅವರಿಬ್ಬರೂ ಗಂಡಹೆಂಡಿರಾಗಿಯೇ ಜೀವಿಸಿದ್ದರು. ಶರೀರ ಸಂಬಂಧವೇ ಅದಕ್ಕೆ ಮುಖ್ಯಕಾರಣವೆಂದು ನಿರ್ಮಲೆ ನಂಬಿಕೊಂಡಿದ್ದಳು. ಹಾಗೆ, ಅಪ್ಪಾಸಾಹೇಬನೊಡನೆ ತನಗೂ ಸಂಬಂಧ ಬಂದರೆ ತನ್ನನ್ನೇ ವಿವಾಹವಾಗಬೇಕೆಂಬ ಬಯಕೆಯೂ ಅವನಲ್ಲಿ ಉತ್ಪನ್ನವಾಗಬಹುದೆಂದು ಆಕೆ ಯೋಚಿಸಿದ್ದಳು.

ಅವಳಿಗೂ ಅದು ಹೊಸ ಹರೆಯದ ವಯಸ್ಸು. ಗಂಡಿನ ಸಹವಾಸಕ್ಕಾಗಿ ಆತುರವಾಗಿತ್ತು ಮನಸ್ಸು. ಮನೆಯಲ್ಲಿ ಅವಳಿಗೆ ಮಾಡಲು ಕೆಲಸವಿರಲಿಲ್ಲ– ಅವಳು ಶಾಲೆಗೆ ಹೋಗುತ್ತಿದ್ದುದು ತಂದೆತಾಯಿಗಳ ಬಲವಂತದಿಂದ; ಅಪ್ಪಾಸಾಹೇಬನ ಮೆಚ್ಚುಗೆಯನ್ನು ಗಳಿಸುವ ಏಕಮಾತ್ರ ಉದ್ದೇಶದಿಂದ. ಊಟದ ಚಿಂತೆಯಿಲ್ಲ. ಬಟ್ಟೆಗಳ ಕೊರತೆಯಿಲ್ಲ. ಇನ್ನಾವ ತೊಂದರೆ– ಯೋಚನೆಗಳಿಲ್ಲ. ಸುಖವಾಗಿ ಬೆಳೆದುಬಂದ ಹೆಣ್ಣು. ಅಂಥವಳು ಹರೆಯಕ್ಕೆ ಬಂದೊಡನೆ ಎಲ್ಲಾ ಸುಖಗಳಲ್ಲೂ ಹೆಚ್ಚಿನದಾದ ಶರೀರ ಸುಖವನ್ನು ಹುಡುಕುವುದೂ ಸ್ವಾಭಾವಿಕವೇ ಆಗಿತ್ತು.

ಕ್ಲಬ್ಬಿಗೆ ಹೋದ ಅಪ್ಪಾಸಾಹೇಬ ರಾತ್ರಿ ಮನೆಗೆ ಮರಳಬೇಕಾದರೆ

ಹತ್ತೋ ಹನ್ನೊಂದೋ ಆಗುತ್ತಿತ್ತು. ಒಂದೊಂದು ದಿನ ಹನ್ನೆರಡು ಗಂಟೆಯಾಗುತ್ತಿದ್ದುದೂ ಇತ್ತು, ಅಷ್ಟು ಹೊತ್ತಿನವರೆಗೆ ಅವನಿಗಾಗಿ ಯಾರು ಕಾಯುತ್ತ ಕುಳಿತಾರು? ನಿರ್ಮಲೆ ಮಾತ್ರ ಅವನು ಬರುವುದನ್ನೇ ಎದುರು ನೋಡುತ್ತ ನಿದ್ದೆಯನ್ನು ತಡೆ ಹಿಡಿದು ಕಾದಿರುವಳು. ಅವನು ಬರುತ್ತಲೂ ಎದ್ದು ಹೋಗಿ ಬಾಗಿಲು ತೆಗೆದು ಊಟವನ್ನೂ ತಾನೇ ಬಡಿಸುವಳು. ಅವನು ತನ್ನ ಕೊಟಡಿಗೆ ಹೋಗಿ ಮಂಚವನ್ನೇರಿದ ಬಳಿಕ ಅವನ ಹೊದ್ದಿಕೆಯನ್ನು ಸರಿಪಡಿಸುವಳು. ಸಮಯ ಸಾಧಿಸಿ ತನ್ನ ತುಂಬಿದ ಅಂಗಾಂಗಗಳ ಪ್ರದರ್ಶನವನ್ನೂ ಮಾಡುವಳು. ಅಪ್ಪಾಸಾಹೇಬನೇನು ವೃದ್ಧನೇ? ಅಥವಾ ವಿರಕ್ತನೇ? ಹೆಣ್ಣಿನ ದೇಹದ ರುಚಿ ಕಂಡ ರಸಿಕ ಯುವಕನಲ್ಲವೇ ಆತ? ಅವನೂ ಅವಳ ಅಂಗಾಂಗಗಳನ್ನು ಆಸೆಗಣ್ಣಿನಿಂದ ನೋಡುವನು. ಅವಳ ವಿಚಾರವಾಗಿ ಅವನಲ್ಲಿ ಪ್ರೀತಿಯಿಲ್ಲದಿದ್ದರೇನಾಯಿತು? ಶಾರೀರಕ ಆಕರ್ಷಣೆಯಂತೂ ಇದ್ದೇ ಇದ್ದಿತಲ್ಲ? ಎಂಥ ತಿಂಡಿ ಸಿಕ್ಕಿದರೂ, ಹಿಂದುಮುಂದಿನ ವಿಚಾರವಿಲ್ಲದೆ ಗಪಗಪನೆ ತಿಂದುಬಿಡುವವನ ರೀತಿ ಅಪ್ಪಾಸಾಹೇಬನದು. ನಿರ್ಮಲೆಗಾದರೋ ಒಂದು ಉದ್ದೇಶವೂ ಇತ್ತು. ಆ ಉದ್ದೇಶ ಕೈಗೂಡುವುದಕ್ಕೂ ತಡವಾಗಲಿಲ್ಲ.

ಒಂದು ರಾತ್ರೆ ಅಪ್ಪಾಸಾಹೇಬ ಕ್ಲಬ್ಬಿನಲ್ಲಿ ಚೆನ್ನಾಗಿ ಕುಡಿದು ಮನೆಗೆ ಬಂದಿದ್ದ. ನಿತ್ಯದಂತೆ ನಿರ್ಮಲೆಯೂ ಬೇಟೆಯನ್ನು ಬಲೆಗೆ ಬೀಳಿಸುವ ಸಿದ್ಧತೆಯಿಂದಲೇ ಕಾದಿದ್ದಳು. ಅಂದು ಅಪ್ಪಾಸಾಹೇಬನ ವಿವೇಕ ಅವನ ಸ್ವಾಧೀನದಲ್ಲಿರಲಿಲ್ಲ. ಹೇಗೋ ನಾಲ್ಕು ತುತ್ತು ನುಂಗಿ ಕೈತೊಳೆದುಕೊಂಡು ಎದ್ದುಬಿಟ್ಟ. ಎದುರಿಗೇ ದೇಹವನ್ನು ಬಳುಕಿಸುತ್ತ ನಿಂತ ನಿರ್ಮಲೆ. ಮನೆಯಲ್ಲೆಲ್ಲ ಪೂರ್ಣ ನೀರವತೆ. ಎಲ್ಲರೂ ನಿದ್ರಾಧೀನರು. ಬಯಕೆ ಬಲವಾಗಿ, ಬಯಸಿದ ವಸ್ತು ಅನಾಯಾಸವಾಗಿ ಕೈಗೆ ಸಿಗುವಂತಿರುವಾಗ ಯಾರೂ ಆ ಸಂಧಿಯನ್ನು ಕೈಯಾರ ಕಳೆದುಕೊಳ್ಳುವುದಿಲ್ಲ. ಅಂದು ರಾತ್ರೆ ವಿಜಯಿಯಾದಳು ನಿರ್ಮಲಾ. ಬೆಳಗಿನ ಎಂಟು ಗಂಟೆಯ ಸಮಯವಾದರೂ ಆ ಎರಡು ದೇಹಗಳು ಒಂದನ್ನೊಂದು ಬಿಟ್ಟು ಬೇರೆಯಾಗಲಿಲ್ಲ.

ದಿನವೂ ಏಳುಗಂಟೆಗೇ ಎದ್ದುಬಿಡುವ ನಿರ್ಮಲೆ ಎಂಟುಗಂಟೆಯಾದರೂ ಎದ್ದುಬರಲಿಲ್ಲವಾದುದರಿಂದ ಭಾಗೀರಥಿಬಾಯಿ ಚಿಂತಾಕ್ರಾಂತರಾಗಿ ಅವಳ ಕೊಟಡಿಗೆ ಹೋಗಿ ನೋಡಿದರು. ಅಪ್ಪಾಸಾಹೇಬನ ಆಲಿಂಗನದಲ್ಲಿ

ಇಹಲೋಕದ ಅರಿವನ್ನೇ ಮರೆತು ನಿದ್ರಿಸಿದ್ದ ನಿರ್ಮಲೆ ತನ್ನ ಕೊಟಡಿಯಲ್ಲಿ ಹೇಗೆ ಕಾಣಿಸಿಕೊಂಡಾಳು? ತಾಯಿ ಕುತೂಹಲದಿಂದ ಅಪ್ಪಾಸಾಹೇಬನ ಕೊಟಡಿಗೆ ಬಂದರು. ಬಾಗಿಲನ್ನು ಮುಚ್ಚಿದ್ದರೂ ಒಳಗಡೆಯ ಚಿಲಕ ಹಾಕಿರಲಿಲ್ಲ ವಾದುದರಿಂದ ಅವರು ನೂಕಿದೊಡನೆ ಅದು ಓರೆಯಾಗಿ ಒಳಗಿನ ದೃಶ್ಯವನ್ನು ಪ್ರದರ್ಶಿಸಿತು. ಬಾಗೀರಥಿಬಾಯಿ ಕಣ್ಣು ಮುಚ್ಚಿಕೊಂಡು ಗಳಗಳನೆ ಅಳುತ್ತಾ ಗಂಡನ ಹತ್ತಿರ ಧಾವಿಸಿದಳು. ರಾಮರಾಯರು ಬಂದು ನೋಡಿದುದೂ ಆಯಿತು. ಏನಾದರೂ ಉಪಾಯಮಾಡಿ ಅಪ್ಪಾಸಾಹೇಬನನ್ನು ಅಳಿಯನನ್ನಾಗಿ ಮಾಡಿಕೊಳ್ಳಲೇಬೇಕೆಂದು ನಿರ್ಧರಿಸಿದ್ದ ಆ ದಂಪತಿಗಳೂ ಕೂಡ ಆ ದೃಶ್ಯವನ್ನು ಕಂಡು ಹೇಸಿಕೊಂಡರು. 'ಉಪಾಯ'ವೆಂದರೆ 'ಇಂಥ ಉಪಾಯ'ವೆಂದೇನೂ ಅವರು ಭಾವಿಸಿರಲಿಲ್ಲ.

"ಮುಂದೇನು ಮಾಡೋಣ? ಈ ಚಾಂಡಾಲಿ ಇಂಥಾದ್ದು ಮಾಡಿಯಾಳು ಅಂತ ಯಾರು ತಿಳಿದಿದ್ದರು?" ಎಂದು ಗೋಗರೆದರು ಭಾಗೀರಥಿಬಾಯಿ.

"ಇರಲಿರಲಿ. ಆದದ್ದು ಆಗಿಹೋಯ್ತು. ಅಪ್ಪಾಸಾಹೇಬನ್ನ ಹಾದಿಗೆ ತರುವದಕ್ಕೆ ಇದೊಂದು ಮೂಗುದಾಣ ಸಿಕ್ಕಂತಾಯ್ತು ನಮ್ಮ ಕೈಗೆ," ಎಂದರು ರಾಮರಾಯರು.

ಆದರೆ, ಅವರೆಷ್ಟು ಆರ್ಭಟಿಸಿದರೂ ಅಪ್ಪಾಸಾಹೇಬ ಬೆದರಲಿಲ್ಲ.

"ಏನಾಯಿತು, ಹೇಗಾಯಿತು ಯಾವದೂ ಗೊತ್ತಿಲ್ಲ ನನಗೆ. ನಾನು ಅಮಲಿನಲ್ಲಿದ್ದಾಗ ನಿರ್ಮಲೆ ಬಂದು ಮಲಗಿಕೊಂಡಿರಬೇಕು," ಎಂದನಾ ಭೂಪ!

"ಅವಳ್ಯಾಕೆ ಬರ್ತಾಳೆ ನೀ ಎಳೆಯದಿದ್ದರೆ?"

"ನೀವೇ ಏನೇನೋ ಮಸಲತ್ತು ಮಾಡಿ ಅವಳನ್ನ ಕಳಿಸಿಕೊಟ್ಟಿರಬೇಕು. ಅವಳನ್ನ ನನ್ನ ಕೊರಳಿಗೆ ಕಟ್ಟಬೇಕಂತ ನೀವು ಹೊಂಚುಹಾಕುತ್ತಿದ್ದದ್ದು ನನಗೇನು ಗೊತ್ತಿಲ್ಲವೇನು?"

ಮುಂದೆ ರಾಮರಾಯರ ಬಾಯಿಯಿಂದ ಮಾತೇ ಹೊರಡಲಿಲ್ಲ. ಅಪ್ಪಾ ಸಾಹೇಬನೇ ಹೇಳಿದ:

"ಅವಳಾಗಿ ನನ್ನ ಹಾಸಿಗೆಯಲ್ಲಿ ಬಂದು ಬಿದ್ದರೆ ನಾನಾದರೂ ಏನು

ಮಾಡಲಿ? ಈ ಹಾಳು ಸಹವಾಸವೇ ಬೇಡ. ನಾನಿಂದೇ ಈ ಮನೆ ಬಿಟ್ಟು ಬೇರೆ ಕಡೆ ಹೊರಟುಹೋಗ್ತೀನಿ," ಎಂದ ಅಪ್ಪಾಸಾಹೇಬ್.

"ನೀನ್ಯಾಕೆ ಹೋಗಬೇಕಪ್ಪಾ? ನಾವೇ ಹೋಗುತೀವಿ. ನಿನ್ನ ಅಳಿಯ ನನ್ನಾಗಿ ಮಾಡಿಕೊಳ್ಳುವ ಆಸೆಯಿದ್ದದ್ದೇನೋ ನಿಜ. ಆದರೆ ಅದರ ಪರಿಣಾಮ ಹೀಗಾದೀತು ಅಂತ ನಾವು ತಿಳಿದಿರಲಿಲ್ಲ. ದೇವರ ಮರ್ಜಿ!" ಎಂದು ಮಾತು ಮುಗಿಸಿದರು ರಾಯರಾಯರು. ಅದೇ ದಿನವೆ ಅವರ ಸಂಸಾರ ಬೇರೊಂದು ಮನೆಗೆ ಸ್ಥಳಾಂತರ ಹೊಂದಿತು.

ಅದರಿಂದಾಗಿ ಅಪ್ಪಾಸಾಹೇಬನಿಗೆ ಯಾವ ತೊಂದರೆಯೂ ಆಗಲಿಲ್ಲ. ಸ್ವಲ್ಪ ವ್ಯಸನವೇನೋ ಆಯಿತು. ಪಶ್ಚಾತ್ತಾಪವೇನೂ ಆಗಲಿಲ್ಲ. ತಾನು ಮಾಡಿದುದು ತಪ್ಪೇನೋ ಎಂದು ಒಂದೆರಡುಬಾರಿ ಅನ್ನಿಸಿತಾದರೂ ನಿರ್ಮಲೆ ತನ್ನನ್ನು ಉದ್ರಿಕ್ತಗೊಳಿಸದಿದ್ದಲ್ಲಿ ತನ್ನಿಂದ ಅಂಥ ಕೃತ್ಯ ನಡೆಯುತ್ತಿರಲಿಲ್ಲ ವೆಂದೇ ಹೇಳಿಕೊಂಡು ಆತ ತನ್ನ ಮನಸ್ಸನ್ನು ಸಂತೈಸಿಕೊಂಡ.

ಭಾಗೀರಥಿಬಾಯಿಯವರಿಗೆ ಮಾತ್ರ ಅದೊಂದು ಮರೆಯಲಾಗದ ಮಾತಾಯಿತು. ತಮ್ಮ ಇಂದಿನ ಸುಸ್ಥಿತಿಗೆ ಅಪ್ಪಾಸಾಹೇಬನ ಆರ್ಥಿಕ ಸಹಾಯವೇ ಕಾರಣವಾಗಿತ್ತು. ರಾಮರಾಯರ ಲಂಪಟತನದ ಫಲವಾಗಿ ಬಂದ ರೋಗಗಳಿಂದ ಬಳಲಿ ತಾಯ್ತನದ ಬಯಕೆಗೆ ನೀರೆರಚಿಕೊಂಡಿದ್ದಾಗ ಅಪ್ಪಾಸಾಹೇಬನ ಹಣದಿಂದಲೇ ಔಷಧೋಪಚಾರ ಹೊಂದಿ ನಿರ್ಮಲೆಯನ್ನು ಪಡೆದುದಾಗಿತ್ತು. ತಮ್ಮ ಸಂಸಾರಕ್ಕೆ ಅವನಿಂದಾದ ಉಪಕಾರ ಅಲ್ಪವಲ್ಲ. ಆದರೂ ಆತ ಹೀಗೆ ಮಾಡಿದ್ದು ದೊಡ್ಡ ತಪ್ಪು. ತಪ್ಪುಮಾಡಿದ ಮೇಲೆ ಅದನ್ನು ತಿದ್ದಿಕೊಂಡು ಅದರ ಪರಿಮಾರ್ಜನೆ ಮಾಡಿಕೊಳ್ಳಲು ಯತ್ನಿಸ ಬೇಕಾದುದು ಅವನ ಕರ್ತವ್ಯವಾಗಿತ್ತು. ಅದನ್ನು ಅವನು ಮಾಡಬಲ್ಲ. ಆ ಒಂದು ವಿಚಾರವೇ ಭಾಗೀರಥಿಬಾಯಿಯವರ ಮನಸ್ಸನ್ನು ವಿಶೇಷವಾಗಿ ನೋಯಿಸಿತ್ತು. ಸಾಧ್ಯವಾದಷ್ಟು ಬೇಗ ಒಂದು ಗಂಡು ಹುಡುಕಿ ನಿರ್ಮಲೆಯ ಮದುವೆ ಮುಗಿಸಿಬಿಡಬೇಕೆಂದು ಅವರು ಗಂಡನಿಗೆ ಮತ್ತೆಮತ್ತೆ ಹೇಳ ತೊಡಗಿದರು.

ಇತ್ತ ನಿರ್ಮಲೆಯ ವಿಚಾರಸರಣಿ ಬಲು ವಿಚಿತ್ರವಾದ ಹಾದಿ ಹಿಡಿದು ಹೊರಟಿತ್ತು. ಪ್ರತಿದಿನವೂ ಏಳು ಗಂಟೆಗೆಲ್ಲ ಎಚ್ಚತ್ತುಕೊಳ್ಳುವ ರೂಢಿ

ಅವಳಿಗಿದ್ದರೂ ಆ ವಿಷದಿನದಂದು ಅವಳಿಗೆ ಆ ವೇಳೆಗೆ ಎಚ್ಚರಾಗಲಿಲ್ಲ. ತಾಯಿಯ ಚೀತ್ಕಾರದಿಂದಾಗಿ ಅವಳಿಗೆ ಎಚ್ಚರವಾದಾಗ ತಾನು ಅಪ್ಪಾಸಾಹೇಬನ ಹಾಸುಗೆಯಲ್ಲಿ ಅರ್ಧ ನಗ್ನಸ್ಥಿತಿಯಲ್ಲಿ ಅವನನ್ನು ಅಪ್ಪಿಕೊಂಡು ಬಿದ್ದುದನ್ನು ಕಂಡು ಅವಳು ಹೇಸಿಕೊಂಡಿದ್ದಳು. ಒಳಗಿನ ಚಿಲಕವನ್ನು ಹಾಕಿಕೊಳ್ಳಲು ಮರೆತ ತನ್ನ ಅವಿವೇಕವನ್ನು ನೆನೆದು ತನ್ನ ಬಗೆಗೆ ತಾನೇ ರೋಸಿಕೊಂಡಿದ್ದಳು. ಮರುಕ್ಷಣವೇ ಅವಳ ವಿಚಾರ ವಿರುದ್ಧ ದಿಕ್ಕಿಗೆ ತಿರುಗಿತ್ತು. ತಾನು ಅಪ್ಪಾಸಾಹೇಬನ ಜೊತೆಗೆ ಮಲಗಿದರೂ ಏನಾಯಿತು ಅಂಥ ಅನಾಹುತ? ತನ್ನ ತಂದೆತಾಯಿಗಳಾದರೂ ಅಷ್ಟೇಕೆ ಕೋಲಾಹಲವೆಬ್ಬಿಸಬೇಕು? ಅಪ್ಪಾಸಾಹೇಬನ ಪ್ರೇಮವನ್ನು ಗಳಿಸಲು ತಾಯಿಯೆ ತನಗೆ ಬೋಧಿಸಿರಲಿಲ್ಲವೆ! ಒಂದೆರಡುವಾರ ಅವನೊಡನೆ ಹಾಗೇ ಶರೀರಸಂಬಂಧ ಬೆಳೆದಿದ್ದರೆ ಆತ ಖಂಡಿತವಾಗಿಯೂ ತನ್ನನ್ನೇ ಮದುವೆಯಾಗುತ್ತಿದ್ದ. ತನ್ನ ತಂದೆತಾಯಿಗಳು ವಿನಾಕಾರಣವಾಗಿ ಅವನ ಹತ್ತಿರ ವ್ಯಾಜ್ಯಮಾಡಿ ಬೇರೆಯಾದರು, ಎಲ್ಲವನ್ನೂ ಕೆಡಿಸಿಬಿಟ್ಟರು. ಕೈಗೆ ಬಂದಿದ್ದ ಅಪ್ಪಾಸಾಹೇಬನನ್ನು ಇವರಾಗಿಯೇ ದೂರಗೊಳಿಸಿದರು....

ಹಾಗೆ ಹೇಳಿಕೊಳ್ಳುತ್ತ ನಿರ್ಮಲೆ ತನ್ನ ತಂದೆತಾಯಿಗಳ ಬಗೆಗೇ ಮುನಿದುಕೊಂಡಿದ್ದಳು.

ರಾಮರಾಯರು ತಮ್ಮ ಬಿಡಾರ ಬದಲಿಸುತ್ತಲೂ ಕನ್ಯಾಪಿತೃಗಳನೇಕರು ಮತ್ತೆ ಅಪ್ಪಾಸಾಹೇಬನನ್ನು ಆಸೆಯ ದೃಷ್ಟಿಯಿಂದ ನೋಡತೊಡಗಿದರು; ಅವನನ್ನು ಮನೆಗೆ ಆಮಂತ್ರಿಸಿ ಸೊಗಸಾದ ಉಪಾಹಾರವಿತ್ತು ಸತ್ಕರಿಸಿ, ತಮ್ಮ ಕುವರಿಯರನ್ನು ಅವನೆದುರಿಗೆ ಮೆರೆಸುವುದನ್ನೂ ಆರಂಭಿಸಿದರು. ಯಾರ ಆಮಂತ್ರಣವನ್ನು ನಿರಾಕರಿಸಲಿಲ್ಲ ಅಪ್ಪಾಸಾಹೇಬ್. ಅವನ ಕಾರು ಹೋಗದ ಮನೆಯೇ ಇಲ್ಲದಂತಾಯಿತು. ವಿಲಾಸಿಯಾದ ಅವನಿಗೆ ಅದೂ ಒಂದು ಮೋಜಿನ ಸಂಗತಿಯೇ ಆಯಿತು. ಮದುವೆಯ ವಯಸ್ಸಿಗೆ ಬಂದಿದ್ದ ಯುವತಿಯರನೇಕರು ತಾವಾಗಿಯೆ ಮುಂದೆ ಬಂದು ಅವನ ಸ್ನೇಹ ಸಂಪಾದಿಸತೊಡಗಿದರು. ತಾವಾಗಿಯೆ ಬಂದವರನ್ನು ಯಾರು ದೂರಮಾಡುತ್ತಾರೆ? ನಿರ್ಮಲೆಯಂತೆಯೇ ಅನೇಕ ಯುವತಿಯರೊಡನೆ ಅವನು ಸಂಬಂಧ ಬೆಳಸಿದುದೂ ಆಯಿತು. ದಿನಗಳುರುಳಿದ ಹಾಗೆಲ್ಲ ಆತ ಹೂವಿನಿಂದ ಹೂವಿಗೆ

ಹಾರುವ ದುಂಬಿಯಂತಾಗಿಬಿಟ್ಟ. ಅವನಿಗೆ ಯಾವುದರ ಕೊರತೆಯೂ ಇರಲಿಲ್ಲ. ರೂಪವಿತ್ತು, ವಿದ್ಯೆಯಿತ್ತು, ಹಣವಿತ್ತು, ವ್ಯವಹಾರಜ್ಞಾನವಿತ್ತು. ಹೆಣ್ಣಿನ ಬಯಕೆ ಅವನ ಮನಸ್ಸಿನಲ್ಲಿ ಮೂಡುವುದೊಂದೇ ತಡ, ಅವನ ಕಾರು ಹೊರಕ್ಕೆ ಹೊರಡುತ್ತಿತ್ತು. ಅವನು ಬಯಸಿದ ಹೆಣ್ಣುಗಳೂ ಸುಲಭವಾಗಿ ಸಿಕ್ಕುತ್ತಿದ್ದುವು. ಒಂದೇ ಹೆಣ್ಣನ್ನು ನಂಬಿ ಅದನ್ನು ಮನೆಯಲ್ಲಿಟ್ಟುಕೊಂಡು ಕೂಡುವುದೆಂದರೆ ಕೇವಲ ಮೂಢತನವೆಂದೇ ಅವನಿಗೆನ್ನಿಸತೊಡಗಿತು.

ಅವನಿಗೆ ವಿಮಲೆಯ ಬಗೆಗೆ ಆಸೆ ಹುಟ್ಟಿದುದೂ ಇಂಥ ಮನಃಸ್ಥಿತಿಯಲ್ಲಿಯೆ. 'ಗಾಂಧೀಸದನ'ದ ಪ್ರಾರಂಭೋತ್ಸವದ ಕಾಲಕ್ಕೆ ಅವಳು ಹಾಡಿದ ರೀತಿ, ನರ್ತಿಸಿದ ಬಗೆ, ಅವಳ ರೂಪು, ಅವಳ ಬಣ್ಣ, ಅವಳ ವ್ಯಕ್ತಿತ್ವದ ಒಟ್ಟು ಮೋಹಕತೆ ಅಪ್ಪಾಸಾಹೇಬನ ರಸಿಕ ಮನಸ್ಸನ್ನು ಮುಗ್ಧಗೊಳಿಸಿತ್ತು. ಓರೆಕೋರೆನಗರದ ಸುಶಿಕ್ಷಿತ ಯುವತಿಯರಲ್ಲೆಲ್ಲ ವಿಮಲೆ ಮೇಲು ಎಂಬ ಭಾವನೆ ಅವನಲ್ಲಿ ಬಲವಾಗಿ ಬೇರೂರಿತ್ತು. ಅದರೊಡನೆಯೆ, ಅವಳನ್ನು ದೊರಕಿಸಬೇಕೆಂಬ ಬಯಕೆಯೂ ಬೆಳೆಯಿತು. ಅಂತೆಯೇ ಆತ ಬಾಜೀರಾಯರನ್ನು ಅವಳ ವಿಚಾರವಾಗಿ ಪ್ರಶ್ನಿಸತೊಡಗಿದ.

"ಏನು ವಕೀಲರೆ, ಈ ಸುರಸುಂದರಿಗೆ ಇದುವರೆಗೂ ಮದುವೆಮಾಡಿಲ್ಲವಲ್ಲ? ಅವಳನ್ನು ನೋಡಿ ನಿರಾಶರಾದ ತರುಣರು ಜೀವ ಕಳಕೊಳ್ಳಲಿ ಅಂತ ಹೀಗೇ ಬಿಟ್ಟೀರಾ?"

"ಛೆ. ಛೆ. ಹಾಗೇನೂ ಇಲ್ಲ. ಅವಳಿಗೆ ಅನುರೂಪನಾದವನನ್ನ ಅವಳೇ ಆರಿಸಿಕೊಂಡು ಮದುವೆಯಾಗಲಿ ಅಂತ ಸುಮ್ಮನಿದ್ದೀವಿ. ಯಾಕೆ? ಅವಳಿಗಾಗಿ ನೀವೇನಾದರೂ ಜೀವ ಕಳಕೊಳ್ಳುವ ವಿಚಾರವಿದೆಯೋ ಏನು?" ಎಂದು ಬಾಜೀರಾಯರು ನಕ್ಕರು. ಅಪ್ಪಾಸಾಹೇಬನೂ ಗಟ್ಟಿಯಾಗಿ ನಕ್ಕು,

"ಹಾಗೆ ಯಾಕಾಗಬಾರದು? ಇಂಥವಳನ್ನ ನೋಡಿದರೆ ಯಾರು ಮರುಳಾಗಲಿಕ್ಕಿಲ್ಲ? ಅದರಲ್ಲೂ ನಮ್ಮಂಥವರನ್ನ ಕೇಳಬೇಕೇ? ನಿಮ್ಮನ್ನೊಬ್ಬರನ್ನಬಿಟ್ಟರೆ ಈ ಸದ್ಗೃಹಸ್ಥರಲ್ಲಿ ಅರಸಿಕರಾದವರು ಯಾರಿದಾರೆ? ಮಡಿವಾಳ ವಕೀಲರೊಬ್ಬರು ಅಪವಾದ," ಎಂದ.

"ಏನು ಅಪ್ಪಾಸಾಹೇಬ್, ವಿಮಲೆಯನ್ನ ಮದುವೆಮಾಡಿಕೊಳ್ಳಬೇಕು ಅನ್ನುತ್ತೀರಾ?" ಡಾ. ಇಂದ್ರಗೇರಿಯವರು ಕೇಳಿದರು.

"ಮದುವೆ ಅಂದರೇನೇ ನನ್ನ ಮನಸ್ಸು ಮುದುಡಿಕೊಳ್ತದೆ. ಅದರ ಅನುಭವ ನಿಮಗೇ ಇರಲಿ. ನಾನು, ಕೃಷ್ಣರಾಯರು, ಚಿದಂಬರರಾಯರು ಮೂವರೂ ಒಂದು ಜಾತಿಯವರು. ಸಿಕ್ಕಿದಾಗ ಶಿವಾಯನಮಃ ಅನ್ನುವ ಫ್ರೀಲಾನ್ಸರುಗಳು. ಅದೆಲ್ಲಾ ಹೋಗಲಿ. ಏನಾದರೂ ತೀರ್ಥಪ್ರಸಾದ ಅದೆಯೋ ಅಥವಾ ಬಾಯಿಯ ಆಶೀರ್ವಾದವೋ ಬಾಜೀರಾಯರೇ?"

ಈ ತೀರ್ಥಪ್ರಸಾದಗಳ ಅರ್ಥ ತಿಳಿಯದಷ್ಟು ಅಜ್ಞರಾಗಿರಲಿಲ್ಲ ಮಡಿವಾಳರು. ಅವರು ಮೆಲ್ಲಗೆ ಅಲ್ಲಿಂದೇಳಲು ಯತ್ನಿಸಿದರು. ಹರಕಸೆಟ್ಟಿಯವರು ಅವರನ್ನು ಬಿಡಲಿಲ್ಲ.

"ಅಯ್ಯೋ, ನನಗೆ ಬೇಡಿರಪ್ಪಾ. ನಾ ಹೋಗುತೀನಿ."

"ಇರಲಿ ಕೂಡ್ರೀ ವಕೀಲರೆ. ಕಲಾಶಾಲೆಯ ಸುಪರಿಂಟೆಂಡೆಂಟ್ ಎಂಬ ಹೆಸರಿನ ಮರ್ಯಾದೆಯುಳಿಸುವದಕ್ಕಾದರೂ ನೀವು ಸ್ವಲ್ಪ ತೀರ್ಥ ತಗೊಳಲೇ ಬೇಕು," ಎಂದು ಬಾಜೀರಾಯರು ಅವರನ್ನು ಕೂಡಿಸಿದರು.

ಮಶೀರಾ ಸೀಸೆಗಳನ್ನೂ ಸೋಡಾಸೀಸೆಗಳನ್ನೂ ತಂದಿರಿಸಿದ ಬಸಲಿಂಗ. ಎರಡೂ ಹೆಬ್ಬಾಗಿಲುಗಳಿಗೆ ಬೀಗ ಬಿದ್ದುವು. 'ಗಾಂಧೀಸದನ'ದಲ್ಲಿ ಗೋವಾ ದೇವಿಯ ಆರಾಧನೆಗಾರಂಭವಾಯಿತು.

“ ಈ ಹಳ್ಳಿಯ ಹೆಣ್ಣಿಗೆ ಇಷ್ಟು ಅಹಂಕಾರ ಯಾಕೆ? ಇವಳು ನಮಗಿಂತ ಹೆಚ್ಚಿನ ಮರ್ಯಾದೆಯವಳೇನು ?” ಎನ್ನುವಳು ಲೀಲಾದೇವಿ.

“ ತಾ ನೋಡಿದರೆ ದರಿದ್ರ ಕಾರಕೂನನ ಹೆಂಡತಿ. ತನ್ನ ಕಿಮ್ಮತ್ತು ಏನು ಅನ್ನೂದನ್ನ ತಿಳಕೊಂಡು ಇರೂದು ಬಿಟ್ಟು ಒಣಾ ಬಡಿವಾರ ಮಾಡುತಾಳಲ್ಲ! ಅಲ್ಲ ಲೀಲಾ, ಡಾಕ್ಟರಂಥಾವರಿಗೂ ಸೊಪ್ಪು ಹಾಕಲಿಲ್ಲಂತಲ್ಲ ಈ ಚೆನ್ನಿ!” ಎಂದಳು ಗೌರೀದೇವಿ.

“ ಬಿಡು ಬಿಡಿರಿ. ನಾನೆಲ್ಲಾ ನೋಡೀನಿ ಇಂಥಾ ಗರತಿಯರನ್ನ ಸಾವಿರ ಮಂದೀನ್ನ. ಮೊದಲು ಒಂದೆರಡು ತಿಂಗಳು ಹೀಂಗ ಸೋಗು ಹಾಕಿ ಆಮ್ಯಾಲ ಗಂಡಸರ ಹಿಂದೆ ನಾಯಿಯ ಹಾಂಗ ಹೊಂಡುತಾವೆ,” ಎಂದಳು ಅಕ್ಕವ್ವ.

ಮೂವರೂ ಬಹಳ ಹೊತ್ತು ಚರ್ಚಿಸಿ, ಅವಳನ್ನು ಸಾಧ್ಯವಾದಷ್ಟು ಬೇಗ ಅಡ್ಡಹಾದಿಗೆಳೆಯಬೇಕೆಂದು ನಿಶ್ಚಯಿಸಿದರು. ದೇವಿಯರು ಚೆನ್ನಿಯ ಮನೆಗೆ ಓಡಿಯಾಡುವುದೂ ವಿಶೇಷವಾಗತೊಡಗಿತು. ಬಂದವರನ್ನು ಹಸನ್ಮುಖ ದಿಂದಲೇ ಬರಮಾಡಿಕೊಂಡು ಸತ್ಕರಿಸಿ ಕಳಿಸುವಳು ಚೆನ್ನಿ. ಸಾಯಂಕಾಲ ತಮ್ಮೊಡನೆ ವಾಯುವಿಹಾರಕ್ಕೆ ಬರುತ್ತಿರಬೇಕೆಂದು ಅವರು ಕೇಳಿದಾಗ ಮಾತ್ರ ಅವಳು ಉಪಾಯವಾಗಿ ತಪ್ಪಿಸಿಕೊಂಡಳು.

“ ನಿಮಗೇನ್ರೀ, ವಕೀಲರ ಹೆಂಡರು, ಕಲಿತವರು. ಮನಿಯೊಳಗ ಆಳು ಗೀಳು ಇಟ್ಟುಕೊಂಡೀರಿ. ನೀವು ತಿರುಗಾಡಿದರೂ ಚೆಂದ ಕಂಡೀತು. ಕಾರ ಕೂನನ ಹೆಂಡತಿಯಾಗಿ ನೀಳಿದರೆ ಎರಡಕ್ಷರ ಹೊರಡದ ಹಳ್ಳಿಯವಳು ನಾ ನಿಮ್ಮ ಸಂಗಡ ತಿರುಗಾಡಲು ಹೊರಟರೆ ಜನರು ನಕ್ಕಾರು. ಅಲ್ಲದೆ ನಮ್ಮಲ್ಲೇನು ಆಳುಕಾಳು ಅದಾವೇ? ಮನೀಕೆಲಸಾ ಎಲ್ಲಾ ನಾನೇ ಮಾಡಾಕಬೇಕಲ್ಲರೀ?”

“ ಬಿಡು, ಬಿಡು, ಚೆನ್ನವ್ವಾ. ಇಲ್ಲದ್ದೊಂದು ಹೇಳಬೇಡ. ನೀ ಮನಸು ಮಾಡಿದರೆ ನಿನಗೇನು ಕಡಿಮೆ? ರಾಣಿಯ ಹಾಗೆ ಬದುಕಬಹುದು, ರಾಣಿಯ ಹಾಗೆ,” ಎಂದಳು ಲೀಲಾದೇವಿ, ಕಣ್ಣು ಕುಣಿಸುತ್ತ.

“ ನನಗ್ಯಾತಕ್ಕ ಬೇಕವ್ವಾ ರಾಣೀ ಪದಾ? ಅದೆಲ್ಲಾ ನಿಮ್ಮಂಥಾವರಿಗೇ ಚಂದ!” ಎಂದು ಚೆನ್ನಿಯೂ ಕೊಂಕು ಮಾತನಾಡಿದಳು.

“ ನಮಗಿಂತ ನೀನೇ ದೊಡ್ಡಾಕಿಯಾಗಿದ್ದೀಯವ್ವಾ ನಮ್ಮ ಗಂಡಸರ ಕಣ್ಣಾಗ. ಅವರನ್ನ ಕೊಂದೇ ಬಿಟ್ಟದ್ದೀ ನೀನು. ಯಾವಾಗಲೂ ಚೆನ್ನಿ ಚೆನ್ನಿ

ಅಂತ ಕನವರಿಸುತಿರುತಾರೆ. ಒಮ್ಮೆಯಾದರೂ ಮಾತಾಡಿಸಬಾರದೇ ಅವರನ್ನ ?" ಎಂದು ನೇರವಾದ ಪ್ರಶ್ನೆ ಹಾರಿಸಿದಳು ಗೌರೀದೇವಿ –

"ಹೆಂಗಸರಂದರಾಯ್ತು, ಗಂಡಸರಿಗೆಲ್ಲಾ ಹೀಂಗೇ, ಬಿಡಿರವ್ವಾ. ಅವರೆಲ್ಲಾ ನಮ್ಮನ್ನ ಬಯಸುತಾರಂತ ನಾವು ಸಿಕ್ಕ ಸಿಕ್ಕವರ ಸಂಗ ಮಾಡುತಾ ಹೋದರೆ ಸತ್ತುಹೋದೇವು. ಒಮ್ಮೆ ಹೋದ ದೇಹ ಮತ್ತೆ ಬರೂದಿಲ್ಲ. ಇಂಥಾ ದೇಹಾನ್ನ ಪುಕ್ಕಟೆ ಯಾಕೆ ಕೊಡಬೇಕು ಅವರಿವರಿಗೆ? ನನಗಂತೂ ಪುಕ್ಕಟದ ವ್ಯವಹಾರ ಬೇಕಾಗಿಲ್ಲ. ನನ್ನ ಊಟ ಉಡಿಗೆ ವಸ್ತು ವಡವೆ ಕೊಡುವ ಗಂಡ ಇದಾನೆ. ನನಗೇನು ಬ್ಯಾರೆ ಗಂಡಸರ ಆಸೆ ಇಲ್ಲ. ನಿಮ್ಮ ಗಂಡಸರಿಗೇನಾದರೂ ನನ್ನ ಮ್ಯಾಲ ಆಸೆ ಇದ್ದರೆ ಒಂದು ದಿವಸಕ್ಕೆ ಏನಿಲ್ಲಂದರೂ ಐವತ್ತು ರೂಪಾಯಿ ಕೊಟ್ಟು ಬರಲಿಕ್ಕೆ ಹೇಳಿರಿ," ಎಂದು ಹೇಳಿ ಗೆಲುವಿನ ನಗು ನಕ್ಕು ಸುಮ್ಮ ನಾದಳು ಚೆನ್ನಿ –

ಐವತ್ತು ರೂಪಾಯಿ ಎನ್ನುತ್ತಲೂ ದೇವಿಯರಿಬ್ಬರೂ ಬೆಚ್ಚಿದರು, ನಾಲಗೆ ಕಚ್ಚಿಕೊಂಡರು. ಚೆನ್ನಿಯೆಂದರೆ ಸಾಮಾನ್ಯ ಹೆಂಗಸಲ್ಲವೆಂಬ ಅರಿವೂ ಅವರಿಗಾಯಿತು. ಅವಳಿಗಿಂತ ತಾವು ಅಗ್ಗವಾದಂತಾಯಿತಲ್ಲ ಎಂದು ಕೊಂಚ ವ್ಯಸನವೂ ಆಯಿತು. ಮತ್ತೊಂದು ಮಾತನಾಡದೆ. ಅವರು ಎದ್ದು ಬಂದರು.

ಚೆನ್ನಿಯ ಮಾತಿನಿಂದಾಗಿ ಅವರಲ್ಲಿ ಕೊಂಚ ವಿವೇಕೋದಯವಾಯಿತೆಂದೂ ಹೇಳಬಹುದು. ತಾವು ಇಷ್ಟುದಿನ ಮಾಡುತ್ತ ಬಂದುದು ತಪ್ಪೆಂದು ತಿಳಿದುದೇ ವಿವೇಕ. ತಾವು ಅನೇಕ ಗಂಡಸರೊಡನೆ ರಮಿಸಿದುದಾಗಿತ್ತು – ಕೊಂಚವೂ ಪ್ರತಿಫಲವಿಲ್ಲದೆ. ಚೆನ್ನಿಯಂತೆ ತಾವೂ ಹಣದ ಕರಾರು ಮಾಡಿಕೊಂಡಿದ್ದಲ್ಲಿ ಚೆನ್ನಾಗುತ್ತಿತ್ತು. ಚೈನಿಯ ಜೊತೆಯಲ್ಲೇ ಅಲ್ಪ ಸ್ವಲ್ಪ ಹಣವನ್ನೂ ಗಳಿಸಿಕೊಳ್ಳಬಹುದಾಗಿತ್ತು. "ಎಲಾ! ಎಂಥ ಮೂರ್ಖತನ ಮಾಡಿದೆವಲ್ಲ!" ಎಂದು ಅವರು ಮನಸ್ಸಿನಲ್ಲಿಯೆ ಮರುಗಿದರು. ಚೆನ್ನಿಯ ವ್ಯವಹಾರ ಕೌಶಲ್ಯಕ್ಕೆ ತಲೆದೂಗಿದರು.

ಚೆನ್ನಿಯ ಅಭಿಪ್ರಾಯ ನಗರದ ರಸಿಕರಿಗೆ ತಿಳಿಯಲು ತಡವಾಗಲಿಲ್ಲ. ಡಾ. ಇಂದ್ರಗೇರಿಯವರೂ ಹರಕಸೆಟ್ಟಿಯವರೂ ಐವತ್ತು ರೂಪಾಯಿ ತೆರಲು ಒಪ್ಪಿ ಚೆನ್ನಿಯ ಭಕ್ತರಾದರು. ಹರಕಸೆಟ್ಟಿಯವರು ಮಾತ್ರ ಎರಡನೆಯ ಬಾರಿ ಬರಲು ಶಕ್ತರಾಗಲಿಲ್ಲ. ಇಂದ್ರಗೇರಿಯವರು ತಿಂಗಳಿಗೆ ನಾಲ್ಕಾರು ಬಾರಿ ಬಂದು

ಹೋಗತೊಡಗಿದರು. ಅವರ ಹಾಗೆ ದುಡ್ಡಿದ್ದ ಇತರ ರಸಿಕರೂ ಬರತೊಡಗಿದರು. ಆದರೆ ಅವಳ ಕರಾರು ಕೊಂಚ ವಿಲಕ್ಷಣವಾದುದು: ಅವಳ ಬಳಿ ಬಂದ ಗಿರಾಕಿ ಮಧ್ಯರಾತ್ರಿಯೊಳಗಾಗಿ ಹೊರಟುಹೋಗಲೇ ಬೇಕು. ಅದಕ್ಕಾಗಿ ಇಪ್ಪತ್ತು ರೂಪಾಯಿಗಳ ರಿಯಾಯತಿಯೂ ಸಿಕ್ಕಿತು. ಆ ರಿಯಾಯತಿ ಯಿಂದಾಗಿ ಮೋಜಣ್ಣವರು, ಕೃಷ್ಣರಾಯರು, ಚೈನೀ ಚಿದಂಬರರಾಯರು ಮತ್ತಿನ್ನಿತರರೂ ಬಂದು ಹೋಗಲು ಸಾಧ್ಯವಾಯಿತು.

ಬೇರೆ ಹುಡುಗಿಯರು ಸಿಕ್ಕದಿದ್ದಾಗ ಒಂದೆರಡು ಬಾರಿ ಅಪ್ಪಾಸಾಹೇಬನೂ ಅವಳಲ್ಲಿ ಬಂದು ಹೋದ. ಆದರೆ, ಅವಳ ಮನೆಯಲ್ಲಿ ಬಿದ್ದುಕೊಂಡಿರುವುದೆಂದರೆ ಅವನಿಗೆ ತುಂಬಾ ನಾಚಿಕೆಯೆನ್ನಿಸುತ್ತಿತ್ತು.

"ಇಲ್ಲಿಯ ತನಕ ಬರೂದಂದರೆ ನನಗ್ಯಾಕೋ ಬೇಸರು. ನೀನೇ ನಮ್ಮ ಬಂಗಲೆಗೆ ಬರುತ್ತಾ ಇರ್‍ತೀಯಾ ಚೆನ್ನೀ?" ಎಂದು ಅವನೊಂದು ಬಾರಿ ಕೇಳಿದ.

ಅಷ್ಟು ದಿನಗಳವರೆಗೆ ಯಾರ ಮನೆಗೂ ಹೋಗದಿದ್ದ ಚೆನ್ನಿ ಅಪ್ಪಾ ಸಾಹೇಬನಲ್ಲಿಗೆ ಹೋಗಲು ಸಂತೋಷದಿಂದ ಸಮ್ಮತಿಸಿದಳು. ಅಂಥ ದೊಡ್ಡ ದೇಸಾಯಿಯ ಪ್ರೇಯಸಿಯಾಗಿ ಅವನ ಬಂಗಲೆಗೇ ಹೋಗಿ ಅವನ ಮಂಚದ ಮೇಲೆಯೆ ಮಲಗಿಕೊಳ್ಳುವುದೆಂದರೆ ಅವಳಿಗೂ ಒಂದು ಹೆಮ್ಮೆಯ ಸಂಗತಿಯೇ ಆಯಿತು. ಅದರಿಂದ ಅವಳಿಗಾಗುವ ಲಾಭವೂ ಅಲ್ಪವಲ್ಲ. ತನ್ನ ಎಲ್ಲ ಗಿರಾಕಿ ಗಳಲ್ಲಿ ಅವಳು ಹೆಚ್ಚಾಗಿ ಮೆಚ್ಚಿಕೊಂಡುದುದು ಅಪ್ಪಾಸಾಹೇಬನನ್ನು. ಪ್ರತಿ ಸಲವೂ ನೂರು ರೂಪಾಯಿಯದೊಂದು ನೋಟನ್ನು ಕೊಟ್ಟು ಕಳಿಸುತ್ತಿದ್ದನಾತ. ಅಂಥ ಉದಾರಿಗಳು ಇನ್ನಾರಿದ್ದರು ನಗರದಲ್ಲಿ?

ಅವಳ ಗಿರಾಕಿಗಳದೂ ಒಂದು ವಿಚಿತ್ರ ರೀತಿ. ಒಬ್ಬ ಹೆಂಗಸಿನಿಂದ ತೃಪ್ತಿಪಟ್ಟುಕೊಳ್ಳುವ ಜಾತಿಯೇ ಅವರದಲ್ಲ. ದಿನದಿನವೂ ಹೊಸ ಹೊಸ ಹೆಣ್ಣೇ ಬೇಕು. ಅಂಥ ಗಿರಾಕಿಗಳನ್ನು ತೃಪ್ತಿಗೊಳಿಸುವುದಕ್ಕಾಗಿಯೇ ಚೆನ್ನಿ ನಿತ್ಯವೂ ಬೇರೆ ಬೇರೆ ಹೆಂಗಸರನ್ನೊದಗಿಸುವುದು ಅವಶ್ಯಕವಾಯಿತು. ಲೀಲಾದೇವಿ, ಗೌರೀದೇವಿ, ಸುಮಿತ್ರಾದೇವಿ, ಅಕ್ಕವ್ವ ಮೊದಲಾದವರೆಲ್ಲರೂ ಅವಳ ಬಳಗಕ್ಕೆ ಸೇರಿಕೊಂಡು ಅಷ್ಟು ಹಣ ಸಂಪಾದಿಸತೊಡಗಿದರು. ಅವರವರ ಅಂತಸ್ತಿಗೆ ಸರಿಯಾಗಿ ಅವರಿಗೆ ಗಿರಾಕಿಗಳೂ ಲಭಿಸತೊಡಗಿದರು. ಕಾಮ – ರತಿಯರ ನಿವಾಸಸ್ಥಾನವಾದಂತಾಯಿತು ಚೆನ್ನಿಯ ಮನೆ.

ಗಂಡಸರಿಗೆ ಇವಳ ಬಳಗದ ಹೆಣ್ಣುಗಳು ಹಳೆಯವಾಗಲು ತಡವಾಗಲಿಲ್ಲ. ಹೊಸ ಹೆಣ್ಣುಗಳ ಬೇಟೆಗೆ ಅಣಿಯಾದಳು ಚೆನ್ನಿ. ಆ ಚಾಳದಲ್ಲಿಯೆ ಅನೇಕ ಹುಡುಗಿಯರಿದ್ದರು. ಅವರೊಡನೆ ಅವಳು ಅದುವರೆಗೂ ಸಲುಗೆ ಬೆಳಸಿರಲಿಲ್ಲ. ಈಗ ಮಾತ್ರ ತಾನಾಗಿಯೆ ಅವರನ್ನು ಮಾತನಾಡಿಸಿ ಅವರ ಸುಖದುಃಖ ಕೇಳಿಕೊಂಡು ಅವರನ್ನು ಮನೆಗೆ ಕರೆದುತಂದು ಸಲುಗೆ ಬೆಳಸುವುದು ಅವಶ್ಯ ವಾಯಿತು. ಚಾಳದಲ್ಲಿ ಅನೇಕ ಹೆಂಗಸರಿಗೆ ಅನೇಕ ತೊಂದರೆಗಳು. ಸಾಮಾನ್ಯ ವಾಗಿ ಎಲ್ಲರನ್ನೂ ಕಾಡುತ್ತಿದ್ದುದು ಆರ್ಥಿಕ ತೊಂದರೆಯೇ. ಸರಿಯಾದ ಬಟ್ಟೆ ಬರೆಗಳಿಲ್ಲದೆ, ಸ್ನೋ ಪೌಡರುಗಳಿಲ್ಲದೆ, ಸಿನಿಮಾ ನಾಟಕ ನೋಡಲು ಕಾಸಿಲ್ಲದೆ ಕೊರಗುತ್ತಿದ್ದ ಹೆಂಗಸರೊಡನೆ ಗಾಢಸ್ನೇಹ ಬೆಳಸಿದಳು ಚೆನ್ನಿ. ಎಂಥ ದುಸ್ಥಿತಿಯಲ್ಲೂ ಗರತಿಯರಾಗಿಯೆ ಬಾಳಲಿಚ್ಛಿಸುವ ಹೆಂಗಸರ ಗೊಡವೆಗೆ ಹೋಗದೆ, ಸುಲಭವಾಗಿ ಕಾಲು ಜಾರುವಂಥ ದುರ್ಬಲ ಮನಸ್ಸಿನವರನ್ನೆಲ್ಲ ಬಲೆಗೆ ಹಾಕಿಕೊಂಡಳು, ಅವರ ತೊಂದರೆಗಳನ್ನು ದೂರಗೊಳಿಸಲು ಹತ್ತಿಪ್ಪತ್ತು ರೂಪಾಯಿ ಕೊಟ್ಟು ನೆರವಾದಳು. ಅವರನ್ನು ಸಿನಿಮಾ ನಾಟಕಗಳಿಗೆ ಕರೆದೊಯ್ದು ಸಮಯ ಸಾಧಿಸಿ, ತನ್ನ ಗಿರಾಕಿಗಳ ಸ್ನೇಹ ಮಾಡಿಕೊಟ್ಟು ಸುಖದ ಹಾದಿ ತೋರಿಸಿದಳು. ಹೊಸ ಹೊಸ ಹೆಣ್ಣುಗಳಿಗಾಗಿ ಬಾಯಿ ಬಾಯಿ ಬಿಡುತ್ತಿದ್ದ ಗಂಡಿಗೆ ಹೆಣ್ಣಾಯಿತು, ದುಡ್ಡಿಗಾಗಿ ಹಂಬಲಿಸುವ ಹೆಣ್ಣಿಗೆ ಸ್ವಲ್ಪ ದುಡ್ಡಾಯಿತು. ಇಬ್ಬರಿಗೂ ಉಪಕಾರ ಮಾಡಿದ ಚೆನ್ನಿಗೆ ಉಭಯತ್ರರಿಂದಲೂ ಕೃತಜ್ಞತೆಯ ಕಾಣಿಕೆ ಬಂದುವು. ಹಣ ತುಂಬಲು ಅವಳ ಟ್ರಂಕು ಸಾಲದಾಯಿತು.

ಚೆನ್ನಿಯ ಕಾರ್ಯಕ್ಷೇತ್ರ ವಿಶಾಲವಾದ ಹಾಗೆಲ್ಲ ಆ ಪುಟ್ಟಮನೆಯಲ್ಲಿ ಅನನುಕೂಲವಾಗುತ್ತ ಬಂತು. ಅಲ್ಲಿನ ವ್ಯವಹಾರಗಳನ್ನು ಕಂಡುಕೊಂಡ ಚಾಳದ ನಿವಾಸಿಗಳನೇಕರು ಮತ್ತೆ ಮತ್ತೆ ತಕರಾರು ಮಾಡತೊಡಗಿದರು. ನಗರದ ಫೌಜದಾರರಿಗೂ ದೂರು ಹೋಯಿತು.

"ಫೌಜದಾರರಿಗೂ ಗೊತ್ತಾಯಿತಂತಲ್ಲ ಚೆನ್ನೀ. ಮುಂದೆ ಹೆಂಗ ಮಾಡೂದು?" ಎಂದ ಬಸಲಿಂಗ.

"ಅವರೇನು ಮಾಡುತಾರ ಬಿಡು. ನಿನಗೂ ಅವರಿಗೂ ಬಹಳ ದೋಸ್ತಿ ಇರಬೇಕಲ್ಲ?"

"ದೋಸ್ತಿ ಇದ್ದರೇನಾತು ಚೆನ್ನೀ? ನಮ್ಮ ವಿರುದ್ಧ ಹತ್ತಿಪ್ಪತ್ತು

ತಕರಾರು ಹೋಗಿದಾವಂತೆ. ಫೌಜದಾರರಾದರೂ ಎಷ್ಟು ದಿನ ಅಂತ ಸುಮ್ಮ ನಿದ್ದಾರು? ನಮ್ಮಿಂದ ಲಂಚ ಹೊಡೆದು ಅವರು ಸುಮ್ಮನಿರುತಾರಂತ ಯಾರಾದರೂ ಡಿ.ಎಸ್.ಪಿ.ಗೆ ತಕರಾರು ಮಾಡಿದರೆ ಅವರ ಮ್ಯಾಲೇ ಬರುತ್ತೈತಲ್ಲ ಗೋಳು? ಅದಕ್ಕೇ ಈ ಮನೀ ಬಿಟ್ಟು ಬ್ಯಾರೆ ಕಡೆ ಎಲ್ಲಾದರೂ ಇಕ್ಕಟ್ಟಿನ ಸಂದಿಯೊಳಗಿನ ಮನಿ ನೋಡೂದು ಚಲೋದು."

"ಈ ಮನಿ ಅಂತೂ ಬಿಟ್ಟು ಬಿಡಾಕs ಬೇಕು. ಬಂದವರಿಗೆಲ್ಲ ಇದು ಸಾಕಾಗೂದಿಲ್ಲ. ಆದರೆ ಬ್ಯಾರೆ ಬಾಡಿಗೆ ಮನಿ ಬ್ಯಾಡs ಬ್ಯಾಡ. ಸ್ವತಾ ಕಟ್ಟಿಸಿ ಬಿಡೂಣು. ಅಂದರೆ ಯಾರ ಹಂಗೂ ಇರೂದಿಲ್ಲ," ಎಂದಳು ಚೆನ್ನಿ.

"ಹೌದೌದು. ಹಂಗೇ ಮಾಡೂಣು," ಎಂದು ಬಸಲಿಂಗನೂ ಉತ್ಸಾಹ ದಿಂದ ಹೇಳಿದ.

ಬಾಜೀರಾಯರೆದುರಿಗೆ ಆ ವಿಚಾರ ಪ್ರಸ್ತಾಪಿಸಿ ಅವರದೇ ಆದ ಒಂದು 'ಪ್ಲಾಟ್' ದೊರಕಿಸುದುದಾಯಿತು. ನಾರಾಯಣರಾಯರು ಮೂರು ನೂರು ರೂಪಾಯಿಗಳಿಗೆ ಕೊಂಡುಕೊಂಡಿದ್ದ ಆ ಸ್ಥಳ ಎರಡು ಸಾವಿರಕ್ಕೆ ಬಸಲಿಂಗನ ದಾಯಿತು. ಮಶೀರಾ ವ್ಯಾಪಾರದಲ್ಲಿ ಆ ಹಣವನ್ನು ಮುರಿದುಕೊಳ್ಳುವುದೆಂದೂ ಗೊತ್ತಾಯಿತು. ನಾಲ್ಕು ನೂರು ಸೀಸೆ ಮಶೀರಾ ತಂದು ಕೊಟ್ಟರೆ ಪ್ಲಾಟು ದಕ್ಕುವುದೆಂದು ಯೋಚಿಸಿ ಬಸಲಿಂಗನೂ ಸಂತುಷ್ಟನಾದ. ಕಟ್ಟಡವೆದ್ದು ನಿಲ್ಲುವುದಕ್ಕೂ ವಿಲಂಬವಾಗಲಿಲ್ಲ. ಚಿಕ್ಕದಾದರೂ ಹತ್ತು ಕೊಟಡಿಗಳನ್ನುಳ್ಳ ಮನೆಯೊಂದು ಬಸಲಿಂಗ-ಚೆನ್ನಿಯರದಾಯಿತು. ತಮ್ಮ ಬಳಗದವರಿಗೆಲ್ಲ ಒಂದು ಮೇಜವಾನಿಯನ್ನೇರ್ಪಡಿಸಿ ಗೃಹಪ್ರವೇಶೋತ್ಸವ ನೆರವೇರಿಸುವುದಾಗಿ ಅವರು ನಿರ್ಧರಿಸಿದರು.

ನಗರದ ಫೌಜದಾರರಾದ ಹರಿಹರರಾಯರಿಗೂ ಆಮಂತ್ರಣ ಹೋಯಿತು. ಅವರನ್ನು ಅದೇ ದಿನ ಬುಟ್ಟಿಗೆ ಬೀಳಿಸುವುದೆಂದು ಚೆನ್ನಿ ಗೊತ್ತುಮಾಡಿ ಕೊಂಡಿದ್ದಳು.

"ಪೌಜದಾರರು ಯಾವ ಜಾತಿಯವರು?" ಎಂದು ಕೇಳಿದಳು ಚೆನ್ನಿ.

"ಬ್ರಾಹ್ಮಣರು, ಶುದ್ಧ ಬ್ರಾಹ್ಮಣರು."

"ಹಾ! ಬ್ರಾಹ್ಮರು ಅಂದಿಯಾ! ಮಡೀ ಮೈಲಿಗೆ ಬಹಳ ಏನು ಹಾಂಗಾದರೆ?"

"ಮಡೀ ವೈಲಿಗೆ!" ಬಸಲಿಂಗ ಗಹಗಹಿಸಿ ನಕ್ಕು ಹೇಳಿದ: "ಹೆಂಗಸರು ಹೆಂಡ ಮತ್ತು ಮಾಂಸ ಯಾವದಕ್ಕೂ ಮಡೀ ವೈಲಿಗೆ ಮಾಡೂದಿಲ್ಲ ಅವರು. ನಮ್ಮ ಮೋಜಣ್ಣವರನ್ನೂ ಹಿಂದೆ ಹಾಕುತಾರ ಎಲ್ಲಾದರಾಗ!"

"ಹಾಂಗಿದ್ದರ ಚಿಂತಿಲ್ಲ," ಎಂದು ಉಸುರುಗರೆದಳು ಚೆನ್ನಿ.

ಗೃಹಪ್ರವೇಶದ ದಿನದ ಮೇಜವಾನಿಗೆ ಹರಿಹರರಾಯರು ತಮ್ಮ ಕೈಕೆಳಗಿನ ಮೂವರು ಅಧಿಕಾರಿಗಳ ಸಮೇತ ಆಗಮಿಸಿದರು. ಬಾಜೀರಾಯರು, ಅಪ್ಪಾಸಾಹೇಬ್, ಇಂದ್ರಗೇರಿ, ಮೋಜಣ್ಣವರ್, ಲೀಲಾದೇವಿ, ಶಾಂತಾದೇವಿ ಮೊದಲಾದವರೆಲ್ಲರೂ ಬಂದು ಸೇರಿದರು. 'ಇಂಪೀರಿಯಲ್ ಕೆಫೆ'ಯಿಂದ ಮಾಂಸದ ಅಡುಗೆಯನ್ನು ತರಿಸಲಾಗಿತ್ತು. ಮಶೀರಾಕ್ಕಂತೂ ಕೊರತೆಯೇ ಇರಲಿಲ್ಲ.

ಅಪ್ಪಾಸಾಹೇಬ್, ಇಂದ್ರಗೇರಿ, ಬಾಜೀರಾಯರು ಮತ್ತು ಫೌಜದಾರರು ಬಂದು ಮೇಜಿನ ಬಳಿ ಕುಳಿತರು. ಇನ್ನಿತರರು ಅಲ್ಲಿ ಇಲ್ಲಿ ಸೇರಿದರು. ಮಹಿಲಾ ಮಂಡಲವೂ ಗುಂಪುಗೂಡಿತು. ಫೌಜದಾರರೂ ಮತ್ತು ಅವರ ಜೊತೆಗಾರರೂ ಕೋಳಿಯ ಮಾಂಸದ ತಿಂಡಿಯ ಮೇಲೆ ಕೈಯೆಳೆದು ತೃಪ್ತರಾದರು. ಹತ್ತಿಪ್ಪತ್ತು ಸೀಸೆ ಮಶೀರಾ ಮುಗಿಯುತ್ತಲೂ ಫೌಜದಾರರನ್ನುಳಿದು ಇತರರೆಲ್ಲರೂ ಹೊರಟುಹೋದರು.

ಹೊಟ್ಟೆತುಂಬಾ ಕೋಳಿಯೂಟ ಹೊಡೆದು ಮೇಲೆ ಮಶೀರಾ ಜಡಿದಿದ್ದ ಫೌಜದಾರರಿಗೆ ಹೆಣ್ಣಿನ ಬಯಕೆಯಾಗುವುದು ಸಹಜವಾಗಿತ್ತು. ಅದನ್ನು ತೀರಿಸಿಕೊಂಡೇ ಹೋಗುವುದೆಂದು ನಿರ್ಧರಿಸಿ, ತಮ್ಮ ಕೈಕೆಳಗಿನ ಅಧಿಕಾರಿಗಳನ್ನೂ ಸಾಗಹಾಕಿ ಅವರೊಬ್ಬರೇ ಕುಳಿತುಕೊಂಡಿದ್ದರು. ಮೇಜನ್ನು ಶುಚಿಗೊಳಿಸಲು ಬಂದ ಚೆನ್ನಿಯ ಸುಂದರಮೂರ್ತಿ ಫೌಜದಾರರ ನಿದ್ದೆಗಣ್ಣನ್ನು ಸೆಳೆದು ಅವರನ್ನು ಮೂಢರನ್ನಾಗಿಸಿತು. ಆ ದಿನ ಚೆನ್ನಿ ಉದ್ದೇಶಪೂರ್ವಕವಾಗಿಯೇ ವಿಶೇಷವಾಗಿ ಅಲಂಕಾರ ಮಾಡಿಕೊಂಡಿದ್ದರು. ಬಿಳಿಯ ಜಾರ್ಜೆಟ್ ಸೀರೆಯುಟ್ಟು, ರೇಶಿಮೆಯ ಕುಪ್ಪಸತೊಟ್ಟು, ಕೊರಳಲ್ಲೊಂದು ಚಿನ್ನದ ಹಾರ ಧರಿಸಿದ್ದ ಚೆನ್ನಿ ವಿದ್ಯುತ್ಪ್ರಕಾಶದಲ್ಲಿ ಓಡಿಯಾಡುತ್ತಿದ್ದಂತೆ ಸಿನಿಮಾ ನಟಿಯ ಹಾಗೇ ಕಾಣಿಸುತ್ತಿದ್ದಳು.

ಫೌಜದಾರರ ಕಣ್ಣುಗಳಲ್ಲಿ ತೂಗುತ್ತಿದ್ದ ಬಯಕೆಯನ್ನು ಗುರುತಿಸಿ ಕೊಂಡ ಬಸಲಿಂಗ ಏನೋ ನೆಪಮಾಡಿ ಅಲ್ಲಿಂದ ಜಾರಿಕೊಂಡ.

ಚೆನ್ನಿ ಬಲೆ ಬೀಸಿದಳು:

"ಏನು ರಾವ್‌ಸಾಬರೆ, ಬಡವರ ಮನಿಯ ಊಟ. ರುಚಿಸಿತೋ ಇಲ್ಲೋ ನಿಮಗೆ?"

ಫೌಜದಾರರು ತೂಗಾಡುತ್ತಾ ಕುರ್ಚಿಯಿಂದೆದ್ದು ಚೆನ್ನಿಯ ಬಳಿ ಬಂದು ನಿಂತು,

"ಓಹ್ಹೋ....ರುಚಿಸದಿದ್ದೀತೇ? ನೀನೇ ಮಾಡಿದ್ದಿಯಾ ಅಡುಗೆಯನ್ನ? ಶಬ್ಬಾಸ್! ಇದ್ದರೆ ನಿನ್ನಂಥಾ ಹೆಂಡತಿ ಇರಬೇಕು," ಎಂದು ನುಡಿದು ಅವಳ ಹೆಗಲ ಮೇಲೆ ಕೈ ಹಾಕಿದರು.

"ಯಾಕ್ರೀ ರಾವ್ ಸಾಬರೆ, ನಿಮ್ಮ ಬಾಯಿಸಾಹೇಬರು ನಿಮ್ಮ ಮನಸ್ಸಿಗೆ ಬಂದಿಲ್ಲೇನ್ರೀ?" ಎನ್ನುತ್ತಾ ಚೆನ್ನಿ ಕೊರಳು ಕೊಂಕಿಸಿ ಓರೆನೋಟ ಬಿಟ್ಟಳು.

"ಬಾಯಿಸಾಹೇಬ ಮರ್‌ಗಯಿ. ಇನ್ನೊಂದು ಮದುವೆಯಾಗುವದದೆ. ನಿನ್ನಂಥಾ ಹೆಣ್ಣು ಸಿಕ್ಕರೆ ಮಾಡಿಕೊಳ್ತೇನಿ."

"ಹಾಂಗಾದರೆ ನನ್ನೇ ಮಾಡಿಕೊಂಡು ಬಿಡಿರಿ," ಎನ್ನುತ್ತಾ ಕಿಲಕಿಲನೆ ನಕ್ಕಳು ಚೆನ್ನಿ.

"ಅದಕ್ಕೇನು ಬಾ, ಈಗಲೇ ಆಗಿಬಿಡ್ತೇನಿ," ಎನ್ನುತ್ತಾ ಫೌಜದಾರರು ಅವಳನ್ನು ತಬ್ಬಿಕೊಂಡರು.

"ಅಯ್ಯಯ್ಯೋ! ರಾವ್‌ಸಾಬರೆ, ನನ್ನ ಗಂಡ....ನನ್ನ ಗಂಡ...." ಎಂದು ಬೇಕೆಂತಲೇ ಆಕ್ಷೇಪದ ಧ್ವನಿಯೆತ್ತಿದಳು ಚೆನ್ನಿ.

"ನಿನ್ನ ಗಂಡ? ನಾನೇ ನಿನ್ನ ಗಂಡ," ಎಂದರು ಫೌಜದಾರರು.

"ಬಸಲಿಂಗ....ಬಸಲಿಂಗ...."

"ಬಸಲಿಂಗ ಕುಂಯ್ ಅಂದರೆ ಗುಂಡು ಹಾಕಿಬಿಡ್ತೇನಿ ಅವಗೆ. ನೀನೇನು ಅಂಜಬೇಡ ಚೆನ್ನೀ," ಎಂದು ಫೌಜದಾರರು ಇನ್ನಷ್ಟು ಗಟ್ಟಿಯಾಗಿ ಅವಳನ್ನು ತಬ್ಬಿಕೊಂಡರು.

## ಹದಿನಾರು.... ಹೆಂಗಸರೂ ಕುಡಿದರು!

ಸಾಕ್ಷಾತ್ ಫೌಜದಾರರೇ, ಎಂದರೆ ನಗರದ ಪೋಲೀಸ್ ಪಡೆಯೇ ಚೆನ್ನಿಯ ಕ್ಕೈವಶವಾದ ಬಳಿಕ ಅವಳನ್ನಾರು ಕೇಳಬೇಕು? ಅವಳ ವಿರುದ್ಧವಾಗಿ ಸಾವಿರ ದೂರುಗಳು ಹೋದರೂ ಪೋಲೀಸರು ಕೈಬೆರಳನ್ನೂ ಎತ್ತಲಾರರು. ಫೌಜದಾರ್ ಸಾಹೇಬರು ಚೆನ್ನಿಯ ಅಡಿಯಾಳಾಗುತ್ತಲೂ ಬಸಲಿಂಗನ ಮಶೀರಾ ವ್ಯವಹಾರವೂ ನಿರಾತಂಕವಾಗಿ ನಡೆಯತೊಡಗಿತು.

ಆಗಾಗ ಅಲ್ಪಸ್ವಲ್ಪ ಮದ್ಯ ಸೇವಿಸುವ ಅಭ್ಯಾಸ ಚೆನ್ನಿಗೂ ಇದ್ದಿತಷ್ಟೆ. ಅವಳ ಬಳಗದ ಇತರ ಸ್ತ್ರೀಯರು ಮಾತ್ರ ಮದ್ಯವನ್ನೆಂದೂ ಮುಟ್ಟಿದವರಲ್ಲ. ಅವರನ್ನೆಲ್ಲ ಬಿಟ್ಟು ತಾನೊಬ್ಬಳೇ ಕುಡಿಯುವುದೆಂದರೆ ಹೇಗೆ ಹೇಗೋ ಅನ್ನಿಸದಿರಲಿಲ್ಲ ಚೆನ್ನಿಗೆ. ಅಂತೆಯೇ, ಅವರಿಗೂ ಕುಡಿತದ ಚಟ ಕಲಿಸಬೇಕೆಂದು ನಿಶ್ಚಯಿಸಿಕೊಂಡು ಅವಳೊಂದು ಉಪಾಯ ಹೂಡಿ ಒಂದು ದಿನ ಅವರೆಲ್ಲರನ್ನೂ ಊಟಕ್ಕೆ ಕರೆದಳು. ಬಾಜೀರಾಯರು ಮತ್ತು ತಾರಾಬಾಯಿಯವರನ್ನು ಮಾತ್ರ ಅವಳು ಕರೆಯಲಿಲ್ಲ.

ಬಸಲಿಂಗನ ಹೊಸಮನೆಯಲ್ಲಿ ಮೋಜಣ್ಣವರ್ ದಂಪತಿಗಳು, ಹರಕಸೆಟ್ಟಿ ದಂಪತಿಗಳು, ಮಡಿವಾಳ ದಂಪತಿಗಳು, ಡಾಕ್ಟರ್ ಇಂದ್ರಗೇರಿ ಮತ್ತು ಅವರ ತತ್ಕಾಲೀನ ಪ್ರೇಯಸಿ ನರ್ಸ್ ಕಮಲಾಬಾಯಿ, ಕೃಷ್ಣರಾಯರು ಮತ್ತು ಅಕ್ಕವ್ವ, ಜೈನೀ ಚಿದಂಬರರಾಯರು ಮತ್ತು ಅಕ್ಕವ್ವನ ಗೆಳತಿ ಯಲ್ಲವ್ವ ಮತ್ತು ಅಪ್ಪಾಸಾಹೇಬ್ ದೇಸಾಯಿ ಇವರೆಲ್ಲ ನೆರೆದರು. ಅಪ್ಪಾಸಾಹೇಬನಿಗಾಗಿ ಅಂದು ಹೊಸದೊಂದು ಹೆಣ್ಣಿನ ವ್ಯವಸ್ಥೆಯನ್ನೂ ಮಾಡಿದ್ದಳು ಚೆನ್ನಿ.

ರಾತ್ರಿಯ ಒಂಭತ್ತು ಗಂಟೆಯ ಸಮಯ. ಎಂಟು ಜನ ಗಂಡಸರು ಒಂದು ಕೊಟಡಿಯಲ್ಲೂ, ಅವರ ಎಂಟು ಜನ ಹೆಂಗಸರು ಇನ್ನೊಂದು ಕೊಟಡಿ

ಯಲ್ಲೂ ಸೇರಿದ್ದರು. ಊಟ ಮಾಡುತ್ತಿದ್ದ ಹಾಗೇ ಗಂಡಸರು ಮಶೀರಾ ಸೀಸೆಗಳನ್ನು ತೆರವು ಮಾಡುತ್ತಿದ್ದರೆ ಹೆಂಗಸರು ಲೆಮನ್ ಕುಡಿಯುತ್ತಿದ್ದರು. ಅದು ಹೆಸರಿಗೆ ಮಾತ್ರ ಲೆಮನ್ ಅಷ್ಟೆ. ಅದರ ವೈಶಿಷ್ಟ್ಯ ಮಾತ್ರ ಬೇರೆ ಯಾಗಿತ್ತು. ಯಾರಿಗೂ ಗೊತ್ತಾಗದಂತೆ ಚೆನ್ನಿ ಅದರಲ್ಲಿ ಮಶೀರಾ ಸೇರಿಸಿದ್ದಳು.

"ಇದೇನು, ಲೇಮನ್ ಇದ್ದ ಹಾಗಿಲ್ಲಲ್ಲ ಚೆನ್ನವ್ವಾ?" ಎಂದಳು ಲೀಲಾದೇವಿ.

"ಹೌದೌದು. ಏನೋ ಒಂದು ತರದ ರುಚಿ ಅದೆ," ಎಂದಳು ಗೌರೀದೇವಿ.

"ತಲೆ ತಿರುಗಿದ ಹಾಗಾಗುತದವ್ವಾ," ಎಂದಳು ಸುಮಿತ್ರಾದೇವಿ.

"ಹೊಟ್ಟೆಯೊಳಗೆ ಸುಟ್ಟ ಹಾಗಾಗುತದವ್ವಾ," ಎಂದಳು ಅಕ್ಕವ್ವ.

"ಇನ್ನಷ್ಟು ಕುಡೀರಿ. ಎಲ್ಲಾ ನೆಟ್ಟಗಾಗುತ್ತೈತಿ," ಎಂದು ನಗುನಗುತ್ತಾ ನುಡಿದಳು ಚೆನ್ನಿ.

ಅವರು ಇನ್ನಷ್ಟು ಕುಡಿದರು. ಚೆನ್ನಿ ಹೇಳಿದ ಹಾಗೇ ಆಯಿತು. ಅವರ ಹೊಟ್ಟೆಗಳೂ ತಲೆಗಳೂ ತಣ್ಣಗಾದುವು. ಕಣ್ಣು ಜಡವಾಗತೊಡಗಿದುವು. ಅವರವರಿಗಾಗಿ ಗೊತ್ತುಪಡಿಸಿದ್ದ ಕೊಟಡಿಗಳಿಗೆ ಅವರನ್ನೆಲ್ಲ ಕಳಿಸಿ ಅವರವರ ಗಂಡಸರನ್ನೂ ಕಳಿಸಿಕೊಟ್ಟಳು ಚೆನ್ನಿ. ಅಪ್ಪಾಸಾಹೇಬನಿಗೆಂದು ಬರಮಾಡಿ ಕೊಂಡಿದ್ದ ಹೆಣ್ಣನ್ನು ಕೂಡಿಸಿದ್ದ ಕೊಟಡಿಗೆ ಅವನನ್ನು ತಳ್ಳಿ ತಾನು ಬಸಲಿಂಗ ನೊಡನೆ ತನ್ನ ಕೊಟಡಿ ಸೇರಿಕೊಂಡಳು.

ಎಲ್ಲ ಜೋಡಿಗಳೂ ತಮ್ಮ ಕೊಟಡಿಗಳಲ್ಲಿ ಕೂಡಿ ತಮ್ಮ ಜೀವಮಾನದಲ್ಲಿ ಹಿಂದೆಂದೂ ಅನುಭವಿಸದಿದ್ದಂಥ ಅದ್ಭುತ ರೋಮಾಂಚಕಾರಕ ಆನಂದವನ್ನನು ಭವಿಸಿದರು. ಒಬ್ಬರ ಬಗೆಗೆ ಇನ್ನೊಬ್ಬರಿಗೆ ಅಭೂತಪೂರ್ವ ಆಕರ್ಷಣೆ, ಪ್ರೀತಿ, ಮೆಚ್ಚುಗೆ. ಈ ಮೊದಲು ಅನೇಕ ಬಾರಿ ತಾವು ಗಂಡ ಹೆಂಡಿರಾಗಿಯೂ ಪ್ರಿಯಕರ ಪ್ರೇಯಸಿಯರಾಗಿಯೂ ಕೂಡಿದ್ದುದಿತ್ತು – ಆದರೆ, ಇಂದಿನಂಥ ಅನುಭವ ಇದುವರೆಗೆ ದೊರಕದಿರಲು ಕಾರಣವೇನು ? ತಮ್ಮನ್ನು ಗೊಂದಲದಲ್ಲಿ ಕೆಡವಿದ ಈ ಪ್ರಶ್ನೆಗೆ ಆ ಹೆಂಗಸರಿಗೆ ಉತ್ತರ ಹೊಳೆದದ್ದು ಮುಂಜಾವಿನಲ್ಲಿ – ಲೆಮನ್ನಿನಲ್ಲಿ ಚೆನ್ನಿ ಮಶೀರಾ ಕೂಡಿಸಿದ್ದ ಸಂಗತಿಯನ್ನು ಅಕ್ಕವ್ವ ತಿಳಿದುಕೊಂಡು ಹೊರಗೆಡವಿದಾಗ. ಮದ್ಯ ಸೇವಿಸಿದುದಕ್ಕಾಗಿ ಅವರಿಗೆ ಕೊಂಚ ಹೇಸಿಕೆ

ಯೆನ್ನಿಸಿತಾದರೂ ರಾತ್ರಿಯ ಅನುಭವದ ಸವಿನೆನಪಿನಲ್ಲಿ ಅದು ಒಡನೆಯೆ ಮಾಯವಾಯಿತು.

ಅಪ್ಪಾಸಾಹೇಬನ ಮಟ್ಟಿಗೆ ಮಾತ್ರ ಅಂದಿನಿರುಳು, ಅವನ ವಿಲಾಸೀ ಜೀವನದ ಅಂಧಕಾರದಲ್ಲಿ ಬೆಳಕು ಬೀರಿದ ಇರುಳಾಗಿ ಪರಿಣಮಿಸಿತು.

ಅಂದು ರಾತ್ರೆ ಅವನು ವಿಶೇಷವಾಗಿ ಕುಡಿದಿದ್ದನಾದರೂ ಅವನಿಗೆ ಅರಿವು ತಪ್ಪಿರಲಿಲ್ಲ. ಕೊಂಚ ಮಬ್ಬುಗವಿದಂತಾಗಿದ್ದಿತಾದರೂ ತನ್ನ ಕೊಟಡಿಯಲ್ಲಿ ಮಲಗಿದ್ದ ಹೆಣ್ಣು ಸಾಧಾರಣ ದರ್ಜೆಯವಳಲ್ಲವೆಂಬುದನ್ನು ಅವನು ಒಡನೆಯೇ ಗುರುತಿಸಿಕೊಂಡ. ಗೋಡೆಯ ಕಡೆ ಮುಖ ತಿರುಗಿಸಿ ಮಲಗಿದ್ದ ಳಾಕೆ. ಅವಳ ನೀಳವಾದ ದೇಹ, ಗುಲಾಬಿಬಣ್ಣದ ಕೈಕಾಲುಗಳು, ದೊಡ್ಡದಾದ ತುರುಬು, ಹಿಂಭಾಗದ ವಕ್ರವಿನ್ಯಾಸಗಳನ್ನು ಕಂಡು ಅವನ ಬಯಕೆ ಕೆರಳಿ ನಿಂತಿತಾದರೂ ತಕ್ಷಣವೆ ಅವಳ ಹತ್ತಿರ ಹೋಗಲು ಅವನಿಗೇಕೋ ಅಧೈರ್ಯವೆನಿಸಿತು. ಒಂದೆರಡು ಗಳಿಗೆ ಹಾಗೇ ನಿಂತುಕೊಂಡ, ಮಂತ್ರ ಮುಗ್ಧನಂತೆ. ಅನಂತರ ಚೇತರಿಸಿಕೊಂಡು ಅವಳ ಬಳಿಸಾರಿ ಹತ್ತಿರ ಕುಳಿತುಕೊಂಡ, ಅವಳ ಬಲದೋಳನ್ನು ಮೆಲ್ಲನೆ ಮೇಲಕ್ಕೆತ್ತಿ ಮೃದುವಾಗಿ ಚುಂಬಿಸಿದ. ಅವಳ ದೇಹದ ಸುವಾಸನೆ ಅವನ ತಲೆಗೇರಿತು. ಇನ್ನು ತಡೆಯಲಾರದೆ ಆತ ಅವಳನ್ನು ತನ್ನತ್ತ ಹೊರಳಿಸಿಕೊಂಡ. ಅವಳ ಮುಖ ದೃಷ್ಟಿಗೆ ಬೀಳುತ್ತಲೂ ಆತನಿಗೆ ಆಶ್ಚರ್ಯದ ಆಘಾತವಾದಂತಾಯಿತು.

"ವಿಮಲಾ....ವಿಮಲಾ....ನೀನು....ನೀನು...." ಎನ್ನುತ್ತಾ ಅವಳ ಮುಖವನ್ನೆ ಮತ್ತೆ ಮತ್ತೆ ದಿಟ್ಟಿಸಿದ. ತಾನು ಬಹುದಿನಗಳಿಂದ ಬಯಸುತ್ತಿದ್ದ ಈ ಹುಡುಗಿ ಇಷ್ಟು ಬೇಗ, ಇಷ್ಟು ಸುಲಭವಾಗಿ ಕೈವಶವಾದುದನ್ನು ಕಂಡು ಅವನಿಗೆ ಆಶ್ಚರ್ಯವಾಗುವುದು ಸಹಜವಾಗಿತ್ತು.

ಅವಳ ಕೆನ್ನೆಗಳನ್ನು ಚುಂಬಿಸುತ್ತಾ ಆತ ಮತ್ತೆ ಮಾತನಾಡಿದ:

"ವಿಮಲಾ, ನನ್ನ ವಿಮಲಾ, ನೀನಿಲ್ಲಿಗೆ ಹ್ಯಾಗೆ ಬಂದೆ? ನೀನಾಗೇ ಬಂದಿಯಾ? ಅಥವಾ ಇವರು ನಿನಗೆ ಮೋಸಮಾಡಿ ಇಲ್ಲಿ ತಂದಿದ್ದಾರೋ?"

ನಿದ್ದೆಯಿಂದ ಜಡವಾಗಿದ್ದ ಕಣ್ಣುಗಳನ್ನು ಅವನತ್ತ ತಿರುಗಿಸಿ ವಿಮಲೆ ಮೌನವಾಗಿ ಬಿದ್ದುಕೊಂಡಿದ್ದಳು. ಮದ್ಯದಿಂದುಂಟಾದ ಅಮಲೂ ಅವಳ ಮೈಮರೆಯಿಸಿತ್ತು. ಅಪ್ಪಾಸಾಹೇಬ್ ಎದ್ದು, ಮೂಲೆಯಲ್ಲಿದ್ದ ತಂಬಿಗೆಯನ್ನು

ತಂದು ಸ್ವಲ್ಪ ನೀರನ್ನು ಅವಳ ಮುಖದ ಮೇಲೆ ಸುರಿದು ಕೈವಸ್ತ್ರದಿಂದ ಒರೆಸಿದ. ಆಗಲೂ ಅವಳಿಗೆ ಎಚ್ಚರವಾಗಲಿಲ್ಲ. ಯಾವುದೋ ಒಂದು ಸವಿಗನಸನ್ನು ಕಾಣುತ್ತಿದ್ದವರ ಹಾಗೆ ಅವಳು ತುಟಿಗಳನ್ನು ತೆರೆದು ಮುಗುಳ್ನಗುತ್ತಾ ಮಲಗಿಕೊಂಡಿದ್ದಳು.

ಅವಳು ಜಾಗೃತಾವಸ್ಥೆಗೆ ಬಂದದ್ದು ಒಂದೆರಡು ಗಂಟೆಗಳ ತರುವಾಯ. ನಡೆದುದೆಲ್ಲವನ್ನೂ ಅರಿತುಕೊಂಡ ಬಳಿಕ ಅವಳು ಮುಖ ಮುಚ್ಚಿಕೊಂಡು ನಾಚಿಕೆಯ ಜುಗುಪ್ಸೆಯ ಕಣ್ಣೀರು ಸುರಿಸಿದಳು.

ಅವಳ ಅಳುವಿನ ಅರ್ಥವಾಗದೆ ಅಪ್ಪಾಸಾಹೇಬ್ ಗೊಂದಲದಲ್ಲಿ ಸಿಕ್ಕಿಕೊಂಡ. ಅವಳು ತಾನಾಗಿಯೆ ಸ್ವಸಂತೋಷದಿಂದಲೇ ತನ್ನೊಡನೆ ಇರುಳು ಕಳೆಯಲು ಬಂದಿರಬಹುದೆಂದು ಆತ ಭಾವಿಸಿದ್ದುದು ತಪ್ಪೆಂದು ತೋರತೊಡಗಿತು.

" ಯಾಕೆ ಅಳುತ್ತೀ ವಿಮಲಾ ? ಏನಾಯ್ತು ? ಏನಾಯ್ತು ?"

ಅವಳು ಉತ್ತರವೀಯಲಿಲ್ಲ. ಅವನ ಪಾದಗಳ ಮೇಲೆ ಹಣೆಯನ್ನಿಟ್ಟು ಬಿಕ್ಕುತ್ತ ಬಿಕ್ಕುತ್ತ ಅಳತೊಡಗಿದಳು.

" ಏನಾಯ್ತು ವಿಮಲಾ ? ಹೇಳು. ಹೇಳು. ನಾನು ತಪ್ಪುಮಾಡಿದೆನೇ ? ನಿನಗೆ ಮನಸಿರಲಿಲ್ಲವೇ ? ಹೇಳು. ಹೇಳು."

" ಚೆನ್ನವ್ವ ನನಗೆ ಮೋಸ ಮಾಡಿದಳು. ಹೀಗೆಲ್ಲಾ ಆದೀತಂತ ನನಗೆ ಗೊತ್ತಿರಲಿಲ್ಲ. ಅವಳ ಮಾತು ನಂಬಿ ಬಂದಿದ್ದೆ."

" ಏನು ಹೇಳಿದ್ದಳು ಚೆನ್ನವ್ವ ?"

ಸೀರೆಯ ಸೆರಗಿನಿಂದ ಕಂಬನಿಗಳನ್ನೊರಸಿಕೊಂಡು ವಿಮಲೆ ತಡೆ ತಡೆಯುತ್ತ ಹೇಳಿದಳು :

" ನೀವು ನನ್ನ ಸಂಗಡ ಮಾತಾಡಬೇಕೆಂತ ಇದ್ದೀರಿ ಅಂತ ಹೇಳಿದಳು – ನೀವು ನನ್ನನ್ನ ಮದುವೆಯಾಗುವ ಆಶೆಯಿಂದ. ನಾ ಬರಬಾರದಾಗಿತ್ತು. ಬುದ್ಧಿಯಿಲ್ಲದ ಹುಡುಗಿ. ಬಂದುಬಿಟ್ಟೆ. ಅವಳು ಏನೋ ಕುಡಿಸಿಬಿಟ್ಟಳು. ನನಗೆ ಎಲ್ಲಾ ಮರೆತುಹೋಯ್ತು....ಹೋಯ್ತು....ಎಲ್ಲಾ ಹೋಯ್ತು...."

ಮತ್ತೆ ಅವಳು ಕೈಗಳಲ್ಲಿ ಮುಖ ಮುಚ್ಚಿಕೊಂಡು ಬಿಕ್ಕುತ್ತ ಬಿಕ್ಕುತ್ತ ಹೇಳಿದಳು :

" ಅಯ್ಯೋ ! ನಾನಿನ್ನು ನನ್ನ ತಾಯಿಗೆ ಮೋರೆ ಹ್ಯಾಗೆ ತೋರಿಸಲಿ ?

ಇದುವರೆಗೆ ಎಂದೂ ಅಡ್ಡಹಾದಿ ಹಿಡಿದವಳಲ್ಲ ನಾನು. ಅಯ್ಯೋ.... ಅಯ್ಯೋ...."

ಅಪ್ಪಾಸಾಹೇಬ್ ಕಲ್ಲಿನಂತೆ ಕುಳಿತುಕೊಂಡಿದ್ದ. ಅವನ ಬಾಯಿಯಿಂದ ಮಾತೇ ಹೊರಡಲಿಲ್ಲ. ತನ್ನ ಪಾದಗಳ ಮೇಲೆ ಬಿದ್ದು ಪಶ್ಚಾತ್ತಾಪದಿಂದ ಕಂಬನಿಗರೆಯುವ ಹೆಣ್ಣನ್ನು ಆತ ಅದುವರೆಗೂ ಕಂಡಿರಲಿಲ್ಲ. ಎಲ್ಲ ಹೆಣ್ಣುಗಳೂ ಅವನ ಹತ್ತಿರ ನಗುನಗುತ್ತಲೇ ಬಂದು ನಗುನಗುತ್ತಲೇ ಹೊರಟುಹೋಗುತ್ತಿದ್ದುವು. ಆದರೆ ಈ ಹೆಣ್ಣಿನ ರೀತಿ ಮಾತ್ರ ಬೇರೆಯಾಗಿತ್ತು. ತನ್ನೊಡನೆ ಮಾತನಾಡಬೇಕೆಂಬ ಉದ್ದೇಶದಿಂದ ಇಲ್ಲಿಗೆ ಬಂದಿದ್ದ ಈಕೆ ಹೀಗೆ ಮೋಸ ಹೋಗಿದ್ದಳು. ಮುಂದೇನು ಮಾಡುವುದು? ಇವಳನ್ನು ಹೇಗೆ ಸಂತೈಸುವುದು? ಅಪ್ಪಾಸಾಹೇಬನಿಗೆ ಯಾವುದೂ ಹೊಳೆಯಲಿಲ್ಲ.

"ನೀವು ನನ್ನ ಕೈಬಿಡಬಾರದು. ಕೈಬಿಡಬಾರದು...." ಎನ್ನುತ್ತಾ ಮತ್ತೆ ಅವನ ಕಾಲುಗಳನ್ನು ಹಿಡಿದುಕೊಂಡಳು ವಿಮಲೆ.

ಅವನು ಮತ್ತೂ ತಬ್ಬಿಬ್ಬಾದ. ಕೈ ಬಿಡಬಾರದು? ಅಂದರೇನು? ಆದರೆ – ತಾನು ಅವಳನ್ನು ಮದುವೆಯಾಗಬೇಕು – ಮದುವೆ....

ಅಪ್ಪಾಸಾಹೇಬ್ ಮನಸ್ಸಿನಲ್ಲಿಯೆ ಯಾವುದೋ ನಿರ್ಧಾರಕ್ಕೆ ಬಂದು, ಅವಳನ್ನೆತ್ತಿ, ಅವಳ ಕಂಬನಿಗಳನ್ನೊರೆಸಿ, ಚಿಕ್ಕ ಮಕ್ಕಳನ್ನು ಸಂತೈಸುವಂತೆ ಅವಳನ್ನು ಸಂತೈಸಿ ಹೇಳಿದ:

"ನಡೆ ವಿಮಲಾ. ಈಗ ನಿನ್ನ ಮನೆಗೆ ಕಳಿಸುತ್ತೀನಿ. ನೀನು ಇಲ್ಲೇ ಇರೂದು ಚಲೋದಲ್ಲ. ನೀನು ಹೇಳುವ ವಿಚಾರ ನಾಳೆ ಮಾತಾಡೋಣ."

ಅವಳು ಕೊಂಚವೂ ತಡಮಾಡದೆ ಎದ್ದು ಅವನನ್ನು ಅನುಸರಿಸಿದಳು. ಆತ ಅವಳನ್ನು ಕಾರಿನಲ್ಲಿ ಕೂಡಿಸಿ, ದೇಶಪಾಂಡೆ ಚಾಳ್ ಇನ್ನೂ ಕೊಂಚ ದೂರದಲ್ಲಿದ್ದಾಗ ಕಾರು ನಿಲ್ಲಿಸಿ ಅವಳನ್ನು ಕರೆದೊಯ್ದು ಮನೆಗೆ ಮುಟ್ಟಿಸಿದ.

"ನಾಳೆ ಕಾಲೇಜಿನ ಎದುರಿನ ಸುಂಕದ ಕಟ್ಟೆಯ ಹತ್ತಿರ ನಾನು ಬಂದಿರ್ತೀನಿ – ಸಂಜೆ ಏಳು ಗಂಟೆಗೆ, ನೀನೂ ಬಾ, ಮಾತಾಡೋಣ," ಎಂದು ಹೇಳಿದವನೆ ಕಾರಿನ ಕಡೆಗೆ ಹಿಂದಿರುಗಿ ನಡೆದ. ಕಾರು ಮತ್ತೆ ಚೆನ್ನಿಯ ಮನೆಗೆ ಹೊರಟಿತು.

ಆ ವೇಳೆಗಾಗಲೆ ಎಚ್ಚತ್ತುಕೊಂಡಿದ್ದ ಚೆನ್ನಿ ಅವನನ್ನು ಕಂಡೊಡನೆ ಕೇಳಿದಳು:

"ಎಲ್ಲಿಗೆ ಹೋಗಿದ್ದಿರಿ? ವಿಮಲೆಯೆಲ್ಲಿದಾಳೆ?"

"ಮೊದಲು ಒಂದು ಬಾಟಲು ಕೊಡು ಚೆನ್ನೀ. ಆಮೇಲೆ ಮಾತು."

ಬಾಟಲು ಬರಿಯದಾಗುತ್ತಲೂ ಮಾತಿಗೆ ಮೊದಲಾಯಿತು.

"ಎಂಥಾ ಭಯಂಕರ ಕೆಲಸ ಮಾಡಿಬಿಟ್ಟೆಯಲ್ಲ ಚೆನ್ನೀ. ಪಾಪ, ಆ ಹುಡುಗಿಯನ್ನ ಹೀಗೆ ಮೋಸಗೊಳಿಸಬೇಕೇನು?"

"ಮೋಸ? ನಾನೇನು ಮೋಸಮಾಡಿದಿನಿರಿ? ಏನಾದರೂ ಮಾಡಿ ಅವಳನ್ನ ಕೊಡಿಸಬೇಕಂತ ನೀವೇ ಹೇಳಿರಲಿಲ್ಲೇನು ನಾಲ್ಕೈದು ಸಾರಿ?"

"ಅದು ಸರಿ. ಆದರೆ....ಅವಳ ಮನಸ್ಸಿನ ವಿರುದ್ಧ...."

"ಎಲ್ಲಾ ಹೆಂಗಸರೂ ಮನಸ್ಸಿನಿಂದಲೇ ಹ್ಯಾಂಗ ಬಂದಾರು? ಇಂಥವರೂ ಇರುತ್ತಾರೆ. ಅವರ ಸಂಗ ಬೇಕೇಬೇಕಂತನಿಸಿದರೆ ಹೀಂಗೇ ಏನಾದರೂ ಮಾಡಬೇಕಾಗುತ್ತೈತಿ. ನಿನ್ನೆ ಸಂಜೆ ನನಗವಳು ಹಾದಿಯೊಳಗ ಭೆಟ್ಟಿಯಾದಳು. ಆ ಮಾತು ಈ ಮಾತು ಆಡುತಾ ಅವಳ ಮದುವೀ ಮಾತು ಬಂತು. ಬಿ.ಎ. ಪಾಸಾಗುವ ತನಕ ಮದುವೀ ಮಾಡಿಕೊಳ್ಳೂದಿಲ್ಲಂತ ಅವಳಂದಳು. ಮದುವೀ ಮಾಡಿಕೊಂಡು ಸಂಸಾರದ ಸುಖಾ ಉಣ್ಣುತಾ ಹಾಂಗೇ ಬಿ.ಎ.ನೂ ಮಾಡಿಕೋಬಹುದಲ್ಲಾ ಅಂತ ನಾ ಹೇಳಿದಿನಿ. ಮನಸಿಗೆ ತಕ್ಕ ವರಾ ಸಿಕ್ಕರೆ ಅದೂ ಆದೀತು ಅಂತ ಅವಳಂದಳು. ನಾ ಮೆಲ್ಲಗೆ ನಿಮ್ಮ ಸುದ್ದಿ ತಗದು ಅವಳ ವ್ಯಾಲ ನಿಮ್ಮದು ಬಹಳ ಪ್ರೀತಿ ಅಂತ ಹೇಳಿದಿನಿ. ನಿಮ್ಮನ್ನ ಮದುವೀ ಮಾಡಿಕೊಂಡರೆ ರಾಣಿಯ ಹಾಂಗ ಸುಖದಿಂದಿರಬಹುದು. ಮನಿಯೊಳಗ ಅತ್ತಿ ಮಾವಂದಿರ ಕಾಟನೂ ಇಲ್ಲ, ಅವಳೇ ಯಜಮಾನಿಯಾಗಿ ದರಬಾರು ನಡೆಸಬಹುದು ಅಂತೆಲ್ಲಾ ಹೇಳಿದಿನಿ. ಅವಳಿಗೂ ಆಸೆ ಹುಟ್ಟಿತು. ನಿಮ್ಮನ್ನ ಭೆಟ್ಟಿಯಾಗಿ ಎಲ್ಲಾ ಮಾತಾಡಿ ಗೊತ್ತುಮಾಡಬೇಕಂತ ಹೇಳಿದೆ. ಅವಳು ಬಂದಳು. ಭೆಟ್ಟಿಯಾದಳು. ಇದರೊಳಗೆ ನನ್ನದೇನು ತಪ್ಪು?" ಎಂದು ಬಡಬಡನೆ ಹೇಳಿಬಿಟ್ಟಳು ಚೆನ್ನಿ.

"ಇಲ್ಲ, ಇಲ್ಲ. ನಿನ್ನದೇನೂ ತಪ್ಪಿಲ್ಲ. ಆದರೆ ಈ ಪ್ರಕರಣ ಇಲ್ಲಿಗೇ ಮುಗಿಯುವದಿಲ್ಲ ಚೆನ್ನೀ. ಬಹಳ ಪೀಕಲಾಟ ಬಂದುಬಿಟ್ಟದೆ," ಎಂದು ಹೇಳಿ

ಅಪ್ಪಾಸಾಹೇಬ್ ಮತ್ತೊಂದು ಗ್ಲಾಸ್ ಮಶೀರಾ ಗಂಟಲಿಗಿಳಿಸಿ, ಚೆನ್ನಿಗೆ ನೂರು ರೂಪಾಯಿನದೊಂದು ನೋಟು ಕೊಟ್ಟು ಕಾರು ಹತ್ತಿಕೊಂಡು ಹೊರಟುಹೋದ.

ಅವನು ಹೊರಟುಹೋದಾಗ ಇನ್ನೂ ಮೂರುಗಂಟೆಯಾಗಿದ್ದಿತಷ್ಟೆ. ಚೆನ್ನಿಗೆ ಮತ್ತೆ ನಿದ್ದೆ ಬರಲಿಲ್ಲ. ಕತ್ತಲಲ್ಲಿ ದಾರಿ ಕಾಣದೆ ಅತ್ತಿತ್ತ ಅಲೆಯುವವರಂತೆ ಅವಳ ಚಿತ್ತ ನಾನಾ ಕಡೆಗೆ ತಿರುಗತೊಡಗಿತು.

"ಈ ಪ್ರಕರಣ ಇಲ್ಲಿಗೇ ಮುಗಿಯುವುದಿಲ್ಲ - ಪೀಕಲಾಟ...."

ಅಪ್ಪಾಸಾಹೇಬನ ಆ ಮಾತುಗಳು ಚೆನ್ನಿಯ ಮನಸ್ಸಿನಲ್ಲಿ ಮತ್ತೆಮತ್ತೆ ಪ್ರತಿಧ್ವನಿಸುತ್ತಿದ್ದುವು. ಏನು ಆ ಮಾತುಗಳ ಅರ್ಥ? ತಾನು ಮಾಡಿದ ಮೋಸಗಾರಿಕೆಯ ಕುರಿತು ವಿಮಲೆ ಬಾಜೀರಾಯರಿಗೆ ಹೇಳಿಬಿಡಬಹುದೋ ಏನೊ. ಸಹಜವಾಗಿಯೆ ಬಾಜೀರಾಯರು ಮುನಿದುಕೊಳ್ಳುವರು. ಮುಂದೆ ತನ್ನ ಮತ್ತು ಬಸಲಿಂಗನ ಗತಿಯೇನು?

ಬೆಳಗಿನ ಐದು ಗಂಟೆಗೆ ಅವಳು ಎಲ್ಲರನ್ನೂ ಎಚ್ಚರಗೊಳಿಸಿದಳು. ಜೋಡಿಗಳೆಲ್ಲ ಎದ್ದು ಮುಖ ತೊಳೆದುಕೊಂಡು ತಮ್ಮತಮ್ಮ ಮನೆಗಳ ಹಾದಿ ಹಿಡಿದರು. ಓರೆಕೋರೆನಗರದ ಬೀದಿಗಳಿಗೆ ಸೂರ್ಯಕಿರಣಗಳು ಭೆಟ್ಟಿಕೊಡುವ ಮೊದಲೇ ಅವರೆಲ್ಲರೂ ತಮ್ಮ ತಮ್ಮ ಮನೆಗಳನ್ನು ಸೇರಿ ಬಾಗಿಲು ಇಕ್ಕಿಕೊಂಡರು. ತಾವು ಮದ್ಯ ಸೇವಿಸಿದ ಸಂಗತಿ ಗೊತ್ತಾಗುತ್ತಲೂ ಹೆಂಗಸರಿಗೆಲ್ಲ ತುಸು ಅಸಹ್ಯವಾಯಿತಾದರೂ ಆ ರಾತ್ರಿಯ ದಿವ್ಯಾನುಭವವನ್ನು ನೆನೆದುಕೊಂಡಾಗ ಚೆನ್ನಿಯ ವಿಷಯವಾಗಿ ಅವರಲ್ಲಿ ಕೃತಜ್ಞತಾಭಾವವೂ ಉದಯವಾಯಿತು.

ಅಪ್ಪಾಸಾಹೇಬನ ಮನಃಸ್ಥಿತಿ ಮಾತ್ರ ವಿಚಿತ್ರವಾಗಿತ್ತು. ಈಗಾಗಲೇ ನೂರಾರು ಹೆಣ್ಣುಗಳ ರುಚಿ ನೋಡಿ ಬಲುಬೇಗ ಅವರನ್ನೆಲ್ಲ ಮರೆತುಬಿಟ್ಟದ್ದ ಆ ರಸಿಕಶಿರೋಮಣಿ ವಿಮಲೆಯನ್ನು ಮಾತ್ರ ಮರೆಯಲಾರದೆ ಚಡಪಡಿಸತೊಡಗಿದ್ದ, "ನನ್ನ ಕೈ ಬಿಡಬೇಡಿರಿ," ಎಂಬ ಅವಳ ಕಾತರದ ಕೂಗು ಅವನ ಕಿವಿಗಳಲ್ಲಿ ಮತ್ತೆ ಮತ್ತೆ ಮೊರೆಯುತ್ತಿತ್ತು.

ವಿಮಲೆ ತನಗೆ ತಕ್ಕ ವಧುವೆಂಬುದೇನೋ ನಿಜ. ಅವಳಿಗೆ ಸೌಂದರ್ಯವುಂಟು, ವಿದ್ಯೆಯುಂಟು, ಸುಸಂಸ್ಕೃತ ಮನಸ್ಸುಂಟು, ಕಲಾಭಿರುಚಿಯುಂಟು,

ಎಲ್ಲಾ ಇದ್ದರೂ ಸಾಮಾಜಿಕ ಅಂತಸ್ತು ಮಾತ್ರ ಇಲ್ಲ. ಅವರಿವರ ಮನೆಗಳಲ್ಲಿ ಕಸಮುಸುರೆ ಮಾಡಿ ಹೊಟ್ಟೆ ಹೊರೆಯುವ ದಾಸಿಯ ಮಗಳು ವಿಮಲಾ. ತನ್ನಂಥ ದೊಡ್ಡ ದೇಸಾಯಿ, ಘನತೆವೆತ್ತ ಮನೆತನದವನು, ಇಂಥವಳನ್ನು ಮದುವೆಯಾದರೆ ಸಮಾಜ ಅಪಹಾಸ್ಯ ಮಾಡದಿರುವುದೇ? ತನ್ನ ಅತ್ತೆ ಮಾವಂದಿರು, ನಿರ್ಮಲಾ ಏನೆನ್ನಬಹುದು? ಕ್ಲಬ್ಬಿನ ಗೆಳೆಯರೇನೆನ್ನಬಹುದು? ಛೆ. ಛೆ....

ಸಾಯಂಕಾಲ ಕಾಲೇಜಿನ ಬಳಿ ಅವಳನ್ನು ಕಾಣುವುದಾಗಿ ಆತ ವಚನ ವಿತ್ತಿದ್ದ, ಅವಳನ್ನು ಕಾಣುವುದು ಸರಿಯೇ? ತನ್ನನ್ನು ನೋಡುತ್ತಲೂ ಅವಳು ಪುನಃ ಅದೇ ಬೇಡಿಕೆಯನ್ನು ಮುಂದೆ ಮಾಡುವುದು ನಿಶ್ಚಿತ. "ನನ್ನ ಕೈ ಬಿಡಬೇಡಿರಿ." ಅವಳಿಗೆ ಅರಿವಿಲ್ಲದಿದ್ದಾಗ ಅವಳ ಕೌಮಾರ್ಯವನ್ನು ಕೆಡಿಸಿ ಅಪರಾಧಿಯಾಗಿರುವ ತಾನು ಯಾವ ಮೋರೆಯಿಂದ ನಿರಾಕರಿಸುವುದು ಅವಳ ಬೇಡಿಕೆಯನ್ನು? ಹಾಗೆ ಮಾಡುವುದು ಕೇವಲ ನೀಚತನವೇ ಅಲ್ಲವೆ? ಸಿನಿಮಾಗಳಲ್ಲಿ ಬರುವ ಖಲನಾಯಕರ ಹಾಗೇ ತಾನೂ ಆಚರಿಸಿದರೆ ಹೇಗೆ?

ಹಾಗೆ ಯೋಚಿಸುತ್ತಿದ್ದಂತೆ ಅವನ ತಲೆಯಲ್ಲಿ ಇನ್ನೊಂದು ವಿಚಾರ ಸುಳಿಯಿತು ಹಠಾತ್ತಾಗಿ. ತಾನು ಅಪರಾಧವೆಸಗಿರುವುದೇನೋ ನಿಜ. ಅದಕ್ಕಾಗಿ ಅವಳ ಕ್ಷಮೆ ಯಾಚಿಸಬಹುದಲ್ಲ? ಮದುವೆಯ ಬಂಧನಕ್ಕೆ ತೊಡಕಿ ಕೊಳ್ಳುವ ಮನಸ್ಸು ತನಗಿಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಸಿ ಹೇಳಿ, ಅವಳಿಗಾಗಿ ಒಬ್ಬ ಯೋಗ್ಯ ವರನನ್ನು ಹುಡುಕಿ, ಎಂಟು ಹತ್ತು ಸಾವಿರ ರೂಪಾಯಿಗಳನ್ನು ಅವಳಿಗೆ ಕೊಟ್ಟು ಅವಳನ್ನು ಸಮಾಧಾನಪಡಿಸಬಹುದಲ್ಲ? ಇದೇ ಸರಿಯಾದ ಮಾರ್ಗವೆಂದು ಅವನಿಗೆ ಮನವರಿಕೆಯಾಯಿತು.

ಇತ್ತ ವಿಮಲೆ ರಾತ್ರೆ ಮನೆಗೆ ಬಂದು ಮಲಗಿದವಳು ನಿತ್ಯದಂತೆ ನಾಲ್ಕು ಗಂಟೆಗೇ ಎದ್ದಳು. ಆ ದಿನವೂ ಅವಳು ಸೂರ್ಯನಮಸ್ಕಾರ ಹಾಕುವ ತನ್ನ ನಿಯಮವನ್ನು ಮರೆಯಲಿಲ್ಲ. ದೇಸಾಯಿಯೇ ತನಗೆ ಪತಿಯಾಗಿ ದೊರಕಲೆಂದು ಮನಸ್ಸಿನಲ್ಲಿಯೆ ದೇವರನ್ನು ಬೇಡಿಕೊಳ್ಳುತ್ತ ಸೂರ್ಯನಮಸ್ಕಾರ ಹಾಕಿ ಮುಗಿಸಿದಳು. ಸಾಯಂಕಾಲ ದೇಸಾಯಿಯನ್ನು ನೋಡಬೇಕೇ ಬೇಡವೇ ಎಂಬ ವಿಚಾರದಲ್ಲಿಯೆ ಆ ದಿನವೆಲ್ಲ ಕಳೆದುಹೋಯಿತು – ಅಂದು ಅವಳು ಕಾಲೇಜಿಗೂ ಹೋಗಲಿಲ್ಲ. "ಮೈಯಲ್ಲಿ ಸೆಟ್ಟಗಿಲ್ಲವೇನಪ್ಪಾ?" ಎಂದು

ರಮಾಬಾಯಿ ಎಷ್ಟೋ ಬಾರಿ ಕೇಳಿದರೂ ಉತ್ತರವೀಯದೆ ಮೌನವಾಗಿ ಉಳಿದಳು. ಸಾಯಂಕಾಲ ತಾಯಿ ತನ್ನ ಕೆಲಸಕ್ಕೆ ಹೋಗುತ್ತಲೂ ವಿಮಲೆ ಬಾಗಿಲು ಇಕ್ಕಿಕೊಂಡು ಕಾಲೇಜಿನತ್ತ ನಡೆದಳು.

ಗೊತ್ತುಪಡಿಸಿದ ಸಮಯಕ್ಕೆ ಸರಿಯಾಗಿ ಕಾರು ಬಿಟ್ಟುಕೊಂಡು ಬಂದ ಅಪ್ಪಾಸಾಹೇಬ್ ವಿಮಲೆಯನ್ನು ಕೂಡಿಸಿಕೊಂಡು ಕಾರನ್ನು ಮುಂದೆ ಸಾಗಿಸಿದ. ಎರಡು ಮೂರು ಮೈಲು ದೂರ ಹೋಗುತ್ತಲೂ ಕಾರು ನಿಲ್ಲಿಸಿ ವಿಮಲೆಯನ್ನು ಕರೆದುಕೊಂಡು ಹೊಲಗಳಲ್ಲಿ ಹಾಯ್ದು ಮರಡಿಯೊಂದರ ಬಳಿ ಬಂದ.

“ ಕೂತುಕೋ ವಿಮಲಾ.”

ವಿಮಲೆ ಕೊಂಚವೂ ಸಂಕೋಚಪಟ್ಟುಕೊಳ್ಳಲಿಲ್ಲ. ಪತಿಯ ಸಮೀಪದಲ್ಲಿ ಹಕ್ಕಿನಿಂದ ಕುಳಿತುಕೊಳ್ಳುವ ಪತ್ನಿಯಂತೆ ಅವನ ಪಕ್ಕದಲ್ಲಿ ಕುಳಿತುಕೊಂಡಳು. ಆಗತಾನೆ ಪಶ್ಚಿಮದಲ್ಲಿ ಮುಳುಗಿಹೋಗಿದ್ದ ಸೂರ್ಯ. ಮುಗಿಲುಗಳಾಚೆ ಚಂದ್ರಬಿಂಬ ಮೆಲುಮೆಲನೆ ಮೊಗದೋರುತ್ತಿತ್ತು.

“ ವಿಮಲಾ, ನಿನ್ನೆ ನಾನು ಮಾಡಿದ್ದು ದೊಡ್ಡ ತಪ್ಪು. ನೀನು ದೊಡ್ಡ ಮನಸುಮಾಡಿ ನನ್ನನ್ನ ಕ್ಷಮಿಸಬೇಕು,” ಎಂದು ಗಂಭೀರವಾಗಿ ಕೇಳಿಕೊಂಡ ಅಪ್ಪಾಸಾಹೇಬ್.

ಅವಳು ಅಧೀರಳಾದಳು. ಮೊಟ್ಟಮೊದಲಲ್ಲಿಯೆ ಈ ಕ್ಷಮಾಯಾಚನೆ ಯೇಕೆ? ಅಪ್ಪಾಸಾಹೇಬನ ವಿಚಾರ ಯಾವ ಹಾದಿ ಹಿಡಿದು ಹೊರಟಿರ ಬಹುದು ? ತನ್ನನ್ನು ಮದುವೆಯಾಗುವ ಇಚ್ಛೆ ಅವನಿಗಿದೆಯೊ ಇಲ್ಲವೊ ? ಸುಲಭವಾಗಿ ಕ್ಷಮೆ ಪಡೆದುಕೊಂಡು ತನ್ನನ್ನು ಕೈಬಿಡುವ ಯೋಚನೆ ಅವನಿಗಿರ ಲಿಕ್ಕಿಲ್ಲವಷ್ಟೆ ?

“ ಕ್ಷಮೆ ಗಿಮೆಯ ಮಾತ್ಯಾಕೆ ಅಪ್ಪಾಸಾಹೇಬ್ ? ಆಗಬಾರದ್ದು ಆಗಿಹೋಯ್ತು. ನನ್ನ ದೇಹವಂತೂ ನಿಮ್ಮದಾಯ್ತು. ಇನ್ನು ಕಡೆಯ ವರೆಗೂ....”

ಏನನ್ನೋ ಹೇಳಬೇಕೆಂದು ಅಪ್ಪಾಸಾಹೇಬ್ ಬಾಯಿ ತೆರೆದ. ಅವನಿಗೆ ಮತ್ತೇನೋ ಹೊಳೆಯಿತು. ಬಾಯಿಯಿಂದ ಮಾತು ಬರಲಿಲ್ಲ. ನಿನ್ನೆಯ ಇರುಳು ಅವಳೊಡನೆ ಆರಂಭವಾದ ಸಂಬಂಧ ಕಡೆಯವರೆಗೂ ಮುಂದುವರಿಯ ಬೇಕು....ಹೇಗೆ ? ಹೇಗೆ ?

"ವಿಮಲಾ, ನನ್ನ ಕ್ಷಮಿಸು. ಇಂಥಾ ಸಮಸ್ಯೆ ಬರಬಹುದು ಅಂತ ನನಗೆ ತಿಳಿದಿರಲಿಲ್ಲ. ನಾನೂ ಸೆರೆಯ ಅಮಲಿನಲ್ಲಿದ್ದೆ. ಪೂರಾ ತಿಳಿವಳಿಕೆಯಿರಲಿಲ್ಲ. ಆಗಬಾರದ್ದು ಆಗಿಹೋಯ್ತು. ಆದರೆ, ಅದಕ್ಕಾಗಿ ನಾನು ನನ್ನ ಮನಸ್ಸಿನ ವಿರುದ್ಧ ಸ್ವಭಾವದ ವಿರುದ್ಧ ಏನನ್ನೂ ಮಾಡಲಾರೆ."

ನಿರಾಸೆಯ ಆಳಕ್ಕಿಳಿಯುತ್ತಿದ್ದ ಹಾಗೇ ಅವಳು ವ್ಯಥಿತಸ್ವರದಲ್ಲಿ ಕೇಳಿದಳು :

"ಅಂದರೆ? ಹಾಗಂದರೆ?"

"ಸ್ಪಷ್ಟವಾಗಿ ಹೇಳಿಬಿಡುತ್ತೀನಿ. ನಿನ್ನ ಮನಸಿಗೆ ನೋವಾಗಬಹುದು. ಆದರೂ ಹೇಳಿಬಿಡುವದೇ ಚಲೋದು. ಮದುವೆ ಅಂದರೇನೇ ನನ್ನ ಮೈಮೇಲೆ ಮುಳ್ಳು ಏಳುತ್ತವೆ ವಿಮಲಾ. ಸಾಯುವವರೆಗೂ ಹೀಗೇ ಒಂಟಿಗನಾಗೇ ಇರಬೇಕಂತ ನಾನು ಪ್ರತಿಜ್ಞೆ ಮಾಡಿದ್ದೀನಿ."

"ನಿಮ್ಮಿಷ್ಟಕ್ಕೆ ನೀವಿದ್ದರೆ ಅಡ್ಡಿಯಿಲ್ಲ. ನಮ್ಮಂಥ ಹುಡುಗಿಯರನ್ನ ಕೆಡಿಸಿ ಅವರ ಬಾಳ್ವೆ ಹಾಳುಮಾಡುತ್ತ ಹೊರಟರೆ ಹ್ಯಾಗೆ? ಇದೆಂಥಾ ಪ್ರತಿಜ್ಞೆಯೋ ನನಗಂತೂ ಅರ್ಥವಾಗೂದಿಲ್ಲ. ನನ್ನ ಶೀಲವಂತೂ ಹಾಳಾಯ್ತು, ಈಗ ಏನೋ ನೆವ ಹೇಳಿ ನನ್ನನ್ನೂ ಕೈಬಿಡುತ್ತೀರಿ. ಅಲ್ಲವೇನು?" ರೋಷ-ತಿರಸ್ಕಾರಮಿಶ್ರಿತ ಧ್ವನಿಯಲ್ಲಿ ಹೇಳಿದಳು ವಿಮಲೆ.

ಒಂದುಕ್ಷಣ ಸುಮ್ಮನಿದ್ದು ಅಪ್ಪಾಸಾಹೇಬ್ ಹೇಳಿದ :

"ನನ್ನ ಮಾತು ಸರಿಯಾಗಿ ಅರ್ಥಮಾಡಿಕೋ ವಿಮಲಾ. ನಿನ್ನನ್ನು ಕೆಡಿಸಲೇಬೇಕು ಅಂತ ನನ್ನ ಉದ್ದೇಶವಿರಲಿಲ್ಲ. ಏನೋ ಒಂದು ವಿಷನಿಮಿಷದಲ್ಲಿ ನಮ್ಮಿಬ್ಬರ ದೇಹಗಳು ಒಂದಾದವು. ಅಷ್ಟಾದರೆ ಸಾಕೇನು? ಮನಸ್ಸು ಹೃದಯ ಒಂದಾಗುವದು ಬೇಡವೇನು? ನಿನ್ನ ಬಗ್ಗೆ ನನಗೇನೂ ಪ್ರೀತಿಯಿಲ್ಲ ಅಂತ ಇದರರ್ಥವಲ್ಲ. ಆದರೆ ನಾನೊಬ್ಬ ವಿಚಿತ್ರ ಮನುಷ್ಯ. ನನಗೆ ಯಾವ ಬಂಧನವೂ ಬೇಡ. ನನ್ನಂಥವನನ್ನ ಕಟ್ಟಿಕೊಂಡು ಮುಂದೆ ನೀನು ಗೋಳಾಡಬಾರದೆಂತಲೇ ನಿನಗೆ ಇದೆಲ್ಲಾ ಹೇಳುತ್ತಿದೀನಿ. ಈಗಾಮದನ್ನೆಲ್ಲಾ ಮರೆತುಬಿಡೋಣ. ನಾನೂ ನೀನೂ ಒಬ್ಬರನ್ನೊಬ್ಬರು ಅರಿತುಕೊಳ್ಳೋಣ. ಕಡೆಗೂ ನಾವಿಬ್ಬರೂ ದೂರ ಇರುವದು ಅಶಕ್ಯವೆನ್ನಿಸಿದಾಗ ಮದುವೆಯಾಗಲೂ ಬಂದೀತು. ಅವಸರ ಮಾತ್ರ ಮಾಡಬೇಡ. ಅದರಿಂದ ನಿನಗೇ ತೊಂದರೆಯಾದೀತು."

## ಹದಿನೇಳು....                                    ನಿರ್ಮಲೆಯ ಮದುವೆ

ನಗರದಲ್ಲಿನ ಕೆಲವರು ಮಹಿಳೆಯರು ಮದ್ಯದ ರುಚಿ ನೋಡುತ್ತಲೂ ಅವರವರ ಗಂಡಂದಿರಿಗೆ ತುಂಬ ಪೀಕಲಾಟಕ್ಕಿಟ್ಟುಕೊಂಡಿತು. ಅವರು ತಮಗಾಗಿ ತಂದು ಕಪಾಟುಗಳಲ್ಲಿರಿಸುತ್ತಿದ್ದ ಮಶೀರಾ ಸೀಸೆಗಳು ಇದ್ದಕ್ಕಿದ್ದ ಹಾಗೆ ಖಾಲಿಯಾಗತೊಡಗಿದುವು. ಗಂಡಸರು ತಮ್ಮಷ್ಟಕ್ಕೆ ತಾವೇ ಗೊಣಗಿ ಕೊಳ್ಳುತ್ತಾ ಅಲ್ಲಿ ಇಲ್ಲಿ ಸಾಲಮಾಡಿ ಹೊಸ ಸೀಸೆಗಳನ್ನು ಕೊಂಡು ತಂದರು. ರಾತ್ರಿಯೂಟ ಮುಗಿದ ಬಳಿಕ ಒಂದು ಗ್ಲಾಸ್ ಮಶೀರಾ ಕುಡಿದು ಗಂಡಸರು ಮಲಗುವ ಕೊಟಡಿಗೆ ಹೋಗುತ್ತಲೂ ಹೆಂಗಸರೂ ಒಂದು ಗ್ಲಾಸ್ ಕುಡಿದೇ ಅವರನ್ನು ಹಿಂಬಾಲಿಸತೊಡಗಿದರು. ತಮ್ಮ ಹಾಗೇ ತಮ್ಮ ಸೌಭಾಗ್ಯವತಿಯರೂ ಗೋವಾದೇವಿಯ ಭಕ್ತರಾದುದನ್ನು ಕಂಡು ಗಂಡಸರಿಗೆ ಅಸಮಾಧಾನವೂ ಜುಗುಪ್ಸೆಯೂ ಉಂಟಾಗದಿರಲಿಲ್ಲ. ಸೆರೆ ಕುಡಿಯುವುದು ಭಾರತೀಯ ಸ್ತ್ರೀಯರಿಗೆ ಶೋಭಿಸತಕ್ಕ ವಿಚಾರವಲ್ಲವೆಂಬುದನ್ನು ಅವರ ಮನಸ್ಸಿನ ಮೇಲೆ ಬಿಂಬಿಸಲು ಗಂಡಸರು ಸಾಕಷ್ಟು ಯತ್ನಿಸಿದರಾದರೂ ಹೆಂಗಸರು ಆ ಮಾತು ಕೇಳಿ ಉಪಹಾಸದಿಂದ ನಕ್ಕು ತಮ್ಮ ಚಾಳಿಯನ್ನು ನಿರಾತಂಕವಾಗಿ ಮುಂದು ವರಿಸಿದರು. ಗಂಡಂದಿರಿಗೆ ಹೆದರಿಕೊಂಡು ನಡೆಯುವ ಹೆಂಗಸರೂ ಅವರಲ್ಲ. "ನೀವು ಮಾತ್ರ ಕುಡಿದು ಸುಖಪಡಬೇಕು. ನಾವ್ಯಾಕೆ ಕುಡೀಬಾರದು?" ಎಂದು ಲೀಲಾದೇವಿ ಸವಾಲು ಹಾಕಿದಾಗ ಹರಕಸೆಟ್ಟಿಯವರ ನಾಲಗೆ ತಣ್ಣ ಗಾಯಿತು. ಗೌರೀದೇವಿಯಂತೂ ತವರುಮನೆಯಿಂದ ಹಣ ತರಿಸಿಕೊಂಡು ಅದರಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗವನ್ನು ಗೋವಾದೇವಿಯ ಪಾದಕ್ಕೇ ಸುರಿಯ ತೊಡಗಿದಳು. ಅವಳಿಗೆ ಆ ವ್ಯಸನ ಅಂಟಿಕೊಳ್ಳುತ್ತಲೂ ಮೋಜಣ್ಣವರದೊಂದು ಸಮಸ್ಯೆಯೂ ತಾನಾಗಿಯೆ ಪರಿಹಾರವಾಯಿತು – ಮದ್ಯಕ್ಕಾಗಿ ಅವರಿವರ

ಮೋರೆ ನೋಡುತ್ತ ತಿರುಗುವ ಪ್ರಸಂಗವೇ ತಪ್ಪಿಹೋಯಿತು. ದಿನಗಳುರುಳಿದ ಹಾಗೆ ಗಂಡಸರು ಹೆಂಗಸರು ಒಟ್ಟುಗೂಡಿಯೆ – ಐರೋಪ್ಯರಂತೆ ಮದ್ಯ ಸೇವಿಸ ತೊಡಗಿದರು. ಹಣದ ಕೊರತೆಯೆನ್ನಿಸಿದಾಗ ಹೆಂಗಸರು ಸ್ವಸಂತೋಷದಿಂದ ತಮ್ಮ ಆಭರಣಗಳನ್ನು ತೆಗೆದುಕೊಟ್ಟರು. ಗಂಡಸರು ಅವುಗಳನ್ನು ವಿಕ್ರಯಿಸಿ ಚೆನ್ನಿಯಲ್ಲಿಗೆ ಓಡಿದರು.

"ನನ್ನ ದೈವ ಕಣ್ಣು ಬಿಟ್ಟಿತು. ಅವತ್ತು ರಾತ್ರಿ ನಾ ಮಾಡಿದ ತಂತ್ರ ಗೆದ್ದಿತು," ಎಂದು ಹೇಳಿಕೊಂಡು ಚೆನ್ನಿ ಕುಣಿದಾಡಿದಳು.

ಬಸಲಿಂಗ ವಾರಕ್ಕೊಂದು ಬಾರಿಯಾದರೂ ಗದ್ದೇಹಳ್ಳಿಗೆ ಹೋಗಿ ಬರಬೇಕಾಯಿತು. ಬಾಜೀರಾಯರ ಕಾರು ಹೊಸ ಹುರುಪಿನಿಂದ ಓಡಾಡ ತೊಡಗಿತು. ಗಿರಾಕಿಗಳ ಮನೆಯ ಚಿನ್ನವೆಲ್ಲವೂ ಚೆನ್ನಿ ಮತ್ತು ಬಾಜೀರಾಯರ ಮನೆಗಳಿಗೆ ಹರಿಯತೊಡಗಿತು. 'ಗಾಂಧೀಸದನ'ದ ಮುಂದಿನ ಕಟ್ಟಡಗಳೂ ಸಿದ್ಧವಾಗಿ ನಿಂತುವು. ಅವುಗಳಿಗೂ ಬಾಡಿಗೆದಾರರು ದೊರೆಯುವುದು ತಡವಾಗಲಿಲ್ಲ. ಆ ಕಟ್ಟಡ ಮುಗಿಯುತ್ತಲೂ 'ನೆಹರೂಸದನ'ದ ಕಟ್ಟಡದ ಕಾರ್ಯವೂ ಆರಂಭವಾಯಿತು. ಬಸಲಿಂಗನ ಬ್ಯಾಂಕ್ ಲೆಕ್ಕವೂ ಏರುತ್ತ ಬಂತು.

ಆದರೆ ಬಸಲಿಂಗನ ಇನ್ನುಳಿದ ವಕೀಲರ ಆರ್ಥಿಕಸ್ಥಿತಿ ಮಾತ್ರ ತುಂಬ ಹದಗೆಟ್ಟು ಹೋಯಿತು. ಅವರು ಹಣ ದೊರಕಿಸುವ ಮಾರ್ಗಗಳೇ ಕಾಣಲಿಲ್ಲ. ಅವರ ಹತ್ತಿರ ಕಕ್ಷಿಗಾರರು ಬರುವುದಂತೂ ಎಂದೋ ನಿಂತುಹೋಗಿತ್ತು. ಸಂಸಾರದ ಖರ್ಚು, ಮಶೀರಾ ಖರ್ಚುಗಳಂತೂ ನಡೆಯಲೇಬೇಕಲ್ಲವೆ? ಗಂಡಸರು ಹಾಗೆ ನಿಷ್ಕಾಂಚನರಾಗಿ ಕುಳಿತಾಗ ಅವರ ಹೆಂಗಸರೂ ಕುಳಿತರೆ ನಡೆದೀತೇ? ಅವರಿಗೂ ಮಶೀರಾ ಬೇಕು. ಷೋಕಿ ಬೇಕು. ಅದಕ್ಕಾಗಿ ಹಣ ಬೇಕು. ಹಣ ದೊರಕಿಸಲು ಬೇರಾವ ಹಾದಿಯೂ ಉಳಿಯಲಿಲ್ಲವಾದುದರಿಂದ ಅವರೂ ಚೆನ್ನಿಯನ್ನಾಶ್ರಯಿಸಬೇಕಾಗಿ ಬಂತು. ಚೆನ್ನಿಯೂ ದೊಡ್ಡ ಮನಸ್ಸು ಮಾಡಿ ಅವರಿಗೂ ಗಿರಾಕಿಗಳನ್ನೊದಗಿಸಿಕೊಟ್ಟು ಉಪಕಾರಮಾಡಿದಳು. ಲೀಲಾದೇವಿ ಮತ್ತು ಗೌರೀದೇವಿಯರು ಹಗಲಿರುಳೂ ಚೆನ್ನಿಯ ಮನೆಯಲ್ಲಿಯೆ ಕಾಲ ಕಳೆಯುವಂತಾಯಿತು. ಹರಕಸೆಟ್ಟಿಯವರು ಒಂದೆರಡು ಬಾರಿ ರೇಗಿದ ರಾದರೂ ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಮೋಜಣ್ಣವರಿಗಂತೂ

ಬೀದಿಯಲ್ಲಿ ಮುಖವೆತ್ತಿ ತಿರುಗುವುದೂ ಕಷ್ಟಕರವಾಯಿತು. ಕಿಸೆಯಲ್ಲಿ ಕಾಸಿಲ್ಲದ ಸಂಕಟ ಬೇರೆ. ಸಿಗರೇಟಿಗಾದರೂ ನಾಲ್ಕಾರು ಆಣೆ ಬೇಡವೆ? ಅವರು ಕೇಳುವುದಾದರೂ ಯಾರನ್ನು? ಅವರಿಗೆ ಕೊಡುವವರಾದರೂ ಯಾರು? ಮಾವನಿಂದ ಬರುವ ಸಹಾಯವಂತೂ ಎಂದೋ ನಿಂತುಹೋಗಿತ್ತು. ಗೌರೀ ದೇವಿಯಂತೂ ಗಂಡನನ್ನು ಕಂಡರೆ ಕಣ್ಣು ಕಿಸಿಯುತ್ತಿದ್ದಳು.

ಒಂದು ದಿನ ಕಾಫಿಗೂ ಗತಿಯಿಲ್ಲದಂತಾಗಲು ಮೋಜಣ್ಣವರು ಗಟ್ಟಿ ಮನಸ್ಸುಮಾಡಿ ಬಸಲಿಂಗನನ್ನು ಕೇಳಿದರು:

"ಒಂದೆರಡು ರೂಪಾಯಿ ಕೊಟ್ಟಿರು ಬಸಲಿಂಗಾ. ನಾಳೆ ನಾಡದು ಕೊಡ್ತೀನಿ."

ಬಸಲಿಂಗ ಇಲ್ಲವೆನ್ನಲಿಲ್ಲ. ವಕೀಲರು ಎರಡು ರೂಪಾಯಿ ಕೇಳಿದರೆ ಆತ ಐದು ರೂಪಾಯಿ ತೆಗೆದುಕೊಟ್ಟ. ಆದರೆ, ತನ್ನ ಈ ಔದಾರ್ಯ ತನಗೇ ಮುಳುವಾಗುವುದೆಂಬುದು ಅವನಿಗಾಗ ಗೊತ್ತಿರಲಿಲ್ಲ.

ಬಸಲಿಂಗನಿಂದ ಸಾಲ ಸಿಗುವುದೆಂಬ ಸಂಗತಿ ಗೊತ್ತಾಗುತ್ತಲೂ ವಕೀಲರೆಲ್ಲರೂ ಅವನನ್ನು ಹಣಕ್ಕಾಗಿ ಪೀಡಿಸತೊಡಗಿದರು. ಒಂದು ಕಾಲದಲ್ಲಿ ತನ್ನನ್ನು ಸಾಕಿದವರೆಂಬ ಕೃತಜ್ಞತಾಭಾವದಿಂದ ಬಸಲಿಂಗ ಒಂದೆರಡು ಬಾರಿ ಹಣ ಕೊಟ್ಟ. ಅವರು ಮತ್ತೆ ಮತ್ತೆ ಪೀಡಿಸತೊಡಗುತ್ತಲೂ ಅವನಿಗೂ ಗಾಬರಿಗಿಟ್ಟು ಕೊಂಡಿತು.

"ಅವರಿಗೆಲ್ಲಾ ಹೀಂಗ ಸಾಲಾ ಕೊಟ್ಟೆಯಂದರೆ ನಾವು ಗಳಿಸಿದ್ದೆಲ್ಲಾ ತೀರುವತನಕ ಬಿಡಾಕಿಲ್ಲ ಅವರು. ನಿನಗೇನು ಬುದ್ಧಿ ಗಿದ್ಧಿ ಐತ್ಯೋ ಇಲ್ಲೋ?" ಎಂದು ಚೆನ್ನಿ ಅವನನ್ನು ಗದರಿಸಿಕೊಂಡಳು.

ಬಸಲಿಂಗನಿಗೂ ಸರಿಯೆನಿಸಿತು ಅವಳ ಮಾತು. ಅಂದಿನಿಂದ ಆತ ವಕೀಲರುಗಳಿಗೆ ಸಾಲ ಕೊಡುವುದನ್ನು ಪೂರ್ತಿಯಾಗಿ ನಿಲ್ಲಿಸಿಬಿಟ್ಟ. ಅದರಿಂದಾಗಿ ಮುನಿದುಕೊಂಡ ವಕೀಲರುಗಳು ಅವನ ಹತ್ತಿರ ಮಾತ ನಾಡುವುದನ್ನು ಬಿಟ್ಟುಬಿಟ್ಟರು. ಗಂಡಸರು ಬಸಲಿಂಗನಿಂದ ದೂರವಾದರೂ ಅವರ ಹೆಂಗಸರು ಚೆನ್ನಿಯಿಂದ ದೂರವಾಗಲಿಲ್ಲ. ಅವರ ಸ್ನೇಹ ಮುಂದು ವರಿಯಿತು. ಯಾವ ಗಂಡಸಾದರೇನು, ಅವನಿಂದ ಹಣ ಬಂದರಾಯಿತು, ಅಲ್ಲವೆ? ಪೇಟೆಯಲ್ಲಿ ಅಂಗಡಿಯಿಟ್ಟ ವೇಶ್ಯೆಯರಿಗೂ, ಈ ವಕೀಲರುಗಳ

ಶ್ರೀಮತಿಯರಿಗೂ ಯಾವ ವ್ಯತ್ಯಾಸವೂ ಉಳಿಯಲಿಲ್ಲ. ಸುಮಿತ್ರೆಯೊಬ್ಬಳು ಮಾತ್ರ ಇಂಥ ಕೀಳುಸ್ಥಿತಿಗಿಳಿಯಲಿಲ್ಲ. ಅದರ ಅವಶ್ಯಕತೆಯೂ ಅವಳಿಗಿರಲಿಲ್ಲ. ಕೈತುಂಬ ಸಂಬಳ ದೊರಕಿಸುತ್ತಿದ್ದ ಅವಳು ಕಾಸಿಗಾಗಿ ಚೆನ್ನಿಯ ಮುಖ ನೋಡ ಬೇಕಾಗಿರಲಿಲ್ಲ.

ಕೃಷ್ಣರಾವ್ ವಕೀಲರ ಅಣ್ಣಂದಿರಾದ ಮಾಮಲೇದಾರ್ ಶ್ರೀನಿವಾಸ ರಾಯರು ಕೆಲಸದಿಂದ ನಿವೃತ್ತಿ ಪಡೆದು ಬಂದು ತಮ್ಮನ ಮನೆಯಲ್ಲಿಯೆ ಬಿಡಾರ ಹೂಡಿದರು. ಅದರಿಂದಾಗಿ ಅಕ್ಕವ್ವ ಅವರ ಮನೆಗೆ ಬರುವುದು ತಪ್ಪಿಹೋಯಿತು. ಪ್ರತಿಯಾಗಿ ಕೃಷ್ಣರಾಯರೇ ಅಕ್ಕವ್ವನ ಮನೆಗೆ ಹೋಗಿಬರುವುದಕ್ಕಾರಂಭ ವಾಯಿತು. ತಮ್ಮನ ಮದ್ಯ–ಮದಿರಾ ವ್ಯಸನಗಳ ವಿಚಾರ ಶ್ರೀನಿವಾಸ ರಾಯರಿಗೆ ತಿಳಿಯಲು ವಿಲಂಬವಾಗಲಿಲ್ಲ. ಅವನಿಗೆ ಬುದ್ಧಿ ಹೇಳಿ ಹಾದಿಗೆ ತರಬಲ್ಲೆನೆಂಬ ನಂಬುಗೆಯೂ ಅವರಲ್ಲಿರಲಿಲ್ಲ. ಅಂತೆಯೆ, ಅವನಿಂದ ದೂರವಿದ್ದು ಬಿಡುವುದೇ ಸರಿಯಾದ ಉಪಾಯವೆಂದು ಬಗೆದು ಶ್ರೀನಿವಾಸರಾಯರು ಬೇರೊಂದು ಮನೆ ಹಿಡಿದು ತಮ್ಮ ಪರಿವಾರವನ್ನು ಅಲ್ಲಿಗೆ ಸಾಗಿಸಿದರು. ಅಣ್ಣ ತಮ್ಮಂದಿರಲ್ಲಿ ಅಷ್ಟುದಿನ ಬೆಳೆದು ಬಂದಿದ್ದ ಪ್ರೇಮಾದರಗಳು ಮಾಯವಾಗ ತೊಡಗಿದುವು. ಆದರೂ ಶ್ರೀನಿವಾಸರಾಯರು ತಮ್ಮ ಕರ್ತವ್ಯವನ್ನು ಮರೆಯದೆ, ತಮ್ಮನಿಗೊಂದು ಮದುವೆ ಮಾಡುವ ಎತ್ತುಗಡೆಗೆ ತೊಡಗಿದರು. ಮದುವೆ ಯೊಂದನ್ನು ಮಾಡಿ ಮುಗಿಸಿದರೆ ತಮ್ಮ ಹೊಣೆಗಾರಿಕೆಯೂ ಮುಗಿಯುವು ದೆಂದುಕೊಂಡು ಅವರು ಕೃಷ್ಣರಾಯರಿಗಾಗಿ ವಧುಗಳನ್ನು ಹುಡುಕತೊಡಗಿದರು.

ಅವರ ಮನೆಯ ಸಮೀಪದಲ್ಲಿಯೆ ದೇಸಾಯಿ ರಾಮರಾಯರ ಮನೆಯಿತ್ತು. ಶ್ರೀನಿವಾಸರಾಯರಿಗೂ ರಾಮರಾಯರಿಗೂ ಸ್ನೇಹ ಬೆಳೆ ಯುವುದು ತಡವಾಗಲಿಲ್ಲ. ಇಬ್ಬರೂ ವಯಸ್ಸಾದ ಹಿರಿಯರು. ಒಬ್ಬರು, ತಮ್ಮ ಏಕಮಾತ್ರ ಪುತ್ರಿಯ ಮದುವೆಗಾಗಿ ಚಿಂತಿಸುತ್ತಿದ್ದರೆ ಇನ್ನೊಬ್ಬರು ತಮ್ಮ ಏಕಮಾತ್ರ ಸೋದರನ ಮದುವೆಗಾಗಿ ಚಿಂತಿಸುತ್ತಿದ್ದರು. ಅವರಿಬ್ಬರಿಗೂ ಇದ್ದುದು ಒಂದೇ ಚಿಂತೆಯಾದುದರಿಂದ ಅದರ ನಿವಾರಣೆಗಾಗಿ ಅವರಿಬ್ಬರೂ ಕೂಡಿ ಯೋಚಿಸುವುದಕ್ಕೂ ವಿಲಂಬವಾಗಲಿಲ್ಲ.

“ಏನ್ರೀ ರಾಮರಾಯರೇ, ನಮ್ಮದೂ ಕೂಡಾ ಒಂದು ರೀತಿಯಿಂದ ಇನಾಂದಾರರ ಮನೆತನವೇ ಅನ್ನಿರಿ. ಅಂತರವಳ್ಳಿಯ ಶಾನುಭೋಗರು ನಾವು.

ನಮಗೂ ಇನಾಂ ಜಮೀನುಗಳವೆ. ಆದರೆ ನಾವು ಕಲಿತವರಾಗಿ ಪಟ್ಟಣ ಸೇರಿದೆವು, ನಾನು ರೆವಿನ್ಯೂಖಾತೆಗೆ ಸೇರಿ ಮಾಮಲೇದಾರನಾದೆ. ನನ್ನ ತಮ್ಮ ವಕೀಲನಾದ. ಅವನ ಮದುವೆ ಮಾಡಿ ಮುಗಿಸಿಬಿಟ್ಟರೆ ನನ್ನ ಜವಾಬ್ದಾರಿ ಮುಗಿಯಿತು. ಮನೆಯಿಂದ ನಾಲ್ಕೈದು ಸಾವಿರದ ಉತ್ಪನ್ನವದೆ. ತಲಾ ಎರಡು ಸಾವಿರವಾದರೂ ಬರ್ತದೆ," ಎಂದು ಒಂದು ದಿನ ಮಾತಿಗಾರಂಭಿಸಿದರು ಶ್ರೀನಿವಾಸರಾಯರು.

"ಅಂದರೇನು, ಪಾಲು ಆಗುವ ವಿಚಾರವೋ ಏನು?" ಎಂದರು ರಾಮ ರಾಯರು.

"ಇಲ್ಲ, ಇಲ್ಲ. ಅದೇನು ಇಲ್ಲ, ಇದನ್ನೆಲ್ಲಾ ನಾನೀಗ ಯಾಕೆ ಹೇಳು ತ್ತಿದೀನಿ ಅನ್ನೂದು ನಿಮಗೆ ಗೊತ್ತಾಗಲಿಲ್ಲವೇನು? ಕೃಷ್ಣರಾಯನ ಮದುವೆಯ ದೊಂದು ಚಿಂತೆಯೇ ಆಗಿದೆ ನನಗೆ. ನಿಮಗೂ ನಿಮ್ಮ ಮಗಳ ಮದುವೆಯ ಚಿಂತೆ. ಅದಕ್ಕಾಗಿ...."

ಸ್ವಲ್ಪ ತಡೆದು ಶ್ರೀನಿವಾಸರಾಯರು ಮತ್ತೆ ಹೇಳಿದರು.

"ನಮ್ಮ ಹುಡುಗನಿಗೂ ನಿಮ್ಮ ಹುಡುಗಿಗೂ ಜೊತೆಯಾಗಬಹುದೋ ಏನೊ. ಅವಳೂ ಕಲಿತಾಕೆ. ನನ್ನ ತಮ್ಮ ಸ್ವಲ್ಪ ಕಪ್ಪು ಅಂತ ಆಕೆಗೆ ಸ್ವಲ್ಪ ಅಸಮಾಧಾನವಾಗಬಹುದೋ ಏನೊ. ಬಣ್ಣವೊಂದನ್ನ ಬಿಟ್ಟರೆ ಅವನಲ್ಲಿ ಯಾವ ಕುಂದಿದೆ? ಅವನಂಥ ಲಕ್ಷಣವಾದ ಯುವಕ ಇನ್ನೊಬ್ಬ ಸಿಕ್ಕಲಿಕ್ಕಿಲ್ಲ. ಅಲ್ಲವೇನು?"

"ಹೌದು. ಹೌದು. ಅದೂ ನಿಜ."

"ನೀವು ದೊಡ್ಡ ದೇಸಾಯರು. ನಾವು ನಿಮ್ಮಷ್ಟು ಶ್ರೀಮಂತರಲ್ಲ. ನಿಮ್ಮ ಮಟ್ಟ ನಮ್ಮದಲ್ಲ. ಆದರೂ ನಿಮ್ಮ ಮಗಳನ್ನ ಕೇಳುವ ಧೈರ್ಯ ಮಾಡಿದ್ದೀನಿ. ನೀವು ದೊಡ್ಡ ಮನಸ್ಸು ಮಾಡಿದರೆ ಅವರಿಬ್ಬರ ಕಲ್ಯಾಣ ವಾದೀತು. ನಾನು ಸ್ಪಷ್ಟ ಮಾತಾಡಿದ್ದಕ್ಕೆ ಸಿಟ್ಟಾಗಬೇಡಿರಿ."

"ಛೆ. ಛೆ. ಸಿಟ್ಟ್ಯಾಕೆ?"

"ನೋಡಿರಿ. ವಿಚಾರಮಾಡಿ ತಿಳಿಸಿರಿ. ನಿಮ್ಮ ಶ್ರೀಮತಿಯವರನ್ನ ಕೇಳಿರಿ. ಮಗಳನ್ನು ಕೇಳಿರಿ. ಆಮ್ಯಾಲೆ ತಿಳಿಸಿರಿ. ಅವನ ಕಪ್ಪುಬಣ್ಣದ

ವಾತು ಮಾತ್ರ ತೆಗೆಯಬೇಡಿರಿ.” ಶ್ರೀನಿವಾಸರಾಯರು ಮತ್ತೆ ತಡೆದು, ತುಸು ಕೆಮ್ಮಿ, ತಡೆತಡೆಯುತ್ತಾ ಹೇಳಿದರು: “ನಿಮ್ಮ ಮಗಳ ಚರಿತ್ರದ ಬಗ್ಗೆ ಜನರು ಏನೇನೋ ಮಾತಾಡುತ್ತಾರೆ. ನನ್ನ ಕಿವಿಗೂ ಬಿದ್ದಿವೆ. ಅದೇನು ಮಹತ್ವದ್ದು ಅಂತ ನನಗನಿಸುವುದಿಲ್ಲ. ತಾರುಣ್ಯದಲ್ಲಿ ಇಂಥವೆಲ್ಲಾ ನಡೆಯುವದು ಸ್ವಾಭಾವಿಕ. ನೀವೂ ಕೂಡಾ ತರುಣರಾಗಿದ್ದಾಗ ಬೇಕಾದಷ್ಟು ಮಜಾ ಮಾಡೀರಿ. ನಾನೂ ಮಾಡಿದ್ದೀನಿ. ಎಲ್ಲರೂ ಮಾಡುತಾರೆ. ನನ್ನ ತಮ್ಮನೂ ಅಷ್ಟಿಷ್ಟು ಮಾಡಿರಬೇಕು. ಅದೇನು ಕಡೆಯತನಕ ನಡೀತದೇನು?”

ರಾಮರಾಯರ ಎದೆಯ ಮೇಲಿನ ಭಾರವೊಂದು ಕಳಚಿಬಿದ್ದಂತಾಯಿತು. ಶ್ರೀನಿವಾಸರಾಯರಿಗೆ ಏನು ಹೇಳಬೇಕೆಂಬುದೇ ಹೊಳೆಯಲಿಲ್ಲ. ತಮ್ಮ ಮನೆತನದ ಸ್ಥಿತಿಗತಿಗಳನ್ನೂ ತಮ್ಮನ ಗುಣಾವಗುಣಗಳನ್ನೂ ಅವರು ಸ್ಪಷ್ಟವಾಗಿಯೇ ತಿಳಿಸಿದ್ದರು. ಕೃಷ್ಣರಾಯನ ಬಣ್ಣ ಕಪ್ಪು. ಸೆರೆ ಮತ್ತು ಸ್ತ್ರೀಯರ ದುರ್ವ್ಯಸನಗಳೂ ಅವನಿಗುಂಟು. ಅಂಥವನಿಗೆ ಮಗಳನ್ನು ಕೊಡುವುದು ಕಷ್ಟವೇ. ಆದರೆ ತಮ್ಮ ಮಗಳಾದರೂ ಎಂಥ ಮಗಳು? ತಮ್ಮ ಮಾತುಗಳಂತೆ ಅವಳೂ ನಡೆದುಕೊಳ್ಳುವುದಿಲ್ಲ. ಇತ್ತೀಚೆಗಂತೂ ಹದ್ದುಮೀರಿ ವರ್ತಿಸತೊಡಗಿದ್ದಾಳೆ. ಅವಳನ್ನು ಹತೋಟಿಯಲ್ಲಿಟ್ಟುಕೊಂಡು ತಮ್ಮ ಮರ್ಯಾದೆಯುಳಿಸಿಕೊಳ್ಳಬೇಕಾದರೆ ಸಾಕುಸಾಕೆನ್ನಿಸುತ್ತಿದೆ. ಅವಳಿಗೊಂದು ಮದುವೆಮಾಡಿ ಕೈತೊಳೆದುಕೊಂಡು ಬಿಡಬೇಕೆಂದರೆ ಯೋಗ್ಯ ವರಗಳೂ ಸಿಕ್ಕುತ್ತಿಲ್ಲ. ನಿರ್ಗತಿಕರಾದವರನೇಕರು ಕೇಳಿದರು. ಅಂಥವರಿಗೆ ತಮ್ಮ ಮಗಳನ್ನು ಕೊಡಲು ತಮಗೇ ಮನಸ್ಸಾಗಲಿಲ್ಲ – ತಮ್ಮ ಆಸ್ತಿಯ ಮೇಲೆ ಕಣ್ಣಿಟ್ಟು ನಿರ್ಮಲೆಯ ಕೈಹಿಡಿಯ ಬಯಸುವ ಜನ ಅದು....

ಜಮೀನ್ದಾರರ ಮನೆತನದಲ್ಲಿಯೇ ನಿರ್ಮಲೆಗೆ ವರ ಹುಡುಕಲು ಅವರು ಯತ್ನಿಸಿ ವಿಫಲರಾಗಿದ್ದರು. ನಿರ್ಮಲೆಯ ಚಾರಿತ್ರ್ಯದ ವಿಚಾರವಾಗಿ ಹರಡಿದ ಕಥೆ ಕೇಳಿದೊಡನೆ ಎಂಥವರೂ ಹಿಂದೇಟು ಹಾಕುತ್ತಿದ್ದರು. ಆ ಕಥೆಗಳಲ್ಲೂ ತಥ್ಯವಿರದಿರಲಿಲ್ಲ. ಅಪ್ಪಾಸಾಹೇಬನೊಡನೆ ಸಂಬಂಧ ತಂದುಕೊಂಡಿದ್ದ ನಿರ್ಮಲೆ ಅಷ್ಟಕ್ಕೇ ಆ ಕಾಯಕ ನಿಲ್ಲಿಸದೆ ತನ್ನ ಇತರ ಪರಿಚಿತ ಮಿತ್ರರೊಡನೆ ಸರಸ ಸಾಗಿಸಿಕೊಂಡು ಬಂದಿದ್ದಳು. ಆ ವಿಚಾರ ರಾಮರಾಯರ ಕಿವಿಗೆ ಬೀಳುವುದಕ್ಕೂ ವಿಲಂಬವಾಗಿರಲಿಲ್ಲ. ಮಗಳನ್ನು ಎದುರಿಗೆ ಕೂಡ್ರಿಸಿಕೊಂಡು

ಅವರು ಉಪಾಯವಾಗಿ ಬುದ್ಧಿವಾದ ಹೇಳಿದ್ದರು. ನಿರ್ಮಲೆ ಯಾವುದಕ್ಕೂ ಕಿವಿಗೊಡದೆ ಒರಟಾಗಿ ಉತ್ತರವಿತ್ತು ಎದ್ದು ಹೋಗಿದ್ದಳು. ಅವಳಿಗೆ ಮದುವೆ ಮಾಡಿಬಿಡುವುದೇ ಸೂಕ್ತ ಉಪಾಯವೆಂದು ಗಂಡಹೆಂಡರು ನಿರ್ಧರಿಸಿ ಅಂದಿನಿಂದ ಆ ಪ್ರಯತ್ನಕ್ಕಾರಂಭಿಸಿದ್ದರು. ನಿರ್ಮಲೆಯೂ ಗಂಡನಿಗಾಗಿಯೇ ಕಾದುಕೊಂಡಿದ್ದಳು. ಅಪ್ಪಾಸಾಹೇಬನಂತೂ ಸಿಗಲಿಲ್ಲವಲ್ಲ; ಇನ್ನು ಯಾವ ಸಾಹೇಬನಾದರೂ ಸರಿಯೆ, ಎಂಬ ವಿಚಾರ ಅವಳದು. ಕೃಷ್ಣರಾಯನನ್ನು ಅವಳು ಒಪ್ಪಿಕೊಂಡರೂ ಒಪ್ಪಿಕೊಳ್ಳಬಹುದೆಂದೇ ರಾಮರಾಯರಿಗೆನ್ನಿಸಿತು.

"ನನ್ನದೇನೂ ಅಡ್ಡಿಯಿಲ್ಲ ಶ್ರೀನಿವಾಸರಾಯರೆ– ನಮ್ಮ ಮನೆಯವರೂ ಬೇಡ ಅನ್ನಲಿಕ್ಕಿಲ್ಲ. ಮಗಳನ್ನೊಂದು ಮಾತು ಕೇಳಿ ತಿಳಿಸುತ್ತೀನಿ," ಎಂದು ಹೇಳಿ ರಾಮರಾಯರು ಅಂದಿನ ಮಟ್ಟಿಗೆ ಮಾತು ಮುಗಿಸಿದರು.

ಆ ವಿಚಾರ ಗೊತ್ತಾಗುತ್ತಲೂ ರಾಮರಾಯರ ಪತ್ನಿಗೂ ಸಮಾಧಾನ ವಾಯಿತು.

"ಕೃಷ್ಣರಾಯರು ವಕೀಲರು, ಕಲಿತವರು, ಮಗಳಿಗೆ ತಕ್ಕ ವರ. ಏನಡ್ಡಿಯಿಲ್ಲ ಬಿಡಿರಿ," ಎಂದಳಾಕೆ.

"ಬಣ್ಣ ಸ್ವಲ್ಪ ಕಪ್ಪಲ್ಲವೇನೆ?"

"ಕಪ್ಪಾದರೇನಾಯಿತು? ಸಾಕ್ಷಾತ್ ಶ್ರೀ ಕೃಷ್ಣಪರಮಾತ್ಮನೇ ಕಪ್ಪು ಬಣ್ಣದವನಾಗಿರಲಿಲ್ಲೇನು? ಶ್ರೀರಾಮದೇವರೂ ಕಪ್ಪುಬಣ್ಣದವರೇ ಅಲ್ಲವೇನು? ಕೃಷ್ಣರಾಯರು ನಮ್ಮ ಹೊಟ್ಟೆಯಲ್ಲೇ ಹುಟ್ಟಬಂದಿದ್ದರೆ ಅವರಿಗಾಗಿ ನಾವು ಎಲ್ಲಿಂದಲಾದರೂ ಹೆಣ್ಣು ತಂದು ಮದುವೆ ಮಾಡುತ್ತಿದ್ದೆವೋ ಇಲ್ಲೋ? ಅಲ್ಲದೆ ಅವರೇನು ನಿರ್ಗತಿಕರಲ್ಲ. ಮನೆಮಾರುಹೊಲ ಎಲ್ಲಾ ಅವೆ. ವತನದಾರ ಮನೆತನ. ಎಲ್ಲಾ ಎಲ್ಲಾ ಚಲೋದೇ ಅದೆ. ನಿರ್ಮಲೆಯೇ ಅವರನ್ನ ಮದುವೆಯಾಗಲು ಒಪ್ಪಿಯಾಳೋ ಇಲ್ಲೋ ಅಂತ ಅಂಜಿಕೆ ನನಗೆ. ಮೊದಲೇ ನಾಚಿಕೆಯಿಲ್ಲದ ಹೆಣ್ಣು."

ಆದರೆ, ನಿರ್ಮಲೆಯೇನೂ ಬೇಡವೆನ್ನಲಿಲ್ಲ.

ಅಂದು ಸಂಜೆ ಅವಳು ಕಾಲೇಜಿನಿಂದ ಬರುತ್ತಲೂ ರಾಮರಾಯರು ಅವಳ ಕೊಟಡಿಗೇ ಹೋಗಿ ಕುಳಿತು ಹೇಳಿದರು:

"ನಿರ್ಮಲಾ, ನೋಡವ್ವಾ, ನೀನೀಗ ಬೆಳೆದ ಹುಡುಗಿ. ತಿಳಿವಳಿಕೆಯೂ

ಅದೆ. ಅಪ್ಪಾಸಾಹೇಬನ ಸಂಗಡ ಒಮ್ಮೆ ನಡೆಯಬಾರದ್ದು ನಡೆದು ಹೋದದ್ದಕ್ಕಾಗಿ ನನಗೂ ನಿನ್ನ ತಾಯಿಗೂ ಎಷ್ಟು ದುಃಖವಾಗಿದೆಯೆನ್ನುವದೂ ನಿನಗೆ ಗೊತ್ತದೆ. ಒಮ್ಮೆ ಕಾಲು ಜಾರಿದವರನ್ನ ಮತ್ತೆ ಮೇಲೆತ್ತಿ ಹಿಡಿಯುವ ಸ್ವಭಾವ ನಮ್ಮ ಜನರದಲ್ಲ. ಅವರು ಹಾಗೇ ಕೆಟ್ಟು ಹಾಳಾಗಿಹೋಗುವಂತೆ ಮಾಡುತಾರೆ. ನೀನೂ ಹಾಗಾಗಬಾರದಲ್ಲ? ಅದಕ್ಕೇ ನಾನೂ ನಿನ್ನ ತಾಯಿಯೂ ಒಂದು ವಿಚಾರ ಗೊತ್ತುಮಾಡಿದ್ದೀವಿ. ನೀನು ನಮ್ಮ ಮಾತಿಗೆ ಎದುರುಹೇಳದೆ ನಾವು ಹೇಳಿದಂತೆ ಮಾಡಬೇಕು. ಆಂ, ಏನಂತೀ?"

"ಯಾವ ಮಾತು ಹೇಳಪ್ಪ."

"ಮತ್ತಾವ ಮಾತವ್ವಾ? ಅದೇ ನಿನ್ನ ಮದುವೆಯ ಮಾತು. ಕೃಷ್ಣರಾವ್ ವಕೀಲರನ್ನು ನೀನು ನೋಡಿರಬೇಕಲ್ಲ? ಅವರನ್ನ...."

"ಈ ವಿಚಾರ ನನಗೇನೂ ಕೇಳಬೇಡಪ್ಪಾ. ನೀನೂ ಅವ್ವನೂ ಗೊತ್ತು ಮಾಡಿದವರನ್ನ ನಾ ಆಗುತೀನಿ," ಎಂದಿಷ್ಟೆ ಹೇಳಿ ನಿರ್ಮಲೆ ಮಾತು ಮುಗಿಸಿದಳು.

ಅವಳು ಒಪ್ಪಿದ ವಾರ್ತೆ ತಿಳಿಯುತ್ತಲೂ ಶ್ರೀನಿವಾಸರಾಯರಿಗೆ ಪರಮ ಸಂತೋಷವಾಯಿತು. ಹತ್ತಿಪ್ಪತ್ತು ಸಾವಿರದ ವರ್ಷಾಶನವಿದ್ದ ದೇಸಾಯರ ಏಕಮಾತ್ರ ಕುವರಿ. ರಾಮರಾಯರ ಪಶ್ಚಾತ್ ತಮ್ಮ ತಮ್ಮನೇ ಆ ಆಸ್ತಿಯ ಒಡೆಯನಾಗುವನು. ತಮ್ಮನಿಗೊಂದು ಗಂಡು ಹುಟ್ಟಿದರೆ ಅದನ್ನೇ ರಾಮ ರಾಯರು ದತ್ತು ತೆಗೆದುಕೊಂಡಾರು. ಕೃಷ್ಣರಾಯನ ಭಾಗ್ಯವೇ ತೆರೆದಂತಾದೀತು....

ನಿರ್ಮಲೆಯನ್ನು ಮದುವೆಯಾಗಲು ಕೃಷ್ಣರಾಯರು ಸಂತೋಷದಿಂದಲೇ ಒಪ್ಪಿಕೊಂಡರು. ತನ್ನ ವಕೀಲವೃತ್ತಿಯಂತೂ ನಡೆಯುವಂತಿಲ್ಲ. ತಾನು ಗಳಿಸುವ ಯೋಗವೂ ಇಲ್ಲ. ತನ್ನ ಮೈಬಣ್ಣ ಬೇರೆ ಕಪ್ಪು. ಇಂದಿನ ಸುಶಿಕ್ಷಿತ ಯುವತಿಯರು ತನ್ನಂಥವನನ್ನು ಮದುವೆಯಾಗಲು ಸಿದ್ಧರಾಗುವುದು ಕಷ್ಟ, ಮದುವೆಯಾಗುವುದೇ ಆದರೆ ಯಾವುದೋ ಒಂದು ಕರಡಿಯಂಥ ಹುಡುಗಿ ಯನ್ನು ತಾನು ಕಟ್ಟಿಕೊಳ್ಳಬೇಕಾದೀತು. ಅಲ್ಲದೆ, ಮನೆತನದ ಉತ್ಪನ್ನವೂ ಅಲ್ಪ. ಸಂಸಾರವನ್ನು ಸುಖದಿಂದ ಸಾಗಿಸಲು ಆ ಉತ್ಪನ್ನ ಸಾಕಾಗಲಾರದು. ನಿರ್ಮಲೆಯಂಥ ಸುಂದರ ಸುಶಿಕ್ಷಿತ ಯುವತಿ, ಹತ್ತಿಪ್ಪತ್ತು ಸಾವಿರದ ಆಸ್ತಿಯ

ದೇಸಾಯರ ಏಕಮಾತ್ರ ಪುತ್ರಿ ತನಗೆ ಪತ್ನಿಯಾಗಿ ಲಭಿಸುವುದೆಂದರೆ ಅದೊಂದು ತನ್ನ ಪುಣ್ಯ. ಅವರ ಮನೆಯಳಿಯನಾಗಿ ತಾನು ಚಕ್ಕಂದ ದಿಂದಿರಬಹುದು....

ನಿರ್ಮಲೆಯ ಚಾರಿತ್ರ್ಯದ ವಿಚಾರವೂ ಕೃಷ್ಣರಾಯರಿಗೆ ಗೊತ್ತಿದ್ದುದೇ ಆಗಿತ್ತು. ಆದರೆ ಅಂಥ ಯಕಶ್ಚಿತ್ ವಿಚಾರಕ್ಕೆ ಅವರು ಹೆಚ್ಚು ಮಹತ್ವ ವೀಯಲು ಸಿದ್ಧರಾಗಲಿಲ್ಲ. ಚಾರಿತ್ರ್ಯ? ಶೀಲ? ಇಂದಿನ ದಿನಗಳಲ್ಲಿ ಇವುಗಳಿಗೆಲ್ಲ ಏನು ಬೆಲೆ? ಇಂದಿನ ಯಾವ ಅವಿವಾಹಿತ ತರುಣಿ ಕಾಯಾ ವಾಚಾ ಮನಸಾ ಪವಿತ್ರವಾಗಿ ಉಳಿದಿದ್ದಾಳೆ? ಶಾಲೆಯಲ್ಲಿ ಕಾಲೇಜಿನಲ್ಲಿ ಕಲಿಯುವ ಹುಡುಗರು ಹೇಗೆ ಕಾಲು ಜಾರುವರೋ ಹಾಗೇ ಹುಡುಗಿಯರೂ ಜಾರುವುದು ಸಹಜವಾದದ್ದು. ಚೆನ್ನಿಯ ಮನೆಯಲ್ಲಿ ಎಷ್ಟು ಜನ ಹೆಂಗಸರನ್ನು ತಾನು ನೋಡಲಿಲ್ಲ? ಅವರೇನು ಸೂಳೆಯರಲ್ಲ, ಕಸುಬಿನವರಲ್ಲ, ಒಳ್ಳೊಳ್ಳೆಯ ಮನೆತನಗಳ ಹೆಂಗಸರು – ಗಂಡಂದಿರೊಡನೆ ಬಾಳುವವರು, ಅಂಥವರೂ ಕೂಡಾ ಯಾವು ಯಾವುವೋ ಆವಶ್ಯಕತೆಗಳನ್ನು ಪೂರಯಿಸಿಕೊಳ್ಳಲೆಂದು ಅಡ್ಡದಾರಿಗೆ ಬಿದ್ದಿರಲಿಲ್ಲವೆ? ನಿರ್ಮಲೆಯೂ ತರುಣಿ. ಅವಳಿಗೂ ಗಂಡಿನ ಸಹವಾಸದ ಆಸೆ ಸ್ವಾಭಾವಿಕ. ತನಗೆ ಹೆಣ್ಣಿನ ಆಸೆಯಿಲ್ಲವೆ? ಹಾಗೇ ಅವಳಿಗೂ. ಏನೋ ಅಲ್ಪಸ್ವಲ್ಪ ಮೋಜು ಮಾಡಿದ್ದಾಳು. ಅದೇನು ಮಹಾ! ಎಲ್ಲರೂ ಮಾಡುತ್ತಾರೆ. ಮದುವೆಗೆ ಮೊದಲಿನ ಜೀವನವೇ ಬೇರೆ, ಅನಂತರದ್ದೇ ಬೇರೆ. ತನ್ನ ನಡೆವಳಿಕೆಯಾದರೂ ಎಷ್ಟು ಒಳ್ಳೆಯದು? ಚೆನ್ನಿ, ಅಕ್ಕವ್ವ, ಸುಮಿತ್ರಾ, ಯಶೋದಾ, ಗಂಗೆ, ಗೌರೀದೇವಿ, ಲೀಲಾದೇವಿ....ಒಬ್ಬರೇ ಇಬ್ಬರೇ? ತನ್ನಂಥ ಸುಪ್ರಸಿದ್ಧ ವ್ಯಭಿಚಾರಿಯನ್ನೂ ಮದುವೆಯಾಗಲು ನಿರ್ಮಲೆ ಒಪ್ಪಿಕೊಂಡಿರುವುದು ಅವಳ ಉದಾರ ಹೃದಯದ ಪ್ರತೀಕ. ಅಂಥವಳ ವಿಚಾರವಾಗಿ ಅಲ್ಲಸಲ್ಲದ ಸಂಶಯಗಳನ್ನು ತಲೆಯಲ್ಲಿ ತುಂಬಿ ಕೊಳ್ಳುವುದು ಅನ್ಯಾಯವೇ ಸರಿ.

ಅಪ್ಪಾಸಾಹೇಬನಿಗೂ ಅವಳಿಗೂ ಸಂಬಂಧವಿದ್ದಿತೆಂದು ಜನ ಆಡಿ ಕೊಳ್ಳುತ್ತಾರೆ. ಅದರಲ್ಲಿ ಎಷ್ಟು ನಿಜವಿದೆಯೋ ಎಷ್ಟು ಸುಳ್ಳಿದೆಯೋ. ಅಪ್ಪಾ ಸಾಹೇಬನ ಮನೆಯನ್ನು ಬಿಟ್ಟು ರಾಮರಾಯರು ಬೇರೆಯಾಗಲು ಇನ್ನೇ ನಾದರೂ ಕಾರಣವಿದ್ದರೂ ಇದ್ದೀತು. ಅವನು ಚಿಕ್ಕವನಾಗಿದ್ದುದರಿಂದ ರಾಮ

ರಾಯರು ಅವನ ಭಾರ ಹೊತ್ತುಕೊಂಡಿದ್ದರು. ಅವನ ಆಸ್ತಿಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದಾಗ ಅಷ್ಟಿಷ್ಟು ಹಣ ಎತ್ತಿಹಾಕಿ ಅವರು ತಮ್ಮ ಸ್ಥಿತಿಯನ್ನು ಸುಧಾರಿಸಿಕೊಂಡ ಸಂಗತಿಯನ್ನಂತೂ ನಗರವೆಲ್ಲ ಬಲ್ಲುದು. ಅವನು ಪ್ರಬುದ್ಧನಾಗಿ ತನ್ನ ಆಸ್ತಿಯ ವ್ಯವಸ್ಥೆಯನ್ನು ತಾನೇ ವಹಿಸಿಕೊಂಡ ಬಳಿಕ ಅವನೊಡನೆ ಇದ್ದು ಅವನ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುವುದಕ್ಕಿಂತ ಬೇರೆಯಿರುವುದೇ ಲೇಸೆಂದು ರಾಮರಾಯರು ಭಾವಿಸಿಕೊಂಡಿರಲು ಸಾಕು. ನಿರ್ಮಲೆಯನ್ನು ಅಪ್ಪಾಸಾಹೇಬನಿಗೆ ಕೊಟ್ಟು ಮದುವೆಮಾಡುವ ಯೋಚನೆಯೂ ರಾಯರಿಗಿದ್ದಿರಬೇಕು. ಹೆಣ್ಣು ಹೆತ್ತವರೆಲ್ಲರೂ ಅಂಥ ಅಳಿಯನನ್ನು ಬಯಸುವುದು ಸ್ವಾಭಾವಿಕ. ಆದರೆ, ತನ್ನ ಜೊತೆಯಲ್ಲಿ ಚಿಕ್ಕಂದಿನಿಂದಲೂ ಕೂಡಿ ಬೆಳೆದಿದ್ದ ನಿರ್ಮಲೆಯಲ್ಲಿ ಪ್ರೇಯಸಿಯ ಪ್ರೀತಿಯನ್ನೂ ಆಕರ್ಷಣೆಯನ್ನೂ ಕಾಣುವುದು ಸಾಧ್ಯವಾಗಿರಲಿಕ್ಕಿಲ್ಲ ಅಪ್ಪಾಸಾಹೇಬನಿಗೆ. ಅಂತೆಯೇ ಅವಳನ್ನು ಮದುವೆಯಾಗಲು ನಿರಾಕರಿಸಿರಬೇಕು. ಜನರು ಏನೇನೋ ಆಡುತ್ತಾರೆ. ನಿಜ. ಜನರು ಆಡುವುದಕ್ಕೆಲ್ಲ ಕಿವಿಗೊಟ್ಟು ಬಾಳುವೆ ನಡೆಸಲು ಸಾಧ್ಯವೇ ಈ ಪ್ರಪಂಚದಲ್ಲಿ? ನಿರ್ಮಲೆಯನ್ನು ಮದುವೆಯಾದರೆ ಐದಾರುಸಾವಿರವಾದರೂ ವರದಕ್ಷಿಣೆ ದೊರೆಯಬಹುದು – ಸಂಸಾರ ಸಾಗಿಸುವ ತಾಪತ್ರಯವೂ ಇಲ್ಲ. ಮಾವನ ಮನೆಯಲ್ಲಿಯೇ ತಳವೂರಿ ಆ ಮನೆಯೆದುರಿಗೇ ವಕಾಲತ್ತಿನ ಬೋರ್ಡು ಹಚ್ಚಿದರಾಯಿತು. ಅವರಿಗಾದರೂ ಯಾರಿದ್ದಾರೆ ಬೇರೆಯವರು? ಅವಳೇ ಮಗಳು, ಅವಳೇ ಮಗ ಎಲ್ಲಾ. ಅವರ ಹತ್ತಿರ ಇರುವ ಹಣ, ಬಂಗಾರ, ಒಡವೆಗಳೂ ಅವರ ಹೊಲಮನೆಗಳೂ ಕಡೆಗೆ ತನಗೇ ಸೇರುವಂಥವು....

ಸರಿ. ಭಾಗ್ಯದೇವತೆಯಂತೆ ಬಂದ ನಿರ್ಮಲೆಯನ್ನು ವಿವಾಹವಾಗಿಯೇ ಬಿಡುವುದು.

ಹಾಗೆ ಯೋಚಿಸಿ ಕೃಷ್ಣರಾಯರು ಅಣ್ಣನನ್ನು ಕುರಿತು ಹೇಳಿದರು:

"ಅಣ್ಣಾ, ನಾನು ವಕೀಲನೇನೋ ಹೌದು. ಆದರೆ ನಿನಗಿಂತ ಸಣ್ಣವ, ನಿನ್ನಷ್ಟು ಅನುಭವ ನನಗಿಲ್ಲ. ಅಲ್ಲದೆ ಕೆಟ್ಟ ಜನರ ಸಹವಾಸದಿಂದ ಸ್ವಲ್ಪ ಅಡ್ಡಹಾದಿ ತುಳಿದೆ. ಅದಕ್ಕಾಗಿ ಈಗ ಕೆಟ್ಟೆನಿಸುತ್ತದೆ. ಇನ್ನು ಮುಂದೆ ಹಾಗೆಂದೂ ಮಾಡುವದಿಲ್ಲ. ನಿನ್ನ ಸಹಾಯ ಸಿಕ್ಕರೆ ಅಷ್ಟಿಷ್ಟು ಪ್ರಾಕ್ಟೀಸೂ ಮಾಡುತ್ತೀನಿ. ನಾನು ನನ್ನ ಕಾಲ ಮೇಲೆ ನಿಲ್ಲುವ ಹಾಗಾಗುವ ತನಕ

ಮದುವೆಯ ವಿಚಾರವನ್ನೇ ಮಾಡಬಾರದಂತ ಇದ್ದೆ. ಆದರೆ ಈವರೆಗಿನ ಅನುಭವದಿಂದ ಬೇಗ ಮದುವೆಯಾಗುವದೇ ಒಳ್ಳೆಯದಂತನಿಸುತದೆ. ಈ ಸಂಬಂಧ ನಿಮ್ಮ ಮನಸಿಗೆ ಬಂದಿದ್ದರೆ ನನ್ನದೇನೂ ಅಡ್ಡಿಯಿಲ್ಲ. ನಿಮ್ಮ ಆಜ್ಞೆಯಂತೆ ನಡೆಯಲು ತಯಾರಾಗಿದ್ದೀನಿ."

ಕೃಷ್ಣರಾಯ ನಿರ್ಮಲೆಯರ ವಿವಾಹದ ವಾರ್ತೆ ನಗರದಲ್ಲೆಲ್ಲ ಪಸರಿಸುತ್ತಲೂ ಜನರು ಬಗೆಬಗೆಯಾಗಿ ಮಾತನಾಡಿಕೊಂಡರು. "ವರನೂ ಉಡಾಳ, ವಧುವೂ ಉಡಾಳ. ಸರಿಹೋಯ್ತು," ಎಂದವರು ಕೆಲವರು. "ಕೃಷ್ಣರಾಧಾ ಜೋಡಿಯಾದಂತಾಯಿತು," ಎಂದವರು ಕೆಲವರು. "ಹಿಟ್ಟು ಹಳಸಿತ್ತು, ನಾಯಿ ಹಸಿದಿತ್ತು," ಎಂದವರು ಹಲವರು. ಆಡುವವರ ಮಾತಿಗೆ ಕಿವಿಗೊಡುವವರಾದರೂ ಯಾರು? ವಿವಾಹದ ಸಿದ್ಧತೆ ಭರದಿಂದ ಸಾಗಿತು. ತಪ್ಪು ಮಾಡಿದ ಸೋದರಳಿಯ ಅಪ್ಪಾಸಾಹೇಬನನ್ನು ಕ್ಷಮಿಸಿ ಅವನ ಮೇಲೆಯೇ ಮದುವೆಯ ಭಾರ ಹೊರಿಸಿದರು ರಾಮರಾಯರು. ಹಾಗೆ ಮಾಡುವುದರಲ್ಲಿ ಯಾವ ದುರುದ್ದೇಶವೂ ಇರಲಿಲ್ಲ. ಅಪ್ಪಾಸಾಹೇಬನನ್ನು ಮದುವೆಗೆ ಕರೆಯದಿದ್ದರೆ ಜನರು ಏನೆಂದಾರು? ಅಲ್ಲದೆ ರಾಮರಾಯರು ವಯಸ್ಸಾದವರು. ಮದುವೆಯ ಕೆಲಸಗಳೆಲ್ಲ ಅವರಿಂದ ನೀಗುವಂತೆಯೂ ಇರಲಿಲ್ಲ. ಅಪ್ಪಾಸಾಹೇಬನಂಥ ಉತ್ಸಾಹಿ ಯುವಕ ಎಲ್ಲವನ್ನೂ ಸಮರ್ಪಕವಾಗಿ ನೋಡಿಕೊಳ್ಳಬಲ್ಲ. ಕೆಟ್ಟುಹೋದ ಸಂಬಂಧವೂ ಮದುವೆಯ ನಿಮಿತ್ತವಾಗಿ ಮತ್ತೆ ಸರಿಹೋದಂತಾಗುವುದು, ತಮ್ಮ ಪಶ್ಚಾತ್ ತಮ್ಮ ಮಗಳಿಗೆ ತವರುಮನೆಯೆಂಬುದು ಇಲ್ಲದಂತಾಗಬಾರದೆಂಬ ಯೋಚನೆಯೂ ಆ ದಂಪತಿಗಳನ್ನು ಅಪ್ಪಾಸಾಹೇಬನ ಕಡೆಗೆ ಎಳೆದಿತ್ತು.

ಅವರು ಹೇಳಿ ಕಳಿಸುತ್ತಲೂ ಅಪ್ಪಾಸಾಹೇಬ್ ಸಂತೋಷದಿಂದಲೇ ಬಂದ. ವಿಮಲೆಯೊಡನೆ ಸಂಬಂಧ ಬಂದಂದಿನಿಂದ ಅವನಲ್ಲಿ ಕೊಂಚ ವಿವೇಕೋದಯವೂ ಆದ ಹಾಗಿತ್ತು. ಅತ್ತೆ–ಮಾವಂದಿರ ಪಾದಗಳನ್ನು ಮುಟ್ಟಿ ನಮಸ್ಕರಿಸಿ ಅವರ ಕ್ಷಮೆ ಕೇಳಿದ ಅಪ್ಪಾಸಾಹೇಬ್.

"ನೀವೇ ನನಗೆ ತಂದೆತಾಯಿ ಇದ್ದ ಹಾಗೆ. ನಿಮ್ಮನ್ನ ಬಿಟ್ಟರೆ ನನಗೆ ಯಾರಿದಾರೆ?"

ಅವರೂ ಪ್ರೀತಿಯಿಂದ ಅವನ ಮೈದಡವಿ ಮೇಲಕ್ಕೆಬ್ಬಿಸಿದರು. ಅಷ್ಟರಲ್ಲಿಯೆ ನಿರ್ಮಲೆಯೂ ಅಲ್ಲಿಗೆ ಬಂದಳು. ಅಪ್ಪಾಸಾಹೇಬನನ್ನು ನೋಡುತ್ತಲೂ ಅವಳ ಮುಖ ತಾನಾಗಿಯೇ ಕೆಳಕ್ಕೆ ಬಾಗಿತು.

ಅವನು ಧೈರ್ಯ ಕಳೆದುಕೊಳ್ಳಲಿಲ್ಲ. ಅವಳ ತಂದೆತಾಯಿಗಳೆದುರಿನಲ್ಲಿಯೆ ಅವಳ ಕ್ಷಮೆಯನ್ನು ಕೋರಿದ:

"ನನ್ನ ಕ್ಷಮಿಸು ನಿರ್ಮಲಾ, ಇನ್ನು ಮುಂದೆ ನೀನು ನನ್ನ ತಂಗಿ. ನಾನು ನಿನ್ನ ಅಣ್ಣ, ಕಡೆಯವರೆಗೂ ನಮ್ಮಿಬ್ಬರ ಸಂಬಂಧ ಹೀಗೇ ಇರಲಿ. ತಿಳಿವಳಿಕೆಯಿಲ್ಲದ ಹುಡುಗರು ನಾವು ಒಂದು ತಪ್ಪುಮಾಡಿ ಅತ್ತೆಮಾವಂದಿರ ಮನಸ್ಸು ನೋಯಿಸಿದೆವು. ಇನ್ನು ಮುಂದೆ ಎಂದೆಂದೂ ಹಾಗಾಗದಂತೆ ನೋಡಿಕೊಳ್ತೀನಿ."

ಹದಿನೈದು ದಿನಗಳ ತರುವಾಯ ಮದುವೆಯೆಂದು ಗೊತ್ತಾಯಿತು. ರಾಮರಾಯರು ವಿವಾಹದ ಸಕಲ ವ್ಯವಸ್ಥೆಯನ್ನೂ ಅಳಿಯನಿಗೊಪ್ಪಿಸಿ, ಖರ್ಚಿಗೆಂದು ತಮ್ಮ ಹತ್ತಿರವಿದ್ದ ಹತ್ತುಸಾವಿರ ರೂಪಾಯಿಗಳನ್ನು ಅವನ ಕೈಗೆ ಕೊಡಲು ಹೋದಾಗ ಆತ ಸ್ವೀಕರಿಸಲಿಲ್ಲ.

"ಇರಲಿ ತಗೊಳ್ಳಪ್ಪಾ. ದೊಡ್ಡ ಮದುವೆ. ಅಂಥಿಂಥ ಖರ್ಚೇ?" ಎಂದರು ರಾಮರಾಯರು.

"ಎಷ್ಟು ಖರ್ಚಾದರೇನಂತೆ! ನಿಮಗದರ ಚಿಂತೆಯೇ ಬೇಡ. ನನಗಾದರೂ ದುಡ್ಡಿನ ಕೊರತೆಯೇನು? ಎಷ್ಟು ಖರ್ಚು ಮಾಡಿದರೂ ತೀರದಷ್ಟು ಬಿದ್ದಿದೆ. ನನ್ನ ತಂಗಿಯ ಮದುವೆಗಾಗಿ ಖರ್ಚುಮಾಡದೆ ಇನ್ನ್ಯಾತಕ್ಕೆ ಮಾಡುವುದು?"

"ಛೆ. ಛೆ. ಹೀಗಂದರೆ ಹ್ಯಾಗೆ ಅಪ್ಪಾಸಾಹೇಬ್? ಎಲ್ಲಾ ನೀನೇ ಖರ್ಚು ಮಾಡಿದರೆ ಹ್ಯಾಗೆ? ನನ್ನದೂ ಸ್ವಲ್ಪ ಇರಲಿ," ಎಂದು ರಾಮರಾಯರು ಮತ್ತೆ ಮತ್ತೆ ಹೇಳಿದರೂ ಆತ ಅವರ ಹಣವನ್ನು ಮುಟ್ಟಲಿಲ್ಲ.

ಕೃಷ್ಣರಾಯರ ಸಹೋದ್ಯೋಗಿಗಳೂ ಸ್ನೇಹಿತರೂ ಆದ ವಕೀಲರನ್ನೆಲ್ಲ ಕರೆಸಿ ಆತ ಒಬ್ಬೊಬ್ಬರಿಗೆ ಒಂದೊಂದು ಕೆಲಸ ಒಪ್ಪಿಸಿದ. ಲೀಲಾದೇವಿ ಗೌರೀದೇವಿ ಸುಮಿತ್ರಾದೇವಿಯವರಿಗೂ ಒಂದೊಂದು ಹೊಣೆ ವಹಿಸಿಕೊಟ್ಟ. ತನ್ನ ಭವ್ಯವಾದ ಬಂಗಲೆಯೇ ಮದುವೆಯ ಮನೆಯಾಗಬೇಕೆಂದು ಹಟತೊಟ್ಟು

ಅತ್ತೆಮಾವಂದಿರನ್ನು ಅಲ್ಲಿಗೇ ಬರಮಾಡಿಕೊಂಡ. ಬಂಗಲೆಯ ಮುಂದಿನ
ವಿಶಾಲವಾದ ಬಯಲಿನಲ್ಲಿ ಮಂಟಪ ನಿರ್ಮಿಸುವ ಜವಾಬ್ದಾರಿ ಮೋಜಣ್ಣವರ
ದಾಯಿತು. ಡಾ. ಇಂದ್ರಗೇರಿಯವರಿಗೆ ಅನೇಕ ಕೆಲಸಗಳಿದ್ದರೂ ಅಪ್ಪಾ
ಸಾಹೇಬನ ಹೇಳಿಕೆಯಂತೆ ಅವರು ವಿದ್ಯುದ್ದೀಪಗಳ ವ್ಯವಸ್ಥೆ ವಹಿಸಿಕೊಂಡರು.

ರಮಾಬಾಯಿಯವರ ಮನೆಗೆ ಹೋಗಿ ಅವರನ್ನು ಕರೆದುತಂದುದಾಯಿತು.
ಸಾವಿರಾರು ಜನರಿಗಾಗುವಷ್ಟು ತಿಂಡಿತಿನಿಸು ಊಟ ಎಲ್ಲವನ್ನೂ ಅಣಿಗೊಳಿಸುವ
ಜವಾಬ್ದಾರಿಯನ್ನು ಬಾಜೀರಾವ್ ವಕೀಲರ ಮೇಲೆ ಹೊರಿಸಿದುದಾಯಿತು.
ಅಡುಗೆಯ ಭೀಮಾಚಾರಿ ಮುದುಕನಾಗಿದ್ದನಾದರೂ "ಇದೊಂದು ಮದುವೆ
ಯನ್ನ ನೋಡಿ ಸಾಯ್ತೀನಿ," ಎಂದು ಹೇಳಿಕೊಳ್ಳುತ್ತಾ ಅಪ್ಪಾಸಾಹೇಬನ
ಬಂಗಲೆ ಸೇರಿಕೊಂಡ. ತಾರಾಬಾಯಿಯವರು ಬಂದು ಅಡುಗೆಯ ಮನೆಯ
ಮೇಲ್ವಿಚಾರಣೆ ನೋಡಿಕೊಳ್ಳತೊಡಗಿದರು. ಜೈನೀ ಚಿದಂಬರರಾಯರೂ
ಮಡಿವಾಳ ವಕೀಲರೂ ಫರ್ನೀಚರು, ಲೌಡ್‌ಸ್ಪೀಕರ್, ಮೋಟರುಕಾರು
ಲಾರಿಗಳು ಮೊದಲಾದುವುಗಳ ವ್ಯವಸ್ಥೆಗೆ ನಿಂತರು. ಪ್ರತಿಯೊಂದು ವಿಭಾಗ
ದವರಿಗೂ ಐದೈದು ಸಾವಿರ ರೂಪಾಯಿಗಳನ್ನು ಖರ್ಚಿಗಾಗಿ ಕೊಡಲಾಯಿತು.
ಊಟದ ವ್ಯವಸ್ಥೆಗಾಗಿ ಬಾಜೀರಾಯರಿಗೆ ಇಪ್ಪತ್ತು ಸಾವಿರ ರೂಪಾಯಿ
ಕೊಡಲಾಯಿತು. ರಾಮರಾಯರ ಮತ್ತು ಅಪ್ಪಾಸಾಹೇಬನ ಆಪ್ತೇಷ್ಟರಿದ್ದ
ಊರುಗಳಿಗೆ ಹೋಗಿ ಎಲ್ಲರಿಗೂ ಆಮಂತ್ರಣವೀಯುವುದು, ಅವರ ರೈತರನ್ನು
ಕರೆದುಕೊಂಡು ಬರುವುದು, ನಗರದ ಪ್ರತಿಷ್ಠಿತರು, ಎಂ.ಎಲ್.ಎ.ಗಳು,
ಮಂತ್ರಿ ಉಪಮಂತ್ರಿಗಳು, ಅಧಿಕಾರಿಗಳು ಮತ್ತು ಮುಖಂಡರನ್ನು ಕಂಡು
ಅವರನ್ನು ಆಮಂತ್ರಿಸುವುದು ಹರಕಸೆಟ್ಟಿಯವರ ಜವಾಬ್ದಾರಿಯಾಯಿತು.

ಶಿಸ್ತು ಎಂದರೆ ಅಪ್ಪಾಸಾಹೇಬನಿಗೆ ಬಹಳ ಪ್ರೀತಿ. ಕೆಟ್ಟಕೆಲಸದಲ್ಲಿಯೂ
ಶಿಸ್ತು ತೋರಿಸುತ್ತಿದ್ದ ಆತ ಮದುವೆಯಂಥ ಮಹತ್ವದ ಕೆಲಸದಲ್ಲಿ ಅದನ್ನು
ಮರೆಯುವುದುಂಟೇ? ಅವನ ನೇತೃತ್ವದಲ್ಲಿ ಎಲ್ಲ ಕೆಲಸಗಳೂ ಸುವ್ಯವಸ್ಥೆ
ಯಿಂದ ಸಾಗತೊಡಗಿದುವು.

ಪೌರೋಹಿತ್ಯಕ್ಕಾಗಿ ರಾಮರಾಯರ ಮನೆತನದ ಧರ್ಮಗುರುವನ್ನು
ಬರಮಾಡಿಕೊಳ್ಳಲಾಯಿತು. ಅವರ ಕೈಕೆಳಗೆ ಎಂಟು ಹತ್ತು ಜನ ಚಿಕ್ಕಪುಟ್ಟ
ಪುರೋಹಿತರನ್ನು ನೇಮಿಸಲಾಯಿತು.

ಅಪ್ಪಾಸಾಹೇಬನ ಬಂಗಲೆಯಲ್ಲಿ ಗಂಡಸರ ಹೆಂಗಸರ ಗದ್ದಲವೋ ಗದ್ದಲ. ಹೆಣ್ಣೆಂದರೆ ಯಾವಾಗಲೂ ಬಾಯಿಬಾಯಿ ಬಿಡುತ್ತಿದ್ದ ಆ ವಕೀಲರಿಗೂ ಡಾಕ್ಟರಿಗೂ ಎದುರಿಗಿದ್ದ ಹೆಂಗಸರ ಮುಖ ನೋಡುವುದಕ್ಕೂ ಕೂಡ ಪುರಸತ್ತು ಸಿಕ್ಕುತ್ತಿರಲಿಲ್ಲ ಪ್ರತಿಯೊಬ್ಬರೂ ತಮ್ಮ ತಮ್ಮ ಕೆಲಸದಲ್ಲಿ ನಿರತರಾಗಿದ್ದರು. ಬಾಜೀರಾಯರು ಸಾಮುಗ್ರಿಗಳನ್ನು ಪೂರೈಸುತ್ತಲೂ ಹೆಂಗಸರು ತಿಂಡಿತಿನಿಸುಗಳನ್ನು ಮಾಡುವ ಕಾರ್ಯದಲ್ಲಿ ತೊಡಗಿದರು. ಹಗಲು ರಾತ್ರಿ ಕೆಲಸ ನಡೆಯಿತು. ಎಂಟು ಹತ್ತು ದಿನಗಳ ಕಾಲ ಯಾರಿಗೂ ಸರಿಯಾಗಿ ನಿದ್ದೆ ದೊರೆಯಲಿಲ್ಲ.

ಮುಂಬಯಿಯಲ್ಲಿಯೆ ಬಟ್ಟೆಬರೆಗಳನ್ನು ಕೊಳ್ಳುವುದೆಂದು ನಿರ್ಧರಿಸಿ ಕೃಷ್ಣರಾಯರನ್ನು ಕರೆದುಕೊಂಡು ಮುಂಬಯಿಗೆ ಹೊರಟ ಅಪ್ಪಾಸಾಹೇಬ್. ಕೃಷ್ಣರಾಯರ ಮನಸ್ಸಿಗೊಪ್ಪಿದ ಸೂಟುಗಳನ್ನು ಕೊಡಿಸಿದ. ಹತ್ತಿಪತ್ತು ಪೀತಾಂಬರಗಳು ನೂರಾರು ಸೀರೆಗಳು ಖಣಗಳನ್ನು ಕೊಂಡುಕೊಂಡ. ಕೃಷ್ಣರಾಯರಿಗೆ ಉಡುಗೊರೆಯಾಗಿ ಕೊಡಲು ಬಂಗಾರದ ಗುಂಡಿಗಳ ಸೆಟ್, ರಿಸ್ಟ್ ವಾಚ್, ಬಂಗಾರದ ಚೈನು, ನಿರ್ಮಲೆಗಾಗಿ ವಜ್ರಗಳಿಂದ ಕೂಡಿದ ಇಪ್ಪತ್ತು ತೊಲೆ ಬಂಗಾರದ ಹಾರ ತೆಗೆದುಕೊಂಡು ಮರಳಿ ಊರಿಗೆ ಬಂದ.

ಮದುವೆಯ ಮನೆಯಲ್ಲಿ ರಭಸದಿಂದ ಕೆಲಸ ನಡೆದಿತ್ತು. ಅಪ್ಪಾಸಾಹೇಬನ ಬಿನ್ನಹದಂತೆ ವಿಮಲೆಯೂ ಬಂಗಲೆಗೆ ಬಂದು ಮನೆಯ ಮತ್ತು ಮಂಟಪದ ಅಲಂಕಾರ ನೋಡಿಕೊಳ್ಳುವ ಹೊಣೆ ವಹಿಸಿಕೊಂಡಿದ್ದಳು. ಅಂಥ ವಿಶಾಲವಾದ ಮನೆ ಮತ್ತು ವಿಸ್ತಾರವಾದ ಮಂಟಪವನ್ನು ಅಲಂಕರಿಸುವ ಕೆಲಸ ಸಾಧಾರಣವಾದುದಲ್ಲವೆಂಬ ಅರಿವೂ ಅವಳಿಗೆ ಬಲುಬೇಗ ಆಯಿತು. ಎಂದಿನಿಂದಲೂ ಅವಳು ಚಿಕ್ಕಮನೆಯಲ್ಲಿರುತ್ತ ಬಂದಿದ್ದವಳು. ಅವಳು ನೋಡಿದ ದೊಡ್ಡಮನೆಯೆಂದರೆ ಬಾಜೀರಾಯರದೊಂದೇ. ಅಲ್ಲಿ ಅಲಂಕಾರಕ್ಕೆ ಆಸ್ಪದವಿರಲಿಲ್ಲ. ಅವಳ ಹೈಸ್ಕೂಲು ಮತ್ತು ಕಾಲೇಜುಗಳಲ್ಲೂ ಅಷ್ಟೆ. ಅವುಗಳೂ ಸಾಧಾರಣ ತರಗತಿಯ ಕಟ್ಟಡಗಳು. ದೇಸಾಯರ ಬಂಗಲೆಯ ಅಲಂಕಾರವೂ ದೊಡ್ಡ ವಿಷಯವೆಂಬ ಅರಿವು ಮೂಡುತ್ತಲೂ ಅವಳಿಗೆ ಅಪ್ಪಾಸಾಹೇಬನ ಮಾತುಗಳು ನೆನಪಿಗೆ ಬಂದುವು. “ವಿಚಾರ ಮಾಡು ವಿಮಲಾ. ದುಡುಕಬೇಡ. ಮದುವೆಯಾದ ನಂತರ ದುಃಖಪಡುವದು ಬೇಡ.” ಅವರು

ಅಂದುದೂ ಸರಿಯೇ ಎಂದುಕೊಂಡಳು ವಿಮಲೆ. ಬಂಗಲೆಯ ಅಲಂಕಾರ ಮಾಡಿಸಲು ಅಸಮರ್ಥಳಾದ ತಾನು ಅದರ ಒಡತಿಯಾಗಲೆತ್ನಿಸುವುದು ಹಾಸ್ಯಾಸ್ಪದವೇ ಸರಿ. ಇಂಥ ಬಂಗಲೆಯ ಯಜಮಾನಿಯಾಗಲು ರೂಪವೊಂದೇ ಸಾಲದು. ಈ ಸಿರಿವಂತಿಕೆಗೆ ಸರಿಹೋಗುವ ಸಂಸ್ಕಾರ – ಸಂಸ್ಕೃತಿಗಳು ತನ್ನಲ್ಲಿಲ್ಲ. ಅಂತೆಯೆ, ತಾನು ಈ ಉಚ್ಚ ಮಟ್ಟದಲ್ಲಿರಲು ಯತ್ನಿಸಿದರೆ ವಿಫಲಳಾಗಿ ದುಃಖಕ್ಕೆ ಗುರಿಯಾಗಬೇಕಾದೀತು. ಅಪ್ಪಾಸಾಹೇಬನ ಸರಿಸಮಾನಳಾಗಿ ನಿಲ್ಲಲು ತಾನು ಯತ್ನಿಸುವುದೇ ತಪ್ಪೆಂದು ತೋರುತ್ತದೆ. ತಪ್ಪನ್ನು ಬಯಸಿ ತಪ್ಪುದಾರಿ ಹಿಡಿದುದಾಯಿತು. ಸದ್ಯಕ್ಕಂತೂ ತನ್ನಲ್ಲಿ ತಾನು ಕೆಳದರ್ಜೆಯವಳೆಂಬ ಭಾವನೆ ಮೂಡಿದೆ. ಅದು ಯಾವಾಗಲೂ ತನ್ನನ್ನು ಕಾಡದಿರದು. ತನ್ನ ಈ ಕೀಳರಿಮೆಯಿಂದಾಗಿ ತಾನು ಜೀವದಿಂದಿರುವವರೆಗೂ ಸುಖಿಯಾಗಲು ಸಾಧ್ಯವಾಗದು. ತನ್ನಂಥವಳ ಕೈಹಿಡಿದರೆ ಅಪ್ಪಾಸಾಹೇಬನೂ ಸುಖಿಯಾಗಲಾರ. ಇಬ್ಬರಿಗೂ ಸುಖವೀಯದ ದಾಂಪತ್ಯದಿಂದ ಪ್ರಯೋಜನವಾದರೂ ಏನು? ಕಾಲೇಜಿನಲ್ಲೂ ತನಗೆ ಮನಸ್ಸಿಲ್ಲದಂತಾಗಿದೆ. ತಾನಿನ್ನು ಮದುವೆಯಾಗಿಬಿಡುವುದೇ ಉತ್ತಮೋಪಾಯ. ಅಪ್ಪಾಸಾಹೇಬನ ನೆರವಿನಿಂದಲೇ ಯೋಗ್ಯ ವರ ದೊರೆಯಬಹುದು. ನಿರ್ಮಲೆಗೆ ಕೃಷ್ಣರಾಯರು ದೊರೆತ ಹಾಗೆ....

ಈ ರೀತಿ ಯೋಚಿಸಿದ ವಿಮಲೆ ತನ್ನ ಮನಸ್ಸಿನಲ್ಲಿನ ವಿಚಾರವನ್ನು ಅಪ್ಪಾಸಾಹೇಬನಿಗೆ ತಿಳಿಸುತ್ತಲೂ ಆತ ತನ್ನ ಮೇಲಿನದೊಂದು ವಿಪತ್ತು ತೊಲಗಿತೆಂದು ಸಮಾಧಾನದ ಉಸಿರು ಬಿಟ್ಟು,

“ನೀನು ವಿಚಾರ ಮಾಡಿದ್ದು ಯೋಗ್ಯವಾಗಿಯೇ ಇದೆ ವಿಮಲಾ, ಅದಕ್ಕೇ ನಾನು ನಿನಗೆ ಹೇಳಿದ್ದು – ದುಡುಕಬೇಡಾ ಅಂತ. ಹರಯದ ಕಾವಿನಲ್ಲಿ ನಾನು ಏನೋ ಮಾಡಿದೆ. ಅದಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿಕೊಳ್ಳೋಣ. ನಿನ್ನ ಮನಸ್ಸಿಗೊಪ್ಪಿದ ವರ ಇದ್ದರೆ ಹೇಳು. ನಿರ್ಮಲೆಯ ಜೊತೆಯಲ್ಲೇ ನಿನ್ನ ಮದುವೆಯನ್ನೂ ಮುಗಿಸಿಬಿಡೋಣ,” ಎಂದು ಹೇಳಿದ.

“ಅಪ್ಪಾಸಾಹೇಬ್, ಇಷ್ಟು ಗಡಿಬಿಡಿ ಯಾಕೆ? ಬೇಡ ಬೇಡ. ನಾನೇನು ಯಾರನ್ನೂ ನೋಡಿಲ್ಲ. ನೀವೇ ಒಬ್ಬರು ಯೋಗ್ಯರನ್ನಾರಿಸಿದರೆ ಆಗುತೀನಿ. ನಿಮ್ಮ ಮಾತು ತೆಗೆದುಹಾಕುವದಿಲ್ಲ.”

"ನಿನ್ನ ಇಚ್ಛೆಯಂತೇ ಆಗಲಿ ವಿಮಲಾ. ನಿನಗೇನಾದರೂ ಜಾತಿಯ ಭೇದಭಾವವಿದೆಯೇನು ಮತ್ತೆ? ಒಳ್ಳೆಯ ಯೋಗ್ಯ ವರ ಆದರೆ ನಡೆಯುತ್ತದಷ್ಟೆ?"

"ಆಗಲೇ ಹೇಳಿದೆನಲ್ಲ ಅಪ್ಪಾಸಾಹೇಬ್. ನೀವು ನಿಮಗೆ ತಿಳಿದ ವರನನ್ನ ಆರಿಸಿರಿ. ನಾನು ನಿಮ್ಮ ಮಾತು ಮೀರುವದಿಲ್ಲ."

ಸ್ವಲ್ಪಹೊತ್ತು ಯೋಚಿಸುತ್ತಿದ್ದು ಅನಂತರ ಅಪ್ಪಾಸಾಹೇಬ ಹೇಳಿದ:

"ನೀನೇನೋ ಹೀಗನ್ನುತ್ತೀ. ನಿನ್ನಂತೆ ನಿನ್ನ ತಾಯಿಯೂ ಅನ್ನಬೇಕಲ್ಲ? ಅವರು ಹಳೆಯ ಕಾಲದವರು. ಜಾತಿಗೀತಿ ಬಿಟ್ಟು ಬಿಡಲಾರರು."

"ನಾನು ನೀವು ಒಪ್ಪಿದರೆ ಅವ್ವನೂ ಒಪ್ಪುವದು ಖಂಡಿತ ಅಪ್ಪಾಸಾಹೇಬ್."

"ನೋಡು. ನಾವು ಅವರ ಮೇಲೆ ಒತ್ತಾಯ ಮಾಡಿದಂತಾಗಬಾರದು. ಹೂಂ. ನಮ್ಮ ಚಿದಂಬರರಾಯರನ್ನ ನೀನು ನೋಡಿದ್ದೀಯಲ್ಲ. ಅವರನ್ನ ಮದುವೆಯಾಗುತ್ತೀಯಾ? ಅವರು ಮರಾಠಾ. ಮಾಂಸಾಹಾರಿ. ನಿಮ್ಮ ತಾಯಿಗೆ ಒಪ್ಪಿಗೆಯಾದೀತೋ ಇಲ್ಲೋ. ಕೇಳಿ ತಿಳಿದುಕೋ. ನನ್ನ ಅಭಿಪ್ರಾಯ ಹೇಳುವದಾದರೆ ಚಿದಂಬರರಾಯರು ಅಡ್ಡಿಯಿಲ್ಲ. ನಿನ್ನಂಥಾ ಹೆಂಡತಿ ಸಿಕ್ಕರೆ ಅವರು ಮಾಂಸಾಹಾರವನ್ನು ಬಿಟ್ಟುಬಿಡಬಹುದು."

"ಅವ್ವನಿಗೆ ನೀವೇ ಒಂದು ಮಾತು ಕೇಳಿಬಿಡಿರಿ ಅಪ್ಪಾಸಾಹೇಬ್. ನಾನು ಕೇಳುವದಕ್ಕಿಂತ ನೀವು ಕೇಳುವದೇ ಉತ್ತಮ."

"ಆಗಲಿ. ಈ ಮದುವೆಯೊಂದನ್ನ ಮುಗಿಸಿಬಿಡೋಣ ಮೊದಲು. ಆಮೇಲೆ ನಿನ್ನ ಮದುವೆ ಹೂಡೋಣ," ಎಂದು ಹೇಳಿ ಅಪ್ಪಾಸಾಹೇಬ ಅವಳನ್ನು ಬೀಳ್ಕೊಂಡು ತನ್ನ ಕೆಲಸಗಳಲ್ಲಿ ತೊಡಗಿಕೊಂಡ.

ಮುಂಬಯಿಯಿಂದ ತೆಗೆದುಕೊಂಡು ಬಂದ ಬಟ್ಟೆಬರೆಗಳನ್ನೂ ಒಡವೆಗಳನ್ನೂ ಅಪ್ಪಾಸಾಹೇಬ್ ತೋರಿಸಿದಾಗ ಶ್ರೀನಿವಾಸರಾಯರು ಬೆರಗಾಗಿ ಹೋದರು. ಏನು ತಮ್ಮ ಭಾಗ್ಯ! ತಮ್ಮ ಸೋದರನ ಭಾಗ್ಯ! ತಾವೆಣಿಸಿಕೊಂಡುದುದಕ್ಕಿಂತ ಮಿಗಿಲಾಯಿತು ಎಲ್ಲವೂ. ರಾಮರಾಯರ ಆಸ್ತಿಗಿಂತಲೂ ಅಪ್ಪಾಸಾಹೇಬನ ಔದಾರ್ಯವೇ ದೊಡ್ಡದಾಗಿ ಕಾಣಿಸಿತು ಅವರಿಗೆ.

ಅಪ್ಪಾಸಾಹೇಬನ ಬಂಗಲೆಯ ಅಕ್ಕಪಕ್ಕದ ಐದಾರು ಮನೆಗಳಲ್ಲಿ ಹಳ್ಳಿ

ಗಳಿಂದಲೂ ಬೇರೆ ಬೇರೆ ಊರುಗಳಿಂದಲೂ ಬಂದ ಅತಿಥಿ ಅಭ್ಯಾಗತರು ಬೀಡು ಬಿಟ್ಟರು. ಸ್ವತಃ ಅಪ್ಪಾಸಾಹೇಬನೇ ತನ್ನ ರೈತರೆಲ್ಲರನ್ನೂ ಭೆಟ್ಟಿಯಾಗಿ ಹೇಳಿದ:

"ಇದು ನಿಮ್ಮ ಮನೆಯದೇ ಮದುವೆ ಅಂತ ತಿಳಿದುಕೊಳ್ಳಿರಿ. ನೀವೇ ಮಾಡುವದು, ನೀವೇ ಉಣ್ಣುವದು. ನಿಮಗಾಗಿ ಲಿಂಗಾಯತರಿಂದಲೇ ಅಡಿಗೆ ಮಾಡಿಸುತ್ತಿದೇವೆ. ನಿಮಗೇನು ಬೇಕೋ ತೆಗೆದುಕೊಂಡು ಊಟಮಾಡಿರಿ. ನಾನಂತೂ ನಿಮ್ಮ ಮುಂದಿನ ಹುಡುಗ. ಅನುಭವವಿಲ್ಲ. ಏನಾದರೂ ತಪ್ಪು ತಡೆ ಆದರೆ ನಿಮ್ಮ ಮಗನನ್ನ ಕ್ಷಮಿಸುವಂತೆ ಕ್ಷಮಿಸಿರಿ."

ಆ ಮುಗ್ಧ ರೈತರಿಗೆ ಕತ್ತು ಬಿಗಿದು ಬರುವಂತಾಯಿತು.

"ನಮ್ಮ ಧಣಿಗಳೆಂದರೆ ದೇವರಿದ್ದ ಹಾಗೆ. ಒಂದು ದಿನವೂ ಹೊಲಗಳಿಗೆ ಬಂದಿಲ್ಲ. ನಾವು ಕೊಟ್ಟಷ್ಟು ತೆಗೆದುಕೊಳ್ತಾರೆ. ಈಗ ನೋಡಿದರೆ ಎಂಥಾ ಮುತ್ತಿನಂಥಾ ಮಾತು! ಮಗನ ಹಾಗೆ ತಿಳಿದುಕೋಬೇಕಂತೆ! ಮದುವೆ ಮುಗಿಯುವವರೆಗೆ ನಾವು ಉಪವಾಸವಿದ್ದರೂ ಅಡ್ಡಿಯಿಲ್ಲ. ಎಲ್ಲಾ ಕೆಲಸ ಮಾಡಿಕೊಟ್ಟು ಹೋಗೋಣ" ಎಂದು ಅವರು ತಮ್ಮತಮ್ಮಲ್ಲೇ ಮಾತನಾಡಿ ಕೊಂಡು ಕೆಲವರು ಅಡುಗೆಯ ಮನೆಯ ಕೆಲಸಗಳಿಗೆ ನೆರವಾಗಲು ನಿಂತರೆ ಇನ್ನು ಕೆಲವರು ಹೊರಗಿನ ಕೆಲಸಗಳಿಗೆ ನಿಂತರು. ಗುಡ್ಡಗಳನ್ನು ಕಡಿದು ಹೊಲ ಸಿದ್ಧಗೊಳಿಸುವ ಆ ಜನರಿಗೆ ನಗರದ ನಾಜೂಕು ಕೆಲಸ ಕೊಂಚ ಕಠಿಣ ವಾಗಿ ಕಂಡಿತಾದರೂ ನಗರದ ಆಳುಗಳಿಗೆ ಹಿಂದೆ ಬೀಳದಂತೆ ದುಡಿದರು.

ಮದುವೆಯ ಹಿಂದಿನ ದಿನವೇ ಎಲ್ಲ ಅತಿಥಿಗಳೂ ಬಂದು ಸೇರಿದರು. ರೇಶನ್ ಕಾನೂನು ಜಾರಿಯಲ್ಲಿದ್ದ ಆ ಕಾಲದಲ್ಲೂ ಇಲ್ಲಿ ಅದರ ಮಾತು ಬರು ವಂತಿರಲಿಲ್ಲ. ಹತ್ತಿಪ್ಪತ್ತು ಕಡೆಗಳಿಂದ ಆಹಾರಧಾನ್ಯಗಳನ್ನು ಶೇಖರಿಸಿ ತಂದು ಅಡುಗೆ ಮಾಡುವುದು ನಡೆದಿತ್ತು.

ಮದುವೆಯ ದಿನವೂ ಬಂದಿತು. ಕಲೆಕ್ಟರರಿಂದ ಮೊದಲಾಗಿ ಚಪ ರಾಸಿಯವರೆಗಿನ ರೆವಿನ್ಯೂ ಅಧಿಕಾರಿಗಳು, ರೇಶನ್ ಇಲಾಖೆಯ ನೌಕರರು, ಡಿ. ಎಸ್. ಪಿ. ಯವರನ್ನೊಳಗೊಂಡ ಎಲ್ಲ ಪೋಲೀಸ್ ಅಧಿಕಾರಿಗಳು, ನಗರ ಸಭಾಧ್ಯಕ್ಷರು, ನಗರಸಭಾ ಸದಸ್ಯರು, ಜಿಲ್ಲಾಬೋರ್ಡಿನವರು, ರಾಜಕೀಯ ಪಕ್ಷಗಳ ನಾಯಕರು ಮೊದಲಾದವರೆಲ್ಲರೂ ಲಗ್ನಮಂಟಪದಲ್ಲಿ ನೆರೆದಾಗ

ಅದೊಂದು ತುಂಬಿದ ಸಭಾಗೃಹದಂತೆ ಕಾಣಿಸಿತು. "ಇಂಥ ಲಗ್ನ ಮಾಡಲೂ ನೋಡಲೂ ಪುಣ್ಯ ಬೇಕು ಪುಣ್ಯ!" ಎನ್ನುತ್ತಿದ್ದವರು ಎಷ್ಟೋ ಜನ.

ಬಸಲಿಂಗನಂತೂ ಮಿಂಚಿನಂತೆ ಅತ್ತಿಂದಿತ್ತ ಇತ್ತಿಂದತ್ತ ಓಡಿಯಾಡುತ್ತಿದ್ದ. ಎಲ್ಲರೂ "ಬಸಲಿಂಗಾ" ಎನ್ನುವವರೇ: "ಅದನ್ನು ಮಾಡು, ಇದನ್ನು ಮಾಡು," ಎಂದು ಸೂಚಿಸುವವರೇ. ಯಾವುದನ್ನು ಮಾಡುವುದು ಯಾವುದನ್ನು ಬಿಡುವುದು ಎಂಬುದೂ ತಿಳಿಯದೆ ಬಸಲಿಂಗ ಏನನ್ನೂ ಮಾಡದೆ ಅತ್ತಿತ್ತ ತಿರುಗುತ್ತಿದ್ದ. ಹೆಂಗಸರ ಗುಂಪಿನಲ್ಲಿ, ಚೆನ್ನಿಯೂ ಹಾಗೆಯೇ ಓಡಿಯಾಡುತ್ತಿದ್ದಳು.

ಮಂಟಪದ ಮುಖ್ಯದ್ವಾರದಲ್ಲಿ ನಿಂತು ಸ್ವತಃ ಅಪ್ಪಾಸಾಹೇಬನೇ ಅತಿಥಿಗಳನ್ನು ಬರಮಾಡಿಕೊಳ್ಳುತ್ತಿದ್ದ. ಡಾ. ಇಂದ್ರಗೇರಿಯವರೂ ಇನ್ನಿತರ ವಕೀಲರೂ ಅತಿಥಿಗಳನ್ನು ಕರೆದೊಯ್ದು ಕೂಡ್ರಿಸುವ ಕೆಲಸ ವಹಿಸಿಕೊಂಡಿದ್ದರು. ಬ್ಯಾಂಡು ಬಜಂತ್ರಿ ವಾಲಗಗಳ ಗದ್ದಲವೋ ಗದ್ದಲ. ಶುಭ ಮುಹೂರ್ತ ಸನ್ನಿಹಿತವಾದಂತೆಲ್ಲ ಗದ್ದಲವೂ ಅಧಿಕವಾಯಿತು. ಆ ಮಹಾಗದ್ದಲದ ಮಧ್ಯೆ "ಸುಮುಹೂರ್ತೇ ಸಾವಧಾನ," ಎಂಬ ಪುರೋಹಿತರ ರಾಗ ಯಾರಿಗೂ ಕೇಳಿಸಲಿಲ್ಲ. ಮತ್ತೆ ಬ್ಯಾಂಡು ಬಾರಿಸಿತು. ಅಕ್ಕಿಯ ಕಾಳು ಹಾರಿದುವು. ಕೃಷ್ಣರಾವ್ ಮತ್ತು ನಿರ್ಮಲೆ ಸತಿಪತಿಗಳಾದರು. ಅಪ್ಪಾಸಾಹೇಬನ ಕಣ್ಣುಗಳಲ್ಲಿ ಆನಂದಾಶ್ರುಗಳುದುರಿದುವು. ಅದೊಂದು ಕ್ಷಣದ ಸಮಾರಂಭಕ್ಕೆಂದು ಎಷ್ಟೊಂದು ಸಿದ್ಧತೆ, ಎಷ್ಟೊಂದು ಚಿಂತೆ, ಎಷ್ಟೊಂದು ಓಡಾಟ!

ಇಂಥ ಸಿರಿವಂತರ ಮನೆಗಳಲ್ಲಿ ನಡೆಯುವ ವಿವಾಹ ಸಮಾರಂಭಗಳನ್ನೇ ಕಾದುಕೊಂಡಿರುವ ಅನಾಥಾಶ್ರಮ, ಹರಿಜನ ನಿಲಯ, ಮಹಿಲಾಶ್ರಮ, ವಿಧವಾಶ್ರಮ, ಉಚಿತ ಪ್ರಸಾದನಿಲಯ, ಹೈಸ್ಕೂಲು ಕಾಲೇಜು ಮೊದಲಾದ ಸಂಸ್ಥೆಗಳ ಸಂಚಾಲಕರು ಬಂದು ಕಾಣಿಸಿಕೊಂಡರು. ಅಪ್ಪಾಸಾಹೇಬ್ ಅವರನ್ನು ಸಂತೋಷದಿಂದಲೇ ಬರಮಾಡಿಕೊಂಡು ಒಂದು ಕೊಟಡಿಯಲ್ಲಿ ಕೂಡ್ರಿಸಿದ.

ಮದುವೆಗೆ ಬಂದವರೆಲ್ಲರ ಆದರಾತಿಥ್ಯ ಸಾಂಗವಾಗಿ ಜರಗಿತು. ಎಲ್ಲರೂ ಸಂತೃಪ್ತರಾಗಿ ಹೊರಟುಹೋದರು.

ಮದುವೆಯ ಖರ್ಚಿಗೆಂದು ತೆಗೆದಿರಿಸಿದ್ದ ಹತ್ತುಸಾವಿರ ರೂಪಾಯಿಗಳನ್ನು ರಾಮರಾಯರು ಅಳಿಯನಿಗೆ ವರದಕ್ಷಿಣೆಯೆಂದು ಕೊಟ್ಟರು. ಆ ಹಣವನ್ನು

ನಿರ್ಮಲೆಯ ಹೆಸರಿನಲ್ಲಿ ಬ್ಯಾಂಕಿನಲ್ಲಿಡುವುದೆಂದು ಗೊತ್ತಾಯಿತು. ಕೃಷ್ಣ ರಾಯರಿಗೆ ಹತ್ತಿಪ್ಪತ್ತು ತೊಲೆ ಬಂಗಾರ ಸಿಕ್ಕಿತು. ನಿರ್ಮಲೆಯ ಮೈಮೇಲೆ ಐವತ್ತು ಅರವತ್ತು ತೊಲೆಗಳಷ್ಟು ಒಡವೆಗಳು. "ಅಂತೂ ಸಿರಿದೇವಿಯನ್ನೇ ಪಡೆದರು ಕೃಷ್ಣರಾಯರು," ಎಂದು ನಗರವೆಲ್ಲ ಮಾತನಾಡಿತು.

ಬಡಬಗ್ಗರಿಗೆಲ್ಲ ಊಟ ಹಾಕಿಸಲಾಯಿತು. ಒಂದು ಸಾವಿರ ಗಜ ಬಟ್ಟೆಯನ್ನೂ ಅವರಿಗೆ ಹಂಚಲಾಯಿತು. ಅಪ್ಪಾಸಾಹೇಬನ ಪ್ರತಿಯೊಬ್ಬ ರೈತನಿಗೂ ತಲಾ ಒಂದು ದೋತರ ಒಂದು ಅಂಗಿ ಸಿಕ್ಕಿತು.

ಸಾರ್ವಜನಿಕ ಸಂಘ ಸಂಸ್ಥೆಗಳ ಸಂಚಾಲಕರ ಸರದಿ ಬಂತು.

ತನ್ನ ಚಕ್ ಪುಸ್ತಕವನ್ನು ಮೇಜಿನ ಮೇಲಿಟ್ಟು ಅಪ್ಪಾಸಾಹೇಬ್ ತನ್ನ ಗೆಳೆಯರೆಲ್ಲರನ್ನೂ ಕರೆದು ಕೂಡ್ರಿಸಿ ಹೇಳಿದ:

"ನಮ್ಮಲ್ಲಿ ದಾನಿಗಳಿಗೇನೂ ಕೊರತೆಯಿಲ್ಲ ಅಂತ ಬಡಾಯಿ ಕೊಚ್ಚುವ ಜನರೂ ಇದಾರೆ. ಆದರೆ ಯಾವ ದಾನವೀರನೂ ಇಂಥಾ ಸಂಸ್ಥೆಗಳಿಗೆ ಧಾರಾಳ ವಾಗಿ ಹಣ ಕೊಡುವದಿಲ್ಲ. ಅವರ ಚಂದಾಪಟ್ಟಿಯಲ್ಲಿ ತಮ್ಮ ಹೆಸರು ಇರಲೆಂದು ಐದೋ ಹತ್ತೋ ಬಹಳವಾದರೆ ಇಪ್ಪತ್ತೋ ರೂಪಾಯಿ ಕೊಟ್ಟು ಕೈ ತೊಳ ಕೊಳ್ಳುತ್ತಾರೆ. ಪಾಪ. ಈ ಜನರಾದರೂ ಏನು ಮಾಡಬೇಕು! ರೂಪಾಯಿ ಕೊಟ್ಟರೂ ನೀನೆ ಶಿವಾ, ಪೈ ಕೊಟ್ಟರೂ ನೀನೆ ಶಿವಾ ಅಂತ ಹೇಳಿ ಸುಮ್ಮ ನಾಗುತ್ತಾರೆ. ಈಗ ನನ್ನನ್ನೇ ನೋಡಿರಿ. ಒಂದು ರೀತಿಯಿಂದ ನಾನೂ ಅನಾಥನೇ ಆಗಿದ್ದ ಕಾಲವಿತ್ತು. ಆಗ ನನ್ನ ಅತ್ತೆಮಾವಂದಿರು ನನ್ನನ್ನ ಜೋಪಾನ ಮಾಡಿಕೊಂಡು ಬಂದಿರದಿದ್ದರೇನಾಗುತ್ತಿತ್ತು! ಅದರಂತೆಯೇ, ನೂರಾರು ಅನಾಥ ಮಕ್ಕಳನ್ನ ಕಾಪಾಡುವ ಶಕ್ತಿ ನನ್ನಲ್ಲಿದ್ದರೂ ನಾನು ಅತ್ತ ಲಕ್ಷ್ಯ ಹಾಕಿಲ್ಲ. ನನ್ನ ಹಾಗೆ ಎಲ್ಲರೂ ನಿರ್ಲಕ್ಷ್ಯದಿಂದಿದ್ದಾರೆ. ಅಂತೆಯೇ ನಮ್ಮ ಅನಾಥ ಮಕ್ಕಳನ್ನ ಕೇಳುವವರೇ ಇಲ್ಲ, ನನ್ನಿಂದ ಇವರು ಬಯಸುವ ದಾದರೂ ಎಷ್ಟು? ಬಹಳವಾದರೆ ನೂರು ರೂಪಾಯಿ. ಹೆಚ್ಚು ಹಣ ಕೇಳ ಬೇಕು ಅಂತ ಮನಸಿನಲ್ಲಿದ್ದರೂ ಅವರು ಕೇಳಲಾರರು. ಅದಕ್ಕಿಂತ ಹೆಚ್ಚು ಹಿಂದೆ ಯಾರೂ ಕೊಟ್ಟಿಲ್ಲ ಅಂತ ಇವರೂ ಹೆಚ್ಚು ಕೇಳಲಾರರು."

"ನೀವೆಷ್ಟು ಕೊಡ್ತೀರಿ ಅಪ್ಪಾಸಾಹೇಬ್?" ಎಂದು ಕೇಳಿದರು ಇಂದ್ರ ಗೇರಿಯವರು.

"ಎಷ್ಟು ಕೊಡಬೇಕು ನೀವೇ ಹೇಳಿರಿ."

"ಛೆ. ಛೆ. ಕೊಡುವದು ಬಿಡುವದು ಎಲ್ಲಾ ನಿಮಗೇ ಸೇರಿದ್ದು."

ಅಪ್ಪಾಸಾಹೇಬ್ ನಕ್ಕು, ಬೇಡಲು ಬಂದವರ ಪಟ್ಟಿಯನ್ನು ಕೈಗೆ ತೆಗೆದುಕೊಂಡು ಫೌಂಟನ್‌ಪೆನ್ ಹಿಡಿದು ಸಿದ್ಧನಾಗಿ,

"ಬಸಲಿಂಗಾ, ಅನಾಥಾಶ್ರಮದವರನ್ನ ಕರೆ," ಎಂದು ಹೇಳಿದ.

ಅನಾಥಾಶ್ರಮದ ಹಿರಿಯ ಬಂದವನು ಕೈ ಕಟ್ಟಿಕೊಂಡು ನಿಂತುಕೊಂಡ. ಅಪ್ಪಾಸಾಹೇಬ್ ಕುರ್ಚಿಯಿಂದೆದ್ದು ಆ ಹಿರಿಯನನ್ನು ಕೂಡ್ರಿಸಿ,

"ಏನು ಯಜಮಾನರೆ, ನಿಮ್ಮ ಬೇಡಿಕೆಯೆಷ್ಟು?" ಎಂದು ಕೇಳಿದ.

"ತಾವು ತಿಳಿದವರು ಸ್ವಾಮಿಾ. ತಮ್ಮ ಮನಸಿಗೆ ಬಂದದ್ದು ಕೊಡಿರಿ."

"ಇರಲಿರಲಿ. ನಿಮ್ಮ ಬೇಡಿಕೆಯೆಷ್ಟು ತಿಳಿಸಿರಿ."

"ಆ....ದೇಸಾಯರ ಲಗ್ನದ ಕಾಲಕ್ಕೆ ನೂರಾ ಒಂದು ರೂಪಾಯಿ ಕೊಟ್ಟಿದ್ದರು....ಅಷ್ಟು...."

ಅಪ್ಪಾಸಾಹೇಬ್ ಚೆಕ್ ಬರೆದು ಸಹಿ ಹಾಕಿ ಆತನ ಕೈಗಿಡುತ್ತಾ,

"ಇಕೊಳ್ಳಿರಿ ಇನ್ನೂರು ರೂಪಾಯಿ. ಬೇಡುವಾಗ ತುಸು ಹೆಚ್ಚು ಬೇಡಬೇಕು. ಕೊಡುವವರು ಕಡಿಮೆ ಕೊಟ್ಟರೂ ಚಿಂತೆಯಿಲ್ಲ. ಸರಿ. ನಮಸ್ಕಾರ," ಎಂದು ಹೇಳಿ ಬಸಲಿಂಗನನ್ನು ಕೂಗಿ ಆ ಹಿರಿಯನನ್ನು ಕಳಿಸಿಬರಲು ತಿಳಿಸಿ ಕೃಷ್ಣರಾಯರನ್ನು ಕುರಿತು ಹೇಳಿದ:

"ಸ್ವಲ್ಪ ಆ ಹರಿಜನ ನಿಲಯದವರನ್ನ ಕರೆಯಿರಿ. ಅಳಿಯಂದಿರು ಸ್ವಲ್ಪ ಕೆಲಸ ಮಾಡಬೇಕು."

ಕೃಷ್ಣರಾಯರು ಎದ್ದು ಹೋಗಿ ಹರಿಜನನಿಲಯದ ಕಾರ್ಯದರ್ಶಿಯನ್ನು ಕರೆದುಕೊಂಡು ಬಂದರು.

"ಕೂತುಕೊಳ್ಳಿರಿ ಕಾರ್ಯದರ್ಶಿಗಳೇ, ಎಂದ ಅಪ್ಪಾಸಾಹೇಬ.

ಅವರು ಅನುಮಾನಿಸುತ್ತಾ ಕುಳಿತುಕೊಂಡರು.

"ನಿಮ್ಮ ನಿಲಯದಲ್ಲಿ ಒಟ್ಟು ಬಾಲಕರೆಷ್ಟಿದ್ದಾರೆ?"

"ಒಟ್ಟು ಮೂವತ್ತೈದು ಮಂದಿಯಿದ್ದಾರೆ ದೇಸಾಯರೆ. ಇಪ್ಪತ್ತು ಮಂದಿ ಹುಡುಗಿಯರು, ಉಳಿದವರು ಹುಡುಗರು."

ಅಪ್ಪಾಸಾಹೇಬ ಅವರ ಚಂದಾಪಟ್ಟಿ ತೆಗೆದುಕೊಂಡು ನೋಡಿದ.

ಅದರಲ್ಲಿನ ದೊಡ್ಡ ಅಂಕಿಯೆಂದರೆ ೧೦೧ ರೂಪಾಯಿಗಳದಾಗಿತ್ತು. ಆ ಪಟ್ಟಿಯಲ್ಲಿ ತನ್ನ ಹೆಸರು ಬರೆದು ೨೦೧ ರೂಪಾಯಿಗಳಿಗೆ ಚೆಕ್ ಕೊಟ್ಟು ನಮಸ್ಕಾರ ಮಾಡಿದ ಅಪ್ಪಾಸಾಹೇಬ್. ಅವರೂ ನಮಸ್ಕರಿಸಿ ಎದ್ದು ನಿಲ್ಲುತ್ತಲೂ ಮತ್ತೆ ಅವರನ್ನು ಕೂಡ್ರಿಸಿ, ಇಪ್ಪತ್ತು ಜನ ಹುಡುಗಿಯರಿಗಾಗಿ ಇಪ್ಪತ್ತು ಸೀರೆಗಳನ್ನೂ ಹುಡುಗರಿಗಾಗಿ ಅಂಗಿಯ ಬಟ್ಟೆಗಳನ್ನು ಕೊಟ್ಟು ಬಿಲ್ಲನ್ನು ಕಳಿಸುವಂತೆ ಬಟ್ಟೆಯಂಗಡಿಯವರಿಗೊಂದು ಚೀಟಿ ಬರೆದು ಕಾರ್ಯದರ್ಶಿಗಳ ಕೈಗಿತ್ತ.

"ಸೀರೆಗಳಾದರೆ ಸಾಕೇನ್ರೀ ಅಪ್ಪಾಸಾಹೇಬ್? ಕುಬುಸಗಳನ್ನೇ ಮರೆತಿರಲಲ್ಲ?" ಎಂದಳು, ಹತ್ತಿರದಲ್ಲಿಯೆ ಇದ್ದ ವಿಮಲೆ.

"ಹೌದು ಹೌದು. ಮರೆತಿದ್ದೆ," ಎಂದು ಹೇಳಿ ಕುಬುಸಗಳ ಖಣಗಳನ್ನು ಕೊಡುವಂತೆ ಚೀಟಿಯಲ್ಲಿ ಬರೆದ.

ಆ ಔದಾರ್ಯವನ್ನು ಕಂಡ ಕಾರ್ಯದರ್ಶಿಗಳು ತಬ್ಬಿಬ್ಬಾಗಿ ಹೋದರು. ಅಪ್ಪಾಸಾಹೇಬನನ್ನು ಯಾವ ರೀತಿ ವಂದಿಸಬೇಕೆಂಬುದೇ ಅವರಿಗೆ ತಿಳಿಯಲಿಲ್ಲ. ಆತ ಋಗುಳ್ನಕ್ಕು ಅವರನ್ನು ಕಳಿಸಿಕೊಟ್ಟು, ಮಹಿಲಾಶ್ರಮ, ವಿಧವಾಶ್ರಮಗಳ ಸಂಚಾಲಕರನ್ನು ಬರಮಾಡಿಕೊಂಡು ಸೀರೆ ಕುಬುಸಗಳನ್ನೂ ಪ್ರತಿಯೊಂದು ಸಂಸ್ಥೆಗೂ ಇನ್ನೂರು ರೂಪಾಯಿಗಳನ್ನೂ ಕೊಡಮಾಡಿದ. ಉಚಿತಪ್ರಸಾದ ನಿಲಯಕ್ಕೆ ಐದುನೂರಾಒಂದು ರೂಪಾಯಿ ಕೊಟ್ಟುದುದಾಯಿತು. ಹೈಸ್ಕೂಲಿನವರಿಗೆ ಒಂದು ಕೊಟಡಿಗೆ ತಗಲುವ ಮೂರು ಸಾವಿರ ರೂಪಾಯಿಗಳನ್ನು ಸಲ್ಲಿಸಿದುದಾಯಿತು.

ಮಾರನೆಯ ದಿನ ಆತ ತನ್ನ ರೈತರನ್ನೆಲ್ಲ ಬರಮಾಡಿಕೊಂಡು, ಲಾವಣಿಗೆ ಹಿಡಿದಿದ್ದ ಜಮೀನು ಕೊಳ್ಳಲು ಸಿದ್ಧರಾಗಿರುವವರ ಪಟ್ಟಿಯೊಂದನ್ನು ಸಿದ್ಧಗೊಳಿಸಿದ. ಧಣಿಯರು ತಾವಾಗಿಯೇ ಜಮೀನು ವಿಕ್ರಯಿಸಲು ಮುಂದೆ ಬಂದುದನ್ನು ಕಂಡು ಸಂತೋಷಗೊಂಡ ರೈತರು ಅಪ್ಪಾಸಾಹೇಬ್ ಹೇಳಿದ ಬೆಲೆಗೆ ಕೊಳ್ಳಲು ಸಿದ್ಧರಾದರು. ಒಂದು ತಿಂಗಳಿನೊಳಗಾಗಿ ಜಮೀನಿನ ಹಣ ತಂದು ಒಪ್ಪಿಸಿ ಕ್ರಯಪತ್ರ ಬರೆಸಿಕೊಂಡು ಹೋಗಬಹುದೆಂದು ಅವರಿಗೆ ತಿಳಿಸಿದ. ತಮ್ಮ ಮನೆತನಕ್ಕಾಗಿ ಇನ್ನೂರು ಎಕರೆ ತೋಟದ ಜಮೀನನ್ನು ಮಾತ್ರ ಇಟ್ಟುಕೊಂಡು ಉಳಿದುದನ್ನು ಸರಕಾರೀ ರಸ್ತೆಗೆ ಸಂಬಂಧಿಸಿದ ಸಾಮಾನ್ಯ

ಜಮಿಾನನ್ನಾಗಿ ಮಾರ್ಪಡಿಸಲು ನಿರ್ಧರಿಸಿದ. ಆಯಾ ಜಮಿಾನುಗಳ ಮಾರಾಟದ ವ್ಯವಸ್ಥೆಯನ್ನು ಬಸಲಿಂಗನ ಐದು ಮಂದಿ ವಕೀಲರಿಗೆ ಒಪ್ಪಿಸಿ ಕೊಟ್ಟು ಅವಕ್ಕೆ ಪ್ರತಿಫಲವೆಂದು ಪ್ರತಿಯೊಬ್ಬರಿಗೂ ಪ್ರತಿ ತಿಂಗಳಿಗೂ ನೂರು ರೂಪಾಯಿ ಕೊಡುವುದಾಗಿ ಹೇಳಿದ. ಬಸಲಿಂಗನನ್ನೇ ಕಾರಕೂನನನ್ನಾಗಿ ಮಾಡಿ ಅವನಿಗೂ ನೂರು ರೂಪಾಯಿನ ಸಂಬಳ ಗೊತ್ತುಮಾಡಿದ. ಐದಾರು ತಿಂಗಳುಗಳ ಮಟ್ಟಿಗಾದರೂ ಕೊಂಚ ಹಣ ಬರುವಂತಾಯಿತೆಂದು ವಕೀಲರಿಗೂ ಸಮಾಧಾನವುಂಟಾಯಿತು. ಅಂತೂ ನಿರ್ಮಲೆಯ ಮದುವೆ ಎಲ್ಲರಿಗೂ ಆನಂದವನ್ನೇ ಒದವಿಸಿತು.

ಕೃಷ್ಣರಾವ್ ದಂಪತಿಗಳು ತಮ್ಮ ಮನೆಗೆ ಹೊರಟರು. ತನ್ನ ಕಾರಿನಲ್ಲಿಯೇ ಅವರನ್ನು ಕೂಡ್ರಿಸಿಕೊಂಡು ಮನೆಗೆ ಕಳಿಸಿ ಬಂದ ಅಪ್ಪಾಸಾಹೇಬ್. ರಾಮರಾಯರು ತಮ್ಮ ಮನೆಗೆ ಹಿಂದಿರುಗಿದರು. ಆಪ್ತೇಷ್ಟರೂ ಅತಿಥಿಗಳೂ ಹೊರಟುಹೋಗಿ ಬಂಗಲೆ ಬರಿಯದಾಗುತ್ತಲೂ ಅಪ್ಪಾಸಾಹೇಬನಿಗೆ ಅಸಹ್ಯವೆನ್ನಿಸತೊಡಗಿತು. “ ಇಷ್ಟು ದಿವಸ ಈ ಮನೆ ಜನರಿಂದ ತುಂಬಿ ಕುಲುಕುಲು ನಗುತ್ತಿತ್ತು. ಈಗ ಭಣ ಭಣ ಅನ್ನಿಸುತ್ತಿದೆ. ಇನ್ನು ಈ ಮನೆಯಲ್ಲಿ ಒಬ್ಬನೇ ಹ್ಯಾಗೆ ಇರುವದು ?” ಎಂದು ಆತ ಚಿಂತಿಸತೊಡಗಿದ.

ನಿರ್ಮಲೆಯ ವಿವಾಹದಲ್ಲಿ ಒಂದು ಲಕ್ಷ ರೂಪಾಯಿಗಳವರೆಗೂ ಹಣ ವೆಚ್ಚವಾಗಿತ್ತು. ಬೇರೆ ಬೇರೆ ವಿಭಾಗಗಳ ವ್ಯವಸ್ಥೆ ವಹಿಸಿಕೊಂಡಿದ್ದವರು ಲೆಕ್ಕ ಒಪ್ಪಿಸಲು ಬಂದರು. ಆತ ಯಾರಿಂದಲೂ ಲೆಕ್ಕ ಕೇಳದೆ, “ ಹೆಚ್ಚು ಉಳಿದಿದ್ದರೆ ನಿಮ್ಮಲ್ಲೇ ಇರಲಿ. ನನಗಾಗಿ ನೀವು ಇನ್ನೂ ದುಡಿಯುವದಿದೆ. ಆಗ ಖರ್ಚು ಮಾಡುವಿರಂತೆ,” ಎಂದು ಹೇಳಿದ. ಬಾಜೀರಾಯರು ಮಾತ್ರ ತಮ್ಮ ಹತ್ತಿರ ಉಳಿದಿದ್ದ ಐದುಸಾವಿರ ರೂಪಾಯಿಗಳನ್ನು ಕೊಟ್ಟರು. ಅವುಗಳನ್ನು ರಮಾಬಾಯಿಯವರ ಕೈಗೆ ಹಾಕಿ ಅಪ್ಪಾಸಾಹೇಬ ಹೇಳಿದ:

“ ನಿಮ್ಮ ಮಗಳು ನನ್ನನ್ನ ಮದುವೆಯಾಗಬೇಕಂತ ಇದ್ದಳು. ನನಗೂ ಆ ವಿಚಾರವಿತ್ತು. ಆದರೆ ಅನಂತರ ನಾವಿಬ್ಬರೂ ಕೂತು ವಿಚಾರಮಾಡಿ, ನಮ್ಮ ಮದುವೆಯಿಂದ ಇಬ್ಬರಿಗೂ ಸುಖ ಸಿಕ್ಕಲಾರದೆಂದು ತಿಳಿದು ಆ ವಿಚಾರ ಬಿಟ್ಟುಕೊಟ್ಟದ್ದೇವೆ. ತನಗೊಬ್ಬ ಗಂಡನನ್ನು ನೋಡಿಕೊಡುವ ಜವಾಬ್ದಾರಿಯನ್ನು ವಿಮಲಾ ನನ್ನ ಮೇಲೇ ಹೊರಿಸಿದ್ದಾಳೆ. ನಾನೂ ಒಪ್ಪಿಕೊಂಡಿದ್ದೀನಿ.

ಮುಖ್ಯವಾಗಿ ನಿಮ್ಮ ಒಪ್ಪಿಗೆ ಬೇಕಾಗಿದೆ. ಇಂದಿನದು ಸುಧಾರಣೆಯ ಕಾಲ. ಮಹಾತ್ಮಾ ಗಾಂಧಿಯವರಂಥವರೂ ಹರಿಜನರ ಸಂಗಡ ಇದ್ದು ಅವರು ತಯಾರಿಸಿದ ಊಟವನ್ನು ಉಂಡಿಲ್ಲವೇ? ನಾವೂ ಹಾಗೇ ಎಷ್ಟೋ ಜನರೊಡನೆ ಸಂಬಂಧವಿಟ್ಟುಕೊಂಡಿದ್ದೀವಿ. ನಿರ್ಮಲೆಯ ಮದುವೆಯಲ್ಲಿ ನೀವೇ ನೋಡಿದಿರಲ್ಲ. ಎಲ್ಲಾ ಜಾತಿಯವರೂ ಸೇರಿದ್ದರು. ಯಾವ ಭೇದಭಾವವೂ ಇರಲಿಲ್ಲ. ಅಂತೆಯೇ ನಾನು ನಿಮ್ಮ ಮಗಳಿಗಾಗಿ ಚಿದಂಬರರಾಯರನ್ನು ಆರಿಸಿದ್ದೀನಿ. ಅವರು ಜಾತಿಯಿಂದ ಮರಾಠಾ ಹೌದು – ಅದೇನು ಮಹತ್ವದ್ದಲ್ಲ. ವಿಮಲೆಯಂತೂ ಅದನ್ನು ಲಕ್ಷಿಸುವುದಿಲ್ಲ. ನಿಮ್ಮ ವಿಚಾರವೇನು ತಿಳಿಸಿರಿ. ನೀವು ಒಪ್ಪಿದರೆ ಇಂದೇ ಮದುವೆಯ ನಿಶ್ಚಯ ಮಾಡುವಾ. ಅವರ ಮದುವೆಯ ಖರ್ಚಿಗಾಗಿ ಈ ಐದು ಸಾವಿರ ರೂಪಾಯಿ ತೆಗೆದುಕೊಳ್ಳಿರಿ."

ರಮಾಬಾಯಿಯ ಕಣ್ಣುಗಳಲ್ಲಿ ನೀರೂರಿತು.

"ನಾನೇನು ಹೇಳಲಿ ಅಪ್ಪಾಸಾಹೇಬ್? ನಿಮ್ಮ ಮಾತಿನ ವಿರುದ್ಧ ಹೋಗುವ ಮನಸು ನನಗೆ ಬಂದೀತೇ? ನೀವಿದ್ದೀರಿ, ಬಾಜೀರಾಯರಿದ್ದಾರೆ. ನನ್ನ ವಿಮಲೆ ನಿಮಗಿಬ್ಬರಿಗೂ ತಂಗಿಯಿದ್ದ ಹಾಗೆ. ನಿಮಗೆ ಸರಿಕಂಡಂತೆ ಮಾಡಿರಿ."

ಆ ಅಂತರ್ಜಾತೀಯ ವಿವಾಹಕ್ಕೆ ಬಾಜೀರಾಯರ ಸಮ್ಮತಿ ದೊರೆಯುವುದೂ ಕಷ್ಟವಾಗಲಿಲ್ಲ.

"ವಿಮಲೆಯೇ ತಯಾರಾಗಿರುವಾಗ ನಾನು ಬೇಡ ಅಂತೇನೆಯೇ? ನಿಶ್ಚಯಮಾಡಿಬಿಡಿರಿ," ಎಂದರವರು.

ವಿಮಲೆಯನ್ನು ಮದುವೆಯಾಗಲು ಚಿದಂಬರರಾಯರೂ ಸಂತೋಷದಿಂದ ಒಪ್ಪಿಕೊಂಡರು. ಮುಂದೆ ಒಂದು ತಿಂಗಳಿನೊಳಗಾಗಿ ಅವರ ವಿವಾಹವೂ ವಿಜೃಂಭಣೆಯಿಂದ ಜರುಗಿತು.

ನಿರ್ಮಲೆಯ ಮದುವೆಯ ಅನಂತರ ರಾಮರಾಯರಿಗೂ ಅವರ ಪತ್ನಿಗೂ ಅಪ್ಪಾಸಾಹೇಬನ ಬಗೆಗೆ ತುಂಬ ಗೌರವಾದರಗಳುತ್ಪನ್ನವಾದುವು. ಒಂದು ಲಕ್ಷದವರೆಗೂ ಹಣ ಖರ್ಚುಮಾಡಿ ತಮ್ಮ ಮಗಳ ಮದುವೆ ಜರಗಿಸಿದವನಿಗೆ ತಾವು ದ್ರೋಹ ಬಗೆಯುವುದು ಸರಿಯಲ್ಲವೆಂದೇ ಅವರಿಗೆನಿಸಿತು. ಅವನಿಗೆ

ಗೊತ್ತಾಗದಂತೆ ಅವರು ಎತ್ತಿಹಾಕಿದ್ದ ಅವನ ತಾಯಿಯ ಆಭರಣಗಳನ್ನು ಹಿಂದಿರುಗಿಸುವುದೆಂದು ನಿರ್ಧರಿಸಿದರು.

ಆ ನಿರ್ಧಾರದಂತೆ ರಾಮರಾಯರು ಒಂದು ದಿನ ಅಪ್ಪಾಸಾಹೇಬನನ್ನು ಬರಮಾಡಿಕೊಂಡು ಹೇಳಿದರು :

"ನಿನ್ನ ತಾಯಿ ಕಣ್ಣುಮುಚ್ಚುವಾಗ ತನ್ನ ಒಡವೆಗಳನ್ನ ನನ್ನ ಕೈಗೆ ಕೊಟ್ಟು, ನಿನ್ನ ಲಗ್ನದ ಕಾಲಕ್ಕೆ ಅವುಗಳನ್ನು ನಿನಗೊಪ್ಪಿಸಬೇಕೆಂತ ಹೇಳಿದ್ದಳು. ನೀನೇನು ಬೇಗ ಲಗ್ನವಾಗುವಂತೆ ಕಾಣುವದಿಲ್ಲ. ನಾವಿಬ್ಬರೂ ಕಾಶೀ ಯಾತ್ರೆಗೆ ಹೋಗಬೇಕೆಂತ ಮಾಡಿದ್ದೀವಿ. ಹಿಂದಿರುಗಿ ಬರುವದು ಯಾವಾಗಲೋ ಏನೊ. ಅದಕ್ಕೆ, ಈ ಒಡವೆಗಳನ್ನ ಈಗ ನಿನ್ನ ವಶಕ್ಕೊಪ್ಪಿಸಿ ಬಿಡುತ್ತೀನಿ."

ಆ ಒಡವೆಗಳನ್ನು ತೆಗೆದು ಕಣ್ಣಿಗೊತ್ತಿಕೊಳ್ಳುತ್ತಾ ಅಪ್ಪಾಸಾಹೇಬ ಹೇಳಿದ :

"ಇವುಗಳನ್ನ ತೆಗೆದುಕೊಂಡು ನಾನಾದರೂ ಏನು ಮಾಡಲಿ ?"

"ತಾಯಿಯ ಒಡವೆಗಳು. ನಿನ್ನ ಹತ್ತಿರವೇ ಇರಬೇಕು. ಮುಂದೆ ನಿನ್ನ ಕೈ ಹಿಡಿಯುವಾಕೆ ಹಾಕಿಕೊಳ್ಳುತ್ತಾಳೆ."

"ನನ್ನ ಕೈ ಹಿಡಿಯುವಾಕೆ ಈ ಜನ್ಮದಲ್ಲೇ ಸಿಕ್ಕುವಂತಿಲ್ಲ!" ಎಂದು ನಗುತ್ತ ನುಡಿದ ಅಪ್ಪಾಸಾಹೇಬ್.

## ಹದಿನೆಂಟು... ವೀರಭದ್ರಯ್ಯ ಮತ್ತು ಜಗದಂಬೆ

ನಿರ್ಮಲೆಯ ಮದುವೆಗೆ ಬಂದಿದ್ದ ನಗರದ ಮ್ಯಾಜಿಸ್ಟ್ರೇಟರಾದ ರಾವ್ ಸಾಹೇಬ್ ಜಗದಂಬೆಯವರೂ ಪೋಲೀಸ್ ವಕೀಲರಾದ ವೀರಭದ್ರಯ್ಯನವರೂ ಬಸಲಿಂಗನ ಲಕ್ಷ್ಯವನ್ನು ವಿಶೇಷವಾಗಿ ಸೆಳೆದುಕೊಂಡಿದ್ದರು. ಅವರಿಬ್ಬರೂ ಮದುವೆಯ ಮಂಟಪದಲ್ಲಿದ್ದಷ್ಟು ಹೊತ್ತೂ ಆತ ಅವರ ಹತ್ತಿರವೆ ಸುಳಿದಾಡುತ್ತಿದ್ದು ಅವರ ಸ್ವಭಾವ ವೈಶಿಷ್ಟ್ಯಗಳನ್ನರಿತುಕೊಳ್ಳಲು ಯತ್ನಿಸಿದ್ದ. ನಗರದ ಫೌಜದಾರರನ್ನಂತೂ ಯಾವಾಗಲೋ ಜೇಬಿಗೆ ಬಿಟ್ಟುಕೊಂಡುದುದಾಗಿತ್ತು. ಇನ್ನು ಪೋಲೀಸ್ ವಕೀಲರನ್ನೂ ಮ್ಯಾಜಿಸ್ಟ್ರೇಟರನ್ನೂ ವಶಪಡಿಸಿಕೊಂಡು ಬಿಟ್ಟರೆ ತಮ್ಮ ಕೆಲಸಕಾರ್ಯಗಳು ನಿರಾತಂಕವಾಗಿ ನಡೆಯುವವೆಂದು ಅವನಿಗೆನ್ನಿಸಿತ್ತು.

ಅವರಿಬ್ಬರನ್ನೂ ಬುಟ್ಟಿಗೆ ಬೀಳಿಸಿಕೊಳ್ಳಲು ಚೆನ್ನಿಯೂ ಆತುರಳಾಗಿದ್ದಳು.

ಜಗದಂಬೆಯವರು ಓರೆಕೋರೆ ನಗರಕ್ಕೆ ಹೊಸದಾಗಿ ವರ್ಗವಾಗಿ ಬಂದಿದ್ದ ಮೂವತ್ತರ ಪ್ರಾಯದ ಯುವಕರು. ವಕೀಲಿ ಪರೀಕ್ಷೆ ಮುಗಿಸಿ ತಮ್ಮೂರಿನಲ್ಲಿ ಕೆಲವು ವರ್ಷ ಆ ವೃತ್ತಿ ನಡೆಸಿದ ಬಳಿಕ ಮ್ಯಾಜಿಸ್ಟ್ರೇಟರಾಗಿ ನೇಮಕಹೊಂದಿದ್ದರು. ತೆಳ್ಳನೆಯ ಕುಳ್ಳನೆಯ ಆಸಾಮಿ. ಅವರ ಚಿಕ್ಕ ಮುಖಕ್ಕೆ ಕೊಂಚ ದೊಡ್ಡವೆನಿಸುವ ಕಣ್ಣುಗಳು. ತೀಕ್ಷ್ಣ ಬುದ್ಧಿಯನ್ನು ಸೂಚಿಸುವಂಥ ಎತ್ತರದ ಹಣೆ, ಸೀಟಾದ ಮೂಗು, ಬಿಗಿದ ತುಟಿ. ಓರೆಕೋರೆ ನಗರಕ್ಕೆ ಬಂದ ಬಳಿಕ ಅವರು ಯಾರ ಜೊತೆಗೂ ಹೆಚ್ಚಿನ ಸಲುಗೆ ಬೆಳಸಿರಲಿಲ್ಲ, ಯಾರೊಡನೆಯೂ ಹೆಚ್ಚಾಗಿ ಮಾತನಾಡುತ್ತಲೂ ಇರಲಿಲ್ಲ. ಮನೆಯಲ್ಲಿಯೂ ಅವರು ಒಬ್ಬರೇ. ಕುಟುಂಬದ ಜನ ಇನ್ನೂ ಅಲ್ಲಿಗೆ ಬಂದಿರಲಿಲ್ಲ. ಅವರ ಸಿಪಾಯಿ ಗೌಸೂ 'ಮಾಧವಾಶ್ರಮ'ದಿಂದ ಊಟ ತರುತ್ತಿದ್ದ. ಅವನೊಬ್ಬನ

ಜೊತೆಗೆ ಮಾತ್ರವೇ ಅವರು ಕೊಂಚ ಸಲುಗೆಯಿಂದ ವ್ಯವಹರಿಸುತ್ತಿದ್ದರು. ಅಪ್ಪಾಸಾಹೇಬನಿಂದ ಮದುವೆಯ ಆಮಂತ್ರಣ ಕೈಸೇರಿದಾಗ ಅಲ್ಲಿಗೆ ಹೋಗುವುದೇ ಬೇಡವೇ ಎಂದು ನಿಶ್ಚಯಿಸಲು ಅವರು ವಿಚಾರಿಸಿದ್ದುದು ಗೌಸೂವನ್ನೇ.

"ಅವರು ಬಹೋತ್ ಬಡಾ ದೇಸಾಯಿ ಸಾಹೇಬರು ರಾವ್‌ಸಾಹೇಬ್. ನೀವು ಹೋಗಲೇಬೇಕು," ಎಂದು ಗೌಸೂ ಹೇಳಿದ್ದ. ಅಂತೆಯೆ, ಜಗದಂಬೆಯವರು ನಿರ್ಮಲೆಯ ಮದುವೆಗೆ ಉಪಸ್ಥಿತರಾಗಿದ್ದರು.

ಜಗದಂಬೆಯವರ ನ್ಯಾಯಾಲಯದಲ್ಲಿ ವಿಚಾರಣೆಗೆ ಬರುತ್ತಿದ್ದ ಖಟ್ಲೆಗಳೆಲ್ಲವೂ ಕ್ರಿಮಿನಲ್ ಖಟ್ಲೆಗಳು. ಈ ಖಟ್ಲೆಗಳು ವಿಶೇಷವಾಗಿ ಪೋಲೀಸ್ ಖಾತೆಯಿಂದ ಬರುತ್ತವೆ. ಪೋಲೀಸರ ಪರವಾಗಿ ನ್ಯಾಯಾಲಯದಲ್ಲಿ ವಾದಿಸಲು ಸಂಬಳದ ವಕೀಲರೊಬ್ಬರು ನೇಮಕವಾಗಿರುತ್ತಾರೆ. ಓರೆಕೋರೆ ನಗರದಲ್ಲಿ ಪೋಲೀಸ್ ವಕೀಲರಾಗಿದ್ದವರೇ ವೀರಭದ್ರಯ್ಯನವರು.

ಈ ವೀರಭದ್ರಯ್ಯನವರಿಗೀಗ ನಡುವಯಸ್ಸು. ಅವರ ಮುಖವನ್ನು ನೋಡಿಯೇ ವೀರಭದ್ರಯ್ಯ ಎಂಬ ಹೆಸರನ್ನಿಡಲಾಯಿತೇನೊ. ಹೆಸರಿಗೆ ತಕ್ಕ ಹಾಗೆ ಅವರದು ಕೊಂಚ ಉಗ್ರವೆನ್ನಿಸುವ ಮುಖ, ಕೆಂಡದಂಥ ಕಣ್ಣು. ಯಾವಾಗಲೂ ಸಿಡಿಸಿಡಿಯೆನ್ನುವ ಮೂಗು. ಓರೆಕೋರೆ ಜಿಲ್ಲೆಯಲ್ಲಿನದೊಂದು ಹಳ್ಳಿಯ ಸ್ಥಿತಿವಂತ ಮನೆತನಕ್ಕೆ ಸೇರಿದ ವೀರಭದ್ರಯ್ಯನವರು ವಕೀಲಿ ಪರೀಕ್ಷೆಯನ್ನು ಮುಗಿಸಲು ತೊಂದರೆಯೇನೂ ಉಂಟಾಗಿರಲಿಲ್ಲ. ತಾಲ್ಲೂಕಿನ ನಗರದಲ್ಲಿರುವುದಕ್ಕಿಂತ ಜಿಲ್ಲಾ ನಗರದಲ್ಲಿದ್ದರೆ ವಕೀಲವೃತ್ತಿ ಚೆನ್ನಾಗಿ ನಡೆಯುವುದೆಂದು ಬಗೆದು ಓರೆಕೋರೆಗೆ ಬಂದು, ಆಪ್ತರೊಬ್ಬರ ಮನೆಯಲ್ಲಿ ತಳವೂರಿದ್ದರು. ನಾಲ್ಕೈದು ವರ್ಷಗಳವರೆಗೆ, ಹೇಳಿಕೊಳ್ಳುವಂಥ ದೊಡ್ಡ ಖಟ್ಲೆಗಳಾವುವೂ ಸಿಕ್ಕಿರಲಿಲ್ಲ. ಊರಿನಿಂದ ಹಣ ತರಿಸಿಕೊಂಡು ಸಂಸಾರ ಸಾಗಿಸುತ್ತ ಬಂದಿದ್ದರು. ಕೆಲದಿನಗಳು ಹಾಗೆ ಕಳೆದ ಬಳಿಕ ಸಮಯ ಸಾಧಿಸಿ ಅವರಿವರ ಕಾಲು ಹಿಡಿದು ಪೋಲೀಸ್ ವಕೀಲ್ ಕೆಲಸ ದೊರಕಿಸಿದ್ದರು.

ತಿಂಗಳಿಗೆ ಮುನ್ನೂರು ರೂಪಾಯಿಗಳ ಸಂಬಳ ಬರತೊಡಗುತ್ತಲೂ ವಕೀಲರ ಪರಿಸ್ಥಿತಿ ಸುಧಾರಿಸಿತ್ತು. ಅದರೊಡನೆಯೇ ನಿತ್ಯವೂ ಪೋಲೀಸರ ಸಂಬಂಧ ಬರತೊಡಗಿತ್ತು. ಫೌಜದಾರರಿಗಿಂತ ಹೆಚ್ಚಿನ ಸಂಬಳದವರೆಂದು ಪೋಲೀಸರಿಂದ ಸಲಾಮೂ ಸಿಕ್ಕತೊಡಗಿತು. ನಗರದ ಫೌಜದಾರರ ಸಹಾಯ

ದಿಂದ ಒಬ್ಬಿಬ್ಬರು ಪೋಲೀಸರವ್ನೂ ಬರವಣಿಗೆಯ ಕೆಲಸಕ್ಕಾಗಿ ನೇಮಿಸಿ ಕೊಂಡರು. ಬೇರೆ ವಕೀಲರಲ್ಲಿ ಬಸಲಿಂಗ ಮಾಡುತ್ತಿದ್ದ ಕೆಲಸವನ್ನೇ ಈ ಪೋಲೀಸರು ವೀರಭದ್ರಯ್ಯನವರ ಹತ್ತಿರ ಉಚಿತವಾಗಿ ಮಾಡಬೇಕಾಯಿತು. ಪೋಲೀಸ್ ವಕೀಲರೆಂಬ ಸ್ಥಾನಗೌರವದಿಂದಾಗಿ ನಗರದಲ್ಲಿ ಪ್ರತಿಷ್ಠೆಯೂ ಪ್ರಾಪ್ತವಾಯಿತು, ಅದರೊಡನೆ ವಕೀಲರ ದೃಷ್ಟಿಯೂ ಬದಲಾಯಿತು. ಮುನ್ನೂರು ರೂಪಾಯಿನ ಸಂಬಳ ಸಾಲದೆಂದೇ ಅವರಿಗೆನ್ನಿಸಿತು. ಅಡ್ಡ ಮಾರ್ಗ ಹಿಡಿದು ಹೆಚ್ಚು ಹಣ ಸಂಪಾದಿಸುವುದಕ್ಕಾಗಿ ಅವರು ಹಾತೊರೆಯ ತೊಡಗಿದರು.

ಫಿರ್ಯಾದಿ ಜನರ ಪರವಾಗಿ ವಾದಿಸುವುದಕ್ಕೆಂದು ಅವರಿಗೆ ಸರಕಾರ ದಿಂದ ಸಂಬಳವೇನೋ ದೊರೆಯುತ್ತಿತ್ತು. ಅಪರಾಧಿಗಳಿಗೂ ತುಸು ನೆರವು ನೀಡಿ ಅವರಿಂದಲೂ ಸ್ವಲ್ಪ ಹಣ ದೊರಕಿಸಿದರೆ ತಪ್ಪೇನು? ಎಂದೇ ಅವರು ಯೋಚಿಸಿದರು, ತಪ್ಪೇನು ಇಲ್ಲವೆಂದೇ ಅವರಿಗೆನ್ನಿಸಿತು. ತಾನು ವಕೀಲ ವೃತ್ತಿಯನ್ನೇ ಮುಂದುವರಿಸಿಕೊಂಡು ಬಂದಿದ್ದಲ್ಲಿ ಒಂದೆರಡು ವರ್ಷಗಳ ಅವಧಿಯಲ್ಲಿಯೆ ತಿಂಗಳೊಂದಕ್ಕೆ ಸಾವಿರಾರು ರೂಪಾಯಿಗಳನ್ನು ಸಂಪಾದಿಸ ಬಹುದಾಗಿದ್ದಿತೆಂದು ಅವರೆಂದುಕೊಂಡರು. ತಾವು ವೃತ್ತಿ ನಡೆಸುತ್ತಿದ್ದಾಗಿನ ಸರಾಸರಿ ಗಳಿಕೆ ಹತ್ತುರೂಪಾಯಿ ಕೂಡಾ ಇರಲಿಲ್ಲವೆಂಬುದನ್ನು ಅವರು ಗಮನಿಸಲಿಲ್ಲ. ತಮ್ಮ ಮನೆಯ ಸಾಮಾನುಗಳನ್ನೋ ಮಾನವನ್ನೋ ಕಳೆದು ಕೊಂಡು ಪೋಲೀಸರನ್ನಾಶ್ರಯಿಸಿ ನ್ಯಾಯಾಲಯಕ್ಕೆ ಬರುವ ಫಿರ್ಯಾದಿಗಳಿಗೆ ದ್ರೋಹ ಬಗೆಯುವುದು ಅನ್ಯಾಯವೆಂಬುದನ್ನು ಅವರು ಲಕ್ಷಿಸಲಿಲ್ಲ. ಆ ವ್ಯಾಜ್ಯಗಳಲ್ಲಿನ ಲೋಪದೋಷಗಳನ್ನು ಅಪರಾಧಿಗಳ ವಕೀಲರಿಗೆ ತಿಳಿಸಿ ಹಣ ಗಳಿಸುವ ಕಾರ್ಯಕ್ಕಾರಂಭಿಸಿದರು.

ವೀರಭದ್ರಯ್ಯನವರ ಈ ನೀತಿಯನ್ನು ಬಸಲಿಂಗ ಎಂದೋ ತಿಳಿದು ಕೊಂಡಿದ್ದನಾದರೂ ಅವರೊಡನೆ ಅದುವರೆಗೆ ಪ್ರತ್ಯಕ್ಷ ಸಂಬಂಧ ಬರುವ ಯೋಗ ಮಾತ್ರ ಲಭಿಸಿರಲಿಲ್ಲ. ನಿರ್ಮಲೆಯ ಮದುವೆಯ ಕಾಲಕ್ಕೆ ವಿಶೇಷ ಪರಿಚಯವಾಯಿತು. ಬಸಲಿಂಗ ಮಂಶೀರಾ ಮಾರಾಟ ಮಾಡುವ ಸುದ್ದಿಯೂ ಅವರಿಗೆ ಗೊತ್ತಾಯಿತು. ವೀರಭದ್ರಯ್ಯನವರೂ ಗೋವಾದೇವಿಯ ಭಕ್ತ ರಾಗಿದ್ದವರೇ. ಬಸಲಿಂಗನನ್ನು ಕರೆಸಿಕೊಂಡು ಉಪಾಯವಾಗಿ ಕೇಳಿದರು:

"ನೀನು ಮುಶೀರಾ ಮಾರಾಟ ಮಾಡುತ್ತೀಯಂತೆ. ಹೌದೇನು?"

ಬಸಲಿಂಗ ಒಡನೆಯೇ ಒಪ್ಪಿಕೊಳ್ಳಲಿಲ್ಲ.

"ಯಾರೋ ಆಗದವರು ಸುಳ್ಳುಸುಳ್ಳೇ ಸುದ್ದಿ ಹಬ್ಬಿಸಿರಬೇಕು. ನನಗ್ಯಾಕೆ ಬೇಕು ಸಾಹೇಬರೇ ಇಂಥಾ ವ್ಯವಹಾರ?"

"ಇರಲಿರಲಿ. ನನ್ನ ಮುಂದೆ ನಿನ್ನ ಹಾರಿಕೆಯ ಮಾತು ನಡೆಯೂದಿಲ್ಲ, ತಿಳೀತೇನು? ನಾನು ಮನಸು ಮಾಡಿದರೆ ನಿನ್ನನ್ನೂ ನಿನ್ನ ಹೆಂಡತಿಯನ್ನೂ ಹತ್ತುವರ್ಷ ಜೇಲಿಗೆ ಕಳಿಸಬಹುದು. ಗೊತ್ತಾಯಿತೋ?"

ಬಸಲಿಂಗ ಬೇಕೆಂತಲೇ ಅಂಜಿಕೊಂಡವನ ಹಾಗೆ ನಟಿಸುತ್ತಾ ಹೇಳಿದ:

"ರಾವ್‌ಸಾಹೇಬರು ಮನಸು ಮಾಡಿದರೆ ಏನಾಗಲಿಕ್ಕಿಲ್ಲ? ಆದರೆ, ಸುಮ್ಮಸುಮ್ಮನೆ ನಮ್ಮಂಥಾ ಬಡವರ ಮ್ಯಾಲ್ಯಾಕೆ ಕಣ್ಣು ಸಾಹೇಬರೆ?"

"ಇಷ್ಟುದಿವಸ ನನಗೆ ತಿಳಿಸದೆ ವ್ಯವಹಾರ ಮಾಡಿದ ತಪ್ಪಿಗೆ ನಿನಗೇನು ದಂಡ ಕಟ್ಟಬೇಕು ಹೇಳು."

"ಇವತ್ತು ರಾತ್ರೆ ನಮ್ಮ ಮನೆಗೇ ಊಟಕ್ಕೆ ಬಂದುಬಿಡಿರಿ ರಾವ್ ಸಾಹೇಬರೆ. ಅಲ್ಲೇ ದಂಡ ಕಟ್ಟುವಿರಂತೆ!" ಎಂದು ಹೇಳಿ ಬಸಲಿಂಗ ಹಲ್ಲು ಕಿರಿದ.

"ದಂಡ ಕಟ್ಟಲು" ಬಂದ ವೀರಭದ್ರಯ್ಯನವರ ಜುಟ್ಟನ್ನು ಅಂದು ರಾತ್ರಿ ಚೆನ್ನಿ ಗಟ್ಟಿಯಾಗಿ ಹಿಡಿದುಕೊಂಡುಬಿಟ್ಟಳು.

ಅಂದಿನಿಂದ ಅವರು ಚೆನ್ನಿಯ ಮನೆಯಲ್ಲಿ ಆಗಾಗ ರಾತ್ರಿ ಕಳೆಯ ತೊಡಗಿದರು. ಚೆನ್ನಿಯ ಬಳಗದ ಪರಿಚಯವೂ ಅವರಿಗಾಯಿತು. ಗೌರೀದೇವಿ ಲೀಲಾದೇವಿಯರು ಅವರ ನೆಚ್ಚಿನ ಗೆಳತಿಯರಾದರು. ಮುಶೀರಾ ಆಗಲಿ, ಹೆಂಗಸರಾಗಲಿ ಉಚಿತವಾಗಿ ಎಷ್ಟು ಬಾರಿ ಲಭಿಸಲು ಸಾಧ್ಯ? ವಕೀಲರು ತಮ್ಮ ಕೈ ಸಡಿಲುಗೊಳಿಸಲೇಬೇಕಾಗಿ ಬಂದಿತು. ಅದೇ ಸಂಧಿ ಸಾಧಿಸಿ ಬಸಲಿಂಗ ಕಾರ್ಯೋನ್ಮುಖನಾದ.

ಒಬ್ಬ ಅಪರಾಧಿಯ ಮೇಲೆ ಪೋಲೀಸರು ಖಟ್ಲೆ ಹೂಡಿದ ಸುದ್ದಿ ತಿಳಿಯುತ್ತಲೂ ಬಸಲಿಂಗ ಆತನಲ್ಲಿಗೆ ಧಾವಿಸಿಹೋಗಿ ಅವನ ಪರಿಚಯ ಮಾಡಿಕೊಂಡು, ಇಂತಿಷ್ಟು ಹಣಕ್ಕೆ ಅವನನ್ನು ಉಳಿಸಿಕೊಡುವ ಜವಾಬ್ದಾರಿ ವಹಿಸಿ, ಆತನನ್ನು ತನ್ನ ವಕೀಲರಲ್ಲಿಗೆ ಕರೆದುತಂದು ಅವರಿಗೂ ಅಷ್ಟು ಹಣ,

ವೀರಭದ್ರಯ್ಯನವರಿಗೂ ಅಷ್ಟು ಹಣ ಸಿಕ್ಕುವಂತೆ ಮಾಡತೊಡಗಿದ. ಆ ಹಣದಲ್ಲಿ ಬಸಲಿಂಗನಿಗೂ ಕಮಿಷನ್ ಇದ್ದೇ ಇತ್ತು. ವೀರಭದ್ರಯ್ಯನವರಿಗೆ ದೊರೆತ ಹಣವೂ ನೇರವಾಗಿ ಚೆನ್ನಿಯ ಕೈಗೇ ಬರುತ್ತಿತ್ತು.

ಬಸಲಿಂಗನಿಗೆ ಇಷ್ಟರಿಂದಲೇ ತೃಪ್ತಿಯಾಗಲಿಲ್ಲ.

ಮ್ಯಾಜಿಸ್ಟ್ರೇಟ್ ಜಗದಂಬೆಯವರನ್ನೇ ಬಲೆಗೆ ಹಾಕಿಕೊಳ್ಳಬೇಕೆಂಬುದು ಅವನ ಮಹತ್ವಾಕಾಂಕ್ಷೆಯಾಗಿತ್ತು. ಆದರೆ ಅದು ಸಿದ್ಧಿಸುವುದೊಂದು ದೊಡ್ಡ ಸಮಸ್ಯೆಯಂತಾಗಿತ್ತು. ಜಗದಂಬೆಯವರ ಬಿಗುವಿನ ಸ್ವಭಾವದ ಕೋಟೆಯನ್ನೊಡೆದು ಅವರ ಅಂತರಂಗವನ್ನು ಗೆಲ್ಲುವುದು ಸುಲಭವಾದ ಕೆಲಸವಾಗಿರಲಿಲ್ಲ.

"ಮ್ಯಾಜಿಸ್ಟ್ರೇಟರನ್ನ ಕೈಯಾಗ ಹಿಡುಕೊಂಡೆವಂದರೆ ನಾವೇ ಈ ಊರಿನ ರಾಜಾರಾಣಿ ಆಗುತೀವಿ ಬಸಲಿಂಗಾ. ಆಮ್ಯಾಲ ನಮ್ಮನ್ನ ಕೇಳುವವರ್‍ಯಾರು? ಎಲ್ಲಾರೂ ಸಲಾಮು ಹೊಡೀಬೇಕಾಗುತ್ತೈತಿ ನಮುಗ!" ಎನ್ನುವಳು ಚೆನ್ನಿ.

"ಹೌದೇ. ಆದರೆ ಅವರ ದೋಸ್ತಿ ಮಾಡೂದು ಹ್ಯಾಂಗ? ಅವರು ಯಾರ ಸಂಗಡಲೂ ಮಾತಾಡೂದಿಲ್ಲ. ಯಾರನ್ನೂ ಮನಿಯೊಳಗ ಸೇರಿಸೂದಿಲ್ಲ."

"ಅವರ ಸಿಪಾಯಿ ಇದಾನಲ್ಲಾ ಗೌಸೂನೋ ಗುಲಾಮನೋ ಅಂತ. ಅವನ್ನ ಮೊದಲು ಹಿಡಿದರ ಸಾಹೇಬರು ಸಿಕ್ಕಾರು ಹಿಂದಿನಿಂದ. ಅವ ಹ್ಯಾಂಗ ಅದಾನ ಅನ್ನೂದನ್ನ ತಿಳುಕೊಂಡೀಯಾ?"

"ಚಲೋ ಯುಕ್ತಿ ಹುಡುಕಿದಿ ನೋಡೇ ಚೆನ್ನಿ. ನಿನ್ನ ಬುದ್ಧಿ ಅಂದರ ಬುದ್ಧಿ!"

ಅದೇ ದಿನ ಬಸಲಿಂಗ ಗೌಸುವನ್ನು ಕಂಡು, ಅವನಿಗೂ ಮದ್ಯದ ವ್ಯಸನವಿರುವುದನ್ನು ತಿಳಿದುಕೊಂಡು ಉಪಾಯಾಂತರದಿಂದ ಅವನನ್ನು ಮನೆಗೆ ಕರೆದುತಂದ. ಇಂಪೀರಿಯಲ್ ಹೊಟೇಲಿನಿಂದ ತರಿಸಿದ ಬಿರ್ಯಾಣಿ ಹೊಟ್ಟೆಗೆ ಬೀಳುತ್ತಲೂ ಗೌಸುವಿಗೆ ಸೆರೆಯ ದಾಹವಾಯಿತು.

"ಏನಾದರೂ ಇದ್ದರೆ ಕೊಡಪ್ಪಾ ಬಸಸಿಂಗಪ್ಪಾ," ಎಂದ ಗೌಸು.

"ಏನಾದರೂ ಅಂದರೇನೊ? ಔರತ್ ಗಿವ್‌ರತ್ ಬೇಕೇನು?" ಎಂದು ನಗುತ್ತಾ ಕೇಳಿದ ಬಸಲಿಂಗ.

“ಔರತ್ ಇರಲಪ್ಪಾ, ಮೊದಲು ಒಂದು ಕಪ್ ದಾರೂ ಇದ್ದರೆ ಕೊಡು,” ಎಂದು ಅಂಗಲಾಚಿದ ಗೌಸು.

“ಸೆರೆ ಕುಡಿಯುವವರನ್ನೆಲ್ಲಾ ಜೇಲಿಗೆ ಕಳಿಸುವ ಮ್ಯಾಜಿಸ್ಟ್ರೇಟರ ಸಿಪಾಯಿ ನಿನಗೆ ದಾರೂ ಕೊಟ್ಟರೆ ನಮ್ಮ ಗತಿಯೇನು ಗೌಸೂಸಾಬ್? ನಮ್ಮನ್ನು ಜೇಲಿಗೆ ಕಳಿಸಬೇಕಂತ ಮಾಡೀಯೇನು?”

“ಅರೆ ಯಾರ್! ಅಂಥಾ ನಮಕ್‌ಹರಾಂ ಕೆಲಸ ನನ್ನಿಂದಾದೀತೇನು? ಕೊಡು, ಕೊಡು. ಬಹಳ ದಿವಸಾತು ದಾರೂ ಕುಡಿದು.”

ಗೌಸುವನ್ನು ಹಾಗೆ ಕೆರಳಿಸಿ ಬಸಲಿಂಗ ಒಂದು ಕಪ್ಪು ಮಶೀರಾ ಕೊಟ್ಟ. ಗೌಸೂ ಅದನ್ನು ಒಂದೇ ಗುಟುಕಿಗೆ ಹೊಟ್ಟೆಗಿಳಿಸಿ “ಯಾ ಅಲ್ಲಾ!” ಎಂದು ರಾಗ ಎಳೆದು ಕಪ್ಪು ಮುಂದೆ ಮಾಡಿದ.

“ಇನ್ನೊಂದು ಕಪ್ ತಗೋ ಗೌಸೂ ದೋಸ್ತ್?”

ತೃಪ್ತನಾದ ಗೌಸೂ ಬಸಲಿಂಗನನ್ನು ಕೃತಜ್ಞತೆಯಿಂದ ದಿಟ್ಟಿಸುತ್ತ,

“ಅಲ್ಲಾ ತೇರೇಕೋ ಭಲಾ ಕರೇ ದೋಸ್ತ್! ನನ್ನಿಂದ ನಿನಗೇನಾಗ ಬೇಕೋ ಹೇಳಿದರೆ ಮಾಡಿಕೊಡ್ತೇನಿ,” ಎಂದು ಬಹಳ ಉದಾರವಾಗಿ ಹೇಳಿದ.

“ನೀನೆಂದರೇನು ದೊಡ್ಡ ಸುಲ್ತಾನ್ ಅಂತ ತಿಳಿದೀಯೇನೋ ಮಗನೇ!” ಎಂದು ನಗೆಯಾಡಿದ ಬಸಲಿಂಗ.

“ನಿಮ್ಮ ರಾವ್‌ಸಾಹೇಬರಿಗಿನ್ನೂ ಮದುವಿಯಾಗಿಲ್ಲೇನಪಾ ಗೌಸೂ?” ಎಂದು ಚೆನ್ನಿ ಪ್ರಶ್ನಿಸಿದಳು.

“ಇಲ್ಲವಾ, ಇನ್ನೂ ಆದಂಗ ಕಾಣೂದಿಲ್ಲ.”

“ಅದು ಹ್ಯಾಂಗ ಗೊತ್ತಾತು ನಿನಗ?”

“ಅವರಿಲ್ಲಿ ಬಂದ ಮ್ಯಾಲ ನಾನೊಮ್ಮೆ ಕೇಳಿದಿನಿ–‘ಬಾಯಿಸಾಹೇಬರನ್ನ ಕರದುತರುವದಿಲ್ಲೇನ್ರೀ–’ ಅಂತ. ಅವರು ‘ನನ್ನ ಮದುವೀನೇ ಆಗಿಲ್ಲ ಇನ್ನೂ. ಗೌಸೂ, ಎಲ್ಲಾದರೂ ಒಬ್ಬ ಬಾಯಿ ಹುಡುಕು’ ಅಂತೆಂದು ನಕ್ಕರು. ನನಗೆ ಅಂಜಿಕಿ ಬಂತು. ನಾನು ಹಾಂಗ ಕೇಳಿದ್ದಕ್ಕ ಸಾಹೇಬರು ಸಿಟ್ಟಾಗಿರಬೇಕಂತ ತಿಳಿದು ಸುಮ್ಮನಾದಿನಿ.”

“ಹುಚ್ಚ ನನ್ನ ಮಗನೇ ಸಿಟ್ಟೆಲ್ಲ ಏನಿಲ್ಲ. ಅವರಿಗೆ ಖರೇ ಅಂದರೂ

ಬಾಯಿಮಾ ಬೇಕಾಗಿದಾಳ ಬಾಯಿಮಾ. ಅವತ್ತೇ ಬಂದು ನನಗ್ಯಾಕೆ ಹೇಳಲಿಲ್ಲ ನೀ? ಫಸ್ಟ್‌ಕ್ಲಾಸ್ ಬಾಯಿಮಾ ಕೊಡಿಸುತಿದ್ದಿನಲ್ಲ!" ಎಂದಳು ಚೆನ್ನಿ.

"ಅಂದರೆ? ಅವರಿಗೂ ಬಾಯಿಮಾ ಬೇಕಾಗೈತಿ ಅಂತೀರಾ?" ಬೆರಗು ಗೊಂಡ ಧ್ವನಿಯಲ್ಲಿ ಕೇಳಿದ ಗೌಸೂ.

"ಥೂ! ನಿನಗ ಇಷ್ಟೂ ತಿಳಿಯೂದಿಲ್ಲಲ್ಲ! ಬಾಯಿಮಾ ಯಾರಿಗೆ ಬ್ಯಾಡ? ಹೂಂ. ಅದಿರಲಿ. ಅವರಿಗೆ ಬಾಟ್ಲಿಯ ನಾದ ಏನಾರೆ ಐತ್ಯೋ ಹ್ಯಾಂಗ?"

"ಏನೋಪ್ಪಾ. ಇಲ್ಲೀತನಕಾ ನನಗಂತೂ ಗೊತ್ತಾಗಿಲ್ಲ. ಒಮ್ಮೆ ಲಹರಿಯ ವ್ಯಾಲಿದ್ದಾಗ ಸಹಜ ಕೇಳಿದರು; 'ಗೌಸೂ, ನೀನೂ ಸೆರೆ ಕುಡೀತೀ ಏನೋ?' ಅಂತ. 'ಇಲ್ಲಾ ಸಾಬ್' ಅಂದೆ ನಾನು. ಅವರು ಅಷ್ಟಕ್ಕೇ ಸುಮ್ಮನಾದರು."

"ಇಲ್ಲ ಅಂತ ಯಾಕಂದೆ ನೀನು? ಹೂಂ ಅಂದಿದ್ದರೆ ಅವರ ಗುಟ್ಟು ಹೊರಬೀಳುತ್ತಿತ್ತು."

"ಅರೆ ಬಾಪರೆ! ಆಗಿಂದಾಗ ಪೋಲೀಸರನ್ನ ಕರೆಸಿ ಜೇಲಿಗೆ ಕಳಿಸಿ ಬಿಟ್ಟಿದ್ದರಂದರೆ!"

"ಸುಮ್ಮರಕೆ ಬಚ್ಚೆ! ಜೇಲಿಲ್ಲ ಗೀಲಿಲ್ಲ. ಇಂಥಾ ಎಷ್ಟು ಮಂದಿ ಸಾಬರನ್ನ ನೋಡಿಲ್ಲ ನೀ? ನೂರಕ್ಕ ತೊಂಬತ್ತು ಮಂದಿಗೆ ಬಾಟ್ಲಿ ಮತ್ತು ಬಾಯಿಮಾ ಚಟ ಹತ್ತಿರುತೈತಿ. ಇನ್ನೊಮ್ಮೆ ಖಟಪಟಿ ಮಾಡಿ ನೆಟ್ಟಗೆ ತಿಳುಕೋ. ಈಗ ಎಲ್ಲಿಗೆ ಹೋಗುತೀ ನೀ?" ಎಂದ ಬಸಲಿಂಗ.

"ಸಾಹೇಬರ ಊಟಾ ಒಯ್ಯ್ಯಾದೈತಿ ಖಾನಾವಳಿಯಿಂದ. ಸೆರೆಯ ವಾಸನೆ ಬಡಿದರ ಸಾಹೇಬರೇನಂತಾರೋ ಏನೊ."

"ಅವರು ಏನೂ ಅನ್ನೂದಿಲ್ಲ ಗೌಸೂ. ನೀನೇನು ಅಂಜಬ್ಯಾಡ. ಬೇಕಂತಲೇ ಅವರ ಹತ್ತರಲೇ ಹಾದಾಡುತಾ ಇರು. ಅವರಿಗೆ ಕುಡಿತದ ಚಟ ಇದ್ದರೆ ಅವರು ಖಂಡಿತವಾಗಿ ನಿನ್ನ ಕೇಳೇಕೇಳುತಾರ. ಚಟ ಇದ್ದ ಲಕ್ಷಣ ಅದು. ಬ್ಯಾರೆಯವರು ಕುಡಿದ ವಾಸನೆ ಬಡಿದರೆ ಸಾಕು, ಅವರಿಗೂ ಕುಡಿಯುವ ಆಶಾ ಆಗುತ್ತೈತಿ. ಆಗ ಬಸಲಿಂಗ ಇರಲಿ, ಗೌಸೂ ಇರಲಿ, ಯಾರಿದ್ದರೂ ಅವರು ತಮಗೂ ಸ್ವಲ್ಪ ತಂದುಕೊಡಬೇಕಂತ ಕೇಳುತಾರ.

ಚಟ ಇರದಿದ್ದರೆ ಸ್ವಲ್ಪ ಸಿಟ್ಟುಮಾಡಿ ಒಂದೆರಡು ಬಯ್ಯುತಾರ. ಆಗ ಅವರ ಕ್ಷಮಾ ಕೇಳಿ ಪಾರಾಗಿಬಿಟ್ಟರಾಯಿತು."

ಬಸಲಿಂಗನ ಈ ಸೂಚನೆ ಗೌಸುವಿನ ಮನಸ್ಸನ್ನು ಹಿಡಿಯಿತು. ಸಾಹೇಬರಿಗೆ ಕುಡಿತದ ಚಟವಿದ್ದುದೇ ಆದರೆ ಅವರಿಂದ ತನಗೂ ಅಷ್ಟಿಷ್ಟು ಮದ್ಯ ಉಚಿತವಾಗಿ ಸಿಕ್ಕೇ ಸಿಗುವುದು.

"ಬಸಲಿಂಗಪ್ಪಾ, ಸಾಹೇಬರು ತಮಗೂ ಬೇಕು ಅಂತ ಹೇಳಿದರೆ ನಾನೆಲ್ಲಿಂದ ತರಲಿ?"

"ಅದಕ್ಯಾಕೆ ಚಿಂತೆ? ನಾನೇನು ಸತ್ತಿದ್ದೇನೇನು? ಅಂಜಬ್ಯಾಡ. ನಿನಗೆ ತಂದುಕೊಡಲಿಕ್ಕೆ ಅಂಜಿಕೆಯಾಗುತ್ತೈತಿ ಅಂತ ಹೇಳು. ಅವರೇ ಇಲ್ಲಿಯ ತನಕ ಬಂದರೆ ಬೇಕಾದಷ್ಟು ಸಿಗುತ್ತೈತಿ ಅಂತ ಹೇಳು."

"ಅವರು ಬರಲಿಕ್ಕೆ ತಯಾರಾಗದಿದ್ದರೆ?"

"ಅವರಪ್ಪ ತಯಾರಾಗುತಾನ. ಚಟ ತೀರಿಸಿಕೊಳ್ಳೂದಕ್ಕೆ ಎಲ್ಲಿ ಬೇಕಂದರಲ್ಲಿಗೆ ಬರಲಿಕ್ಕೆ ತಯಾರಾಗುತಾರ ಕುಡುಕರೆಲ್ಲಾ. ಒಂದು ವ್ಯಾಳೆ ಅವರು ಬರದಿದ್ದರೆ ನೀ ಬಂದು ನನಗೆ ತಿಳಿಸು. ಮುಂದಿಂದು ನಾ ನೋಡಿಕೊಂತೀನಿ," ಎಂದು ಹೇಳಿ ಬಸಲಿಂಗ ಮತ್ತೊಂದು ಗ್ಲಾಸು ಸೆರೆಯನ್ನು ಕೊಟ್ಟ. ಅದನ್ನು ಲಗುಬಗೆಯಿಂದ ಕುಡಿದು ಗೌಸೂ ಹೊರಟುನಿಂತ. ಅವನ ಹಿಂದೆಹಿಂದೆ ಬಸಲಿಂಗನೂ ಎದ್ದು ನಡೆದ. ಗೌಸೂ ಎಲ್ಲಿಯಾದರೂ ಗೊಂದಲದಲ್ಲಿ ಬಿದ್ದು ಸಿಕ್ಕಿಹಾಕಿಕೊಂಡರೆ ಅವನ ನೆರವಿಗಿರುವ ಉದ್ದೇಶದಿಂದಲೇ ಬಸಲಿಂಗ ಅವನನ್ನು ಹಿಂಬಾಲಿಸಿದ್ದುದು.

ಅಷ್ಟು ಮದ್ಯ ಸೇವಿಸಿದ್ದರೂ ಗೌಸೂ ಮೈಮರೆತಿರಲಿಲ್ಲ. ಅವನು ನೇರವಾಗಿ ಖಾನಾವಳಿಗೆ ಹೋಗಿ, ಜಗದಂಬೆಯವರಿಗಾಗಿ ತುಂಬಿರಿಸಿದ್ದ ಊಟದ ಡಬ್ಬಿಯನ್ನೆತ್ತಿಕೊಂಡು ಸಾಹೇಬರ ಬಂಗಲೆಗೆ ಹೊರಟ. ಆಗಲೂ ಬಸಲಿಂಗ ಅವನ ಬೆನ್ನು ಬಿಡಲಿಲ್ಲ. ಬಂಗಲೆಗೆ ಮುಟ್ಟಿದಾಗ ಮಾತ್ರ ಗೌಸುವಿಗೆ ಕೊಂಚ ಹೆದರಿಕೆಯೆನ್ನಿಸಿತು. ಸಾಹೇಬರು ತನ್ನನ್ನು ಪೋಲೀಸರ ವಶಕ್ಕೊಪ್ಪಿಸಿದರೆ ಗತಿಯೇನು? ಹಾಗೆಂದ ಮಾತ್ರಕ್ಕೆ ಅವನು ಊಟದ ಡಬ್ಬಿಯನ್ನು ತೆಗೆದುಕೊಂಡು ಸಾಹೇಬರ ಹತ್ತಿರ ಹೋಗುವುದನ್ನೂ ತಪ್ಪಿಸುವಂತಿರಲ್ಲ.

"ಸಾಽಬ್.....ಖಾಽಽಽಽ ನಾಽ!"

ಅವನ ರಾಗದ ಧ್ವನಿಯನ್ನು ಜಗದಂಬೆಯವರು ತಕ್ಷಣ ಅರ್ಥ ಮಾಡಿಕೊಂಡರು.

"ಯಾಕೆ ಗೌಸೂ, ತಡವಾಯ್ತಲ್ಲ?"

"ಸಾಃಬ್....ಖ....ಖ....ಖಾನಾವಳಿ...."

"ಏನು ತನ್ನ ತಲೆ ಹಾಗಂದರೆ?" ತುಸು ಹತ್ತಿರ ಬಂದು ಸಾಹೇಬರು ಗದರಿಸಿದರು.

"ಮಾಫ್ ಕರನಾ ಸಾಬ್!" ಎಂದು ತೊದಲಿದ ಗೌಸೂ.

"ಸೆರೆ ಕುಡಿದು ಬಂದೀಯಾ ಕತ್ತೇಮಗನೆ! ಪ್ರೊಹಿಬಿಶನ್ ಬಂದು ಇಷ್ಟು ವರ್ಷ ಆದರೂ ನೀನು ಸೆರೆ ಎಲ್ಲಿಂದ ತಂದೆ? ಪೋಲೀಸರನ್ನ ಕರೀತೀನಿ ತಡೆ."

ಗೌಸೂ ಆಗ ಮಾತ್ರ ಪೂರಾ ಹೆದರಿಕೊಡು ಸಾಹೇಬರ ಕಾಲು ಹಿಡಿದು, "ಮಾಫ್ ಕರನಾ ಸಾಬ್. ಇನ್ನೊಮ್ಮೆ ನಹಿ ಪಿವ್ಹೂಂಗಾ...." ಎಂದ.

"ಎಲ್ಲಿ ಸಿಕ್ಕಿತು ಬೊಗಳು. ಭಟ್ಟೀಸೆರೆಯೋ ಏನು?"

"ನ....ನ....ನಹಿ ಸಾಬಾ. ಮ....ಮ....ಮಶೀರಾ ಸಾಬ್!"

"ಹಾಂ, ಏನಂದಿ? ಮ ಶೀ ರಾ? ನಿನಗೆಲ್ಲಿ ಸಿಕ್ಕಿತು? ಯಾರು ಕೊಟ್ಟರು?"

ಗೌಸೂ ಎಲ್ಲವನ್ನೂ ಹೇಳಿದನಾದರೂ ಬಸಲಿಂಗನ ಹೆಸರನ್ನು ಮಾತ್ರ ಹೇಳದೆ ತನ್ನ ಸ್ನೇಹಿತನೊಬ್ಬ ಕೊಟ್ಟನೆಂದಿಷ್ಟೆ ಹೇಳಿದ. ಜಗದಂಬೆಯವರ ಬಾಯಲ್ಲಿ ನೀರೂರಲು ತಡವಾಗಲಿಲ್ಲ.

"ನನಗೊಂದು ಬಾಟ್ಲಿ ತಂದುಕೊಟ್ಟರೆ ಮಾತ್ರ ನಿನ್ನ ಮಾಫ್ ಮಾಡಿ ಬಿಡ್ತೀನಿ."

"ಅವ ಹಾಂಗೆಲ್ಲ ಕೊಡೂದಿಲ್ಲ ಸಾಬ್, ನೀವೇ ಸ್ವತಾ ಬಂದರೆ ಸಿಗಬಹುದು."

"ಎಲ್ಲಿದೆ ಅವರ ಮನೆ?"

"ಇಲ್ಲೇ ಪ್ಯಾಟೆಯ ಹತ್ತರ ಐತಿ ಸಾಹೇಬ್."

"ಮತ್ತೇನು ಮಾಡುವುದು? ನಡೆ ಹಾಗಾದರೆ."

ಊಟವನ್ನು ಮರೆತು ಜಗದಂಬೆಯವರು ವೇಷ ಬದಲಿಸಿದರು.

ಪ್ಯಾಂಟ್ ತೆಗೆದುಹಾಕಿ ದೋತರ ಉಟ್ಟುಕೊಂಡರು, ತಲೆಗೊಂದು ಮಫ್ಲರ್ ಸುತ್ತಿದರು.

ಗೌಸೂ ಮುಂದೆ ಹೊರಟ. ಸಾಹೇಬರು ಅವನ ಹಿಂದೆ ಹೊರಟರು.

ಅವರಿಬ್ಬರನ್ನು ಹಿಂಬಾಲಿಸಿಕೊಂಡು ಹೊರಟ ಬಸಲಿಂಗ.

ಮನೆ ಸಮೀಪಿಸುತ್ತಲೂ ಬಸಲಿಂಗ ಅತ್ತಿತ್ತ ಹಾಯ್ದು ಮನೆಯೆದುರಿಗೆ ಪ್ರತ್ಯಕ್ಷನಾಗಿ,

"ಯಾರು? ಸಾಹೇಬರೆ? ಬರ್‍ರಿ, ಬರ್‍ರಿ, ಒಳಗಾದರೂ ಬರ್‍ರಿ," ಎಂದು ಸ್ವಾಗತ ನೀಡಿದ.

ಏನು ಹೇಳಬೇಕೆಂಬುದೇ ತಿಳಿಯದೆ ಪ್ರತಿಮೆಯಂತೆ ನಿಂತುಕೊಂಡಿದ್ದರು ಸಾಹೇಬರು. ಅದೇ ವೇಳೆಗೆ ಹೊರಗೆ ಬರುತ್ತಿದ್ದ ಚೆನ್ನಿ ಬಾಗಿಲಿನೆದುರಿಗಿದ್ದ ವಿದ್ಯುದ್ದೀಪದ ಗುಂಡಿಯನ್ನೊತ್ತಿದಳು. ಝುಗ್ಗನೆ ಬೆಳಕು ಸುರಿದು ಜಗದಂಬೆ ಯವರ ಮುಖವನ್ನು ಬೆಳಗಿಸಿತು.

ಅವರು ಬಸಲಿಂಗನ ಮನೆಯಲ್ಲಿ ಅಡಿಯಿರಿಸಿದಾಗ ರಾತ್ರಿ ಹತ್ತು ಗಂಟೆಯ ಸಮಯ. ಚೆನ್ನಿ ಅವರನ್ನು ನೇರವಾಗಿ ತನ್ನ ಖಾಸಾಕೊಟಡಿಗೇ ಕರೆದೊಯ್ದಳು. ಬಸಲಿಂಗ ಗೌಸುವನ್ನು ಕಳಿಸಿಕೊಟ್ಟು ಹೊರಬಾಗಿಲು ಇಕ್ಕಿಕೊಂಡು ಬಂದ.

ಬಸಲಿಂಗ ಮೊದಲೇ ಸೂಚಿಸಿದ ಮೇರೆಗೆ ಚೆನ್ನಿ ಬಟ್ಟೆ ಬದಲಿಸಿ ನಟಿಯಂತೆ ವೇಷಭೂಷಣ ಮಾಡಿಕೊಂಡಿದ್ದಳು. ಜಗದಂಬೆಯವರನ್ನು ತನ್ನ ಕೊಟಡಿಯಲ್ಲಿ ಕೂಡ್ರಿಸಿ ಹೊರಗೆ ಹೋಗಿ ಎಲ್ಲ ದೀಪಗಳನ್ನು ಆರಿಸಿ, ಎಡಗೈಯಲ್ಲಿ ಮಶೀರಾ ಸೀಸೆಯನ್ನೂ ಬಲಗೈಯಲ್ಲಿ ಗ್ಲಾಸನ್ನೂ ಹಿಡಿದು ಮತ್ತೆ ಕೊಟಡಿಗೆ ಬಂದು ಅವುಗಳನ್ನು ಮೇಜಿನ ಮೇಲಿಟ್ಟು ಸಾಹೇಬರಿಗೆ ನಮಸ್ಕಾರ ಮಾಡಿದಳು. ತಬ್ಬಿಬ್ಬಾಗಿ ಅವಳನ್ನೇ ದಿಟ್ಟಿಸುತ್ತಿದ್ದ ಸಾಹೇಬರು ಪ್ರತಿ ನಮಸ್ಕಾರ ಹೇಳಿದರು. ಅವರ ಸ್ಥಿತಿಯನ್ನು ಗುರುತಿಸಿ ಚೆನ್ನಿಗೆ ನಗುವುಕ್ಕಿ ಬಂದಿದ್ದಿತಾದರೂ ಅದನ್ನು ತಡೆದುಕೊಂಡು, ಮುಖದಲ್ಲಿ ಮಂದಹಾಸ ತುಳುಕಿಸುತ್ತಾ ಕೊರಳನ್ನು ವಕ್ರವಾಗಿ ಬಾಗಿಸಿ ಜಗದಂಬೆಯವರ ಕಡೆಗೆ ದೃಷ್ಟಿಯೆಸೆದಳು. ಜಗದಂಬೆಯವರ ಎದೆ ಝುಲ್ಲೆಂದಿತು. ತಮ್ಮ ಸ್ಥಾನಮಾನ, ಗೌರವ....ಈ ಹೆಣ್ಣು....ಮಶೀರಾ....ಅವರ ದೇಹ ಕಂಪಿಸುತ್ತಿತ್ತು. ಅವರು

ಮನಸ್ಸು ಮಾಡಿದ್ದಲ್ಲಿ ಚೆನ್ನಿಯನ್ನೂ ಬಸಲಿಂಗನನ್ನೂ ಪೋಲೀಸರ ವಶಕ್ಕೊಪ್ಪಿಸ ಬಹುದಾಗಿತ್ತು. ಆದರೆ, ಅಪರಾಧವೆಸಗಲು ಬಂದು ಸಿಕ್ಕಿಬಿದ್ದಿದ್ದ ಅಪರಾಧಿ ಯಾಗಿದ್ದರಲ್ಲವೆ ಅವರು?

ಗ್ಲಾಸಿಗೆ ಮದ್ಯವನ್ನು ಬಾಗಿಸುತ್ತಾ ಚೆನ್ನಿಯೆಂದಳು:

"ನೀವೇನೂ ಸಂಕೋಚ ಮಾಡಿಕೋಬ್ಯಾಡ್ರಿ ಸಾಹೇಬರೆ. ಇದೂ ನಿಮ್ಮದೇ ಮನೆ ಅಂತ ತಿಳುಕೊಳ್ಳಿರಿ."

ತಮ್ಮದೇ ಮನೆ? ಇವಳೂ ತಮ್ಮ ಹೆಣ್ಣು?

ಜಗದಂಬೆಯವರು ಮೂಕಬೊಂಬೆಯಂತೆ ಕುಳಿತಿದ್ದರು.

ಚೆನ್ನಿ ಮತ್ತೆ ಹೇಳಿದಳು:

"ನಾವೇನೂ ಮಶೀರಾದ ಅಂಗಡಿ ಇಟ್ಟಿಲ್ಲ ಸಾಹೇಬರೆ. ನಮ್ಮವರಿಗೆ ಸ್ವಲ್ಪ ಕುಡಿತದ ಚಟ, ಮೊದಲಿನಿಂದ. ನಾನೆಷ್ಟು ಹೇಳಿದರೂ ಬಿಡುವದಿಲ್ಲ ಅವರು. ಎಲ್ಲಿಂದಲೋ ತಂದು ಇಟ್ಟಿದ್ದಾರೆ. ಇವತ್ತು ನಿಮ್ಮ ಗೌಸೂ ಬಂದು ತನಗೂ ಒಂದಿಷ್ಟು ಕೊಡಬೇಕಂತ ಕಾಡಿಸಿದ. ಜೀವ ತಡೆಯದೆ ಕೊಟ್ಟುಬಿಟ್ಟೆವು. ಈಗಿನಕಾಲ ಬಹಳ ನಾಜೂಕು ಸಾಹೇಬರೆ. ನಿಮ್ಮಂಥ ದೊಡ್ಡವರಿಗೂ ಕುಡಿತದ ಚಟ. ನೀವೀಗ ಕುಡೀಲಿಕ್ಕೂ ಬರುವದಿಲ್ಲ. ಜನರಿಗೆ ಗೊತ್ತಾದರೆ ಮಾನ ಹೋಗುತ್ತೈತಿ. ನಮ್ಮವರು ಕುಡಿಯೂದು ಗೌಸೂಗೆ ಗೊತ್ತೈತಿ. ಅವ ಬೇಡಿ ದಾಗೆಲ್ಲ ಕೊಡದಿದ್ದರೆ ಪೋಲೀಸರಿಗೆ ಹೇಳಿ ನಮ್ಮನ್ನ ಹಿಡಿಸಿಯಾನು ಅಂತ ಅವಗೂ ಕೊಡುತೀವಿ. ಇಲ್ಲಿ ಯಾರೂ ಬರೂದಿಲ್ಲ. ಇಲ್ಲಿ ನಡೆಯೂದು ಯಾರಿಗೂ ಗೊತ್ತಾಗೂದಿಲ್ಲ. ನೀವೇನೂ ಚಿಂತೆಮಾಡಬ್ಯಾಡಿರಿ. ಯಾವಾಗ ಬೇಕಾದಾಗ ಬಂದು ಕುಡಿದುಹೋಗಬಹುದು. ಮೊದಲೇ ಗೌಸೂನಿಂದ ಹೇಳಿ ಕಳಿಸಿದರೆ ಊಟದ ವ್ಯವಸ್ಥೆ ಮಾಡಲಿಕ್ಕೂ ಬಂದೀತು," ಎಂದು ಹೇಳಿ ಗ್ಲಾಸು ಗಳಿಗೆ ಮದ್ಯ ತುಂಬಿ ಅದಕ್ಕೆ ಸೋಡಾನೀರು ಸೇರಿಸಿ ಅಣಿಗೊಳಿಸಿ, ಬಾಯಿ ರುಚಿಗೆ ಏನನ್ನಾದರೂ ತರುವುದಾಗಿ ಹೇಳಿ ಹೋದಳು.

ಜಗದಂಬೆಯವರು ಚಿತ್ರಸ್ಥ ಮೂರ್ತಿಯಂತೆ ನಿಶ್ಚಲವಾಗಿ ಕುಳಿತಿದ್ದರು. ಆಗ ಸೆರೆ ಬೇಡವೆಂದರೂ ನಡೆಯುವಂತಿರಲಿಲ್ಲ. ಅದರ ಮೇಲಿನ ಆಸೆಯಿಂದ ಅಲ್ಲಿಯವರೆಗೆ ಬಂದವರು ಹಾಗೆಯೇ ತಿರುಗಿ ಹೋಗುವಂತೆಯೂ ಇರಲಿಲ್ಲ.

ಜಗದಂಬೆಯವರು ತಮ್ಮಷ್ಟಕ್ಕೆ ತಾವೇ ಯೋಚಿಸಿದರು: ಈ ಮನೆಯ

ಅಚ್ಚುಕಟ್ಟುತನವನ್ನೂ ಸ್ವಚ್ಛತೆಯನ್ನೂ ನೋಡಿದರೆ ಇವರು ಒಳ್ಳೆಯವರೆಂದೇ ಅನಿಸುತ್ತದೆ. ಏನೋ ಕುಡಿತದ ವ್ಯಸನವಿರಬೇಕು ಅಷ್ಟೆ. ಎಂಥೆಂಥ ಆಫೀಸರುಗಳೂ ಕುಡಿಯುವುದಿಲ್ಲ? ರಾಜಮಹಾರಾಜರು ಕುಡಿಯುವುದಿಲ್ಲ? ಸ್ವತಃ ತಾವೇ ಕುಡಿಯುವುದಿಲ್ಲವೆ? ಕುಡಿತದ ಚಟವೆಂದರೇನೇ ಅಂಥಾದ್ದು. ಇವರು ಕುಡಿಯುವುದು ಗೌಸುವಿಗೆ ಗೊತ್ತಾಗಿದ್ದುದರಿಂದ ಅವನಿಂದ ತಮಗೂ ಗೊತ್ತಾಗಬಹುದೆಂದು ಹೆದರಿಕೊಂಡಿರಲು ಸಾಕು. ತಮ್ಮ ತಪ್ಪು ಬಯಲಿಗೆ ಬರದಿರಲೆಂಬ ಉದ್ದೇಶದಿಂದಲೇ ಇವರು ಹೀಗೆ ವರ್ತಿಸುತ್ತಿರಬಹುದು. ನಿಜವಾಗಿ ಇವರು ಸಜ್ಜನರೇ ಇರಬಹುದು. ಕಾನೂನಿಗೆ ಹೆದರಿ ಈ ರೀತಿ ವ್ಯವಹರಿಸುತ್ತಿರಬಹುದು. ಮ್ಯಾಜಿಸ್ಟ್ರೇಟರಾಗಿರುವ ತಾವು ಮನೆಯವರೆಗೆ ಬಂದು ನಿಂತಾಗ ತಮ್ಮನ್ನು ಅವರು ಒಳಕ್ಕೆ ಕರೆಯುವುದೂ ಸಹಜವೇ. ತಾವು ಅವರನ್ನು ಬಂಧಿಸಲು ಬಂದವರಲ್ಲವೆಂಬುದನ್ನೂ ಅವರು ಆಗಲೇ ತಿಳಿದುಕೊಂಡಿರಲು ಸಾಕು. ಆ ಉದ್ದೇಶವಿಟ್ಟುಕೊಂಡು ತಾವು ಬಂದುದಾಗಿದ್ದರೆ ತಮ್ಮೊಡನೆ ಪೋಲೀಸರೂ ಇರುತ್ತಿದ್ದರಲ್ಲವೆ? ತಾವೂ ಕೂಡಾ ಮದ್ಯವನ್ನು ಬಯಸಿಯೇ ಬಂದಿರುವುದನ್ನು ಅವರೂ ತಿಳಿದುಕೊಂಡಿರಲು ಸಾಕು.

ಜಗದಂಬೆಯವರು ತಮ್ಮನ್ನು ತಾವೆ ಕೇಳಿಕೊಂಡರು: ಇವರು ತಮ್ಮನ್ನು ಆದರದಿಂದ ಸ್ವಾಗತಿಸಿ ಕುಡಿಯಲು ಮದ್ಯ ಕೊಟ್ಟಿದ್ದಾರೆ. ಈಗ ತಾವೇನನ್ನು ಮಾಡಬೇಕು? ಕುಡಿಯುವುದೇ ಬಿಡುವುದೇ? ಒಂದುವೇಳೆ ಕುಡಿಯದಿದ್ದರೆ ಅದರಿಂದ ಪ್ರಯೋಜನವಾದರೂ ಏನು? ಈ ಊರಿಗೆ ಬಂದಂದಿನಿಂದ ತಮಗೆ ಯಾರೊಡನೆಯೂ ಸ್ನೇಹ ಬೆಳೆದಿಲ್ಲ, ಮದ್ಯವೂ ಸಿಕ್ಕಿಲ್ಲ. ತಾವು ಈ ಮೊದಲು ಇದ್ದ ನಗರದ ಪ್ರಾಸಿಕ್ಯೂಟರ್ ಎಷ್ಟು ಒಳ್ಳೆಯವರು! ದಿನವೂ ತಮ್ಮನ್ನು ಮನೆಗೆ ಕರೆದೊಯ್ದು ಮಶೀರಾವನ್ನಾಗಲಿ ಇನ್ನಾವುದೊಂದು ಮದ್ಯವನ್ನಾಗಲಿ ಕೊಟ್ಟು ಕಳಿಸುತ್ತಿದ್ದ. ಇಲ್ಲಿಯ ಪ್ರಾಸಿಕ್ಯೂಟರ್ ವೀರಭದ್ರಯ್ಯನವರಿಗೂ ಮದ್ಯದ ವ್ಯಸನವಿದೆಯೆಂದು ಒಮ್ಮೆ ಹೇಳಿದ್ದ ಗೌಸೂ. ಆ ಮಾತು ಸತ್ಯವಾದುದೂ ಆಗಿರಲು ಸಾಕು. ಈ ಪ್ರಾಸಿಕ್ಯೂಟರುಗಳೆಲ್ಲ ಹೆಸರಾಂತ ಕುಡುಕರೆಂಬುದನ್ನು ತಾವರಿಯರೇ? ಈ ವೀರಭದ್ರಯ್ಯ ಮಾತ್ರ ಬಹಳ ಘಾಟಿಯಿರುವಂತೆ ತೋರುತ್ತದೆ. ಒಂದು ದಿನವೂ ತಮ್ಮ ಹತ್ತಿರ ಸುಳಿದಿಲ್ಲ. ಅಥವಾ,

ಅವರಿಗೂ ತಮ್ಮ ಬಗೆಗೆ ಭಯವಿರಬಹುದು, ಹೋಗಲಿ. ಇಂಥ ಸಭ್ಯರ ಮನೆಯಲ್ಲಿ ಮಶೀರಾ ಸಿಗುವಾಗ ಪ್ರಾಸಿಕ್ಯೂಟರ ಹಂಗಾದರೂ ಯಾಕೆ?

ಜಗದಂಬೆಯವರು ಹಾಗೆ ಯೋಚಿಸುತ್ತಿದ್ದಂತೆಯೆ, ಪ್ಲೇಟುಗಳಲ್ಲಿ ಊಟದ ಸಾಹಿತ್ಯ ತುಂಬಿಕೊಂಡು ಚೆನ್ನಿ ಬಂದಳು.

"ಏನ್ರೀ, ಹಾಂಗೇ ಕೂತೀರಲ್ಲ! ಸಾಹೇಬರಿಗೆ ನಮಸ್ಕಾರ ಅನ್ನಬಾರದೇ? ಎತ್ತಿರಿ ಗ್ಲಾಸುಗಳನ್ನ!" ಎಂದು ಬಸಲಿಂಗನನ್ನು ಕುರಿತು ನುಡಿದು ತಾನೇ ಒಂದು ಗ್ಲಾಸನ್ನೆತ್ತಿ ಜಗದಂಬೆಯವರ ಮುಂದೆ ಹಿಡಿದಳು.

ಜಗದಂಬೆಯವರ ಮೈಮೇಲಿನ ಎಚ್ಚರವೇ ಮಾಯವಾದಂತಾಯಿತು.

"ಎಂಥ ದಿಟ್ಟೆ ಈ ಹೆಂಗಸು! ಅಪರಿಚಿತನಾದ ತನ್ನಂಥ ಅಧಿಕಾರಿಯ ಸಂಗಡ ಎಂಥಾ ಸಲಿಗೆ ತೋರಿಸ್ತಾಳಲ್ಲ!" ಎಂದು ಅವರು ವಿಸ್ಮಯಪಟ್ಟುಕೊಳ್ಳುತ್ತಿದ್ದ ಹಾಗೇ ಚೆನ್ನಿ ಅವರನ್ನು ತನ್ನ ಕಣ್ಣಬಾಣಗಳಿಂದಿರಿಯುತ್ತ,

"ತಗೊಳ್ರಿ ಸಾಹೇಬರೆ. ದೇವಿಯ ಪೂಜಾ ಸುರುವಾಗಲಿ!" ಎಂದು ಹೇಳಿ ಮೋಹಕವಾಗಿ ನಕ್ಕಳು.

ಅವರಿಗರಿಯದಂತೆಯೇ ಜಗದಂಬೆಯವರ ಕೈ ಗ್ಲಾಸನ್ನು ಹಿಡಿದುಕೊಂಡಿತು. ಬಸಲಿಂಗನ ಮತ್ತು ಚೆನ್ನಿಯ ಗ್ಲಾಸುಗಳು ಅವರ ಗ್ಲಾಸನ್ನು ಮುಟ್ಟಿದುವು.

"ಕ್ಲಿಂಕ್," ಎಂದು ಧ್ವನಿಮಾಡಿದುವು ಗ್ಲಾಸುಗಳು –

"ಜೈ ಹಿಂದ್," ಎಂದ ಬಸಲಿಂಗ.

"ಜೈ ಹಿಂದ್," ಎಂದಳು ಚೆನ್ನಿ.

ನಿರ್ವಾಹವಿಲ್ಲದೆ ಜಗದಂಬೆಯವರೂ "ಜೈ ಹಿಂದ್," ಎನ್ನಬೇಕಾಯಿತು. ಅದರೊಡನೆಯೇ ಮಶೀರಾ ಅವರ ಹೊಟ್ಟೆ ಸೇರಿತು.

ಒಂದರ ಹಿಂದೊಂದರಂತೆ ಗ್ಲಾಸುಗಳು ಬರಿದಾದುವು. ವಿದ್ಯುದ್ದೀಪದ ಪ್ರಖರ ಬೆಳಕನ್ನೆದುರಿಸಲಾರದೆ ಜಗದಂಬೆಯವರ ಕಣ್ಣು ಜಡವಾದುವು. ಒಂದು ಅವಯುವದ ಶಕ್ತಿ ಕುಗ್ಗಿದಂತೆ ಇನ್ನೊಂದಕ್ಕೆ ಶಕ್ತಿ ಬರುವುದು ವಾಡಿಕೆಯ ಮಾತು. ದೃಷ್ಟಿ ಮಂದವಾಗುತ್ತ ಬಂದಂತೆ ಜಗದಂಬೆಯವರ ನಾಲಗೆಗೆ ಸ್ಫೂರ್ತಿ ಬರತೊಡಗಿತು.

"ಮತ್ತೆ ಯಾರ್ಯಾರು ಕುಡೀತಾರೆ ಈ ಊರಲ್ಲಿ?" ಎಂದು ಕೇಳಿದರು.

"ಊರಿಗೆ ಊರೇ ಕುಡೀತೈತಿ," ಎಂದಳು ಚೆನ್ನಿ.

"ವ್ಹೆರಿ ಗುಡ್! ಪ್ರೊಹಿಬಿಶನ್ ಬಹಳ ಚಲೋ ರೀತಿಯಿಂದ ನಡೀತಾ ಇದೆ ಹಾಗಾದರೆ! ಪೋಲೀಸರೇನು ಮಲಗಿ ನಿದ್ದೆ ಮಾಡುತ್ತಾರೇನು?"

"ಅವರ್ಯಾಕೆ ನಿದ್ದೆ ಮಾಡಿಯಾರು? ಅವರೂ ಕುಡಿದು ಮಜಾ ಮಾಡುತಾರೆ."

"ಫೌಜದಾರರೂ ಕುಡೀತಾರೆ?"

"ಈ ಊರಾಗ ಅವರನ್ನ ಮೀರಿಸುವ ಕುಡುಕರೇ ಇಲ್ಲ," ಎಂದ ಬಸಲಿಂಗ.

"ಪೋಲೀಸ್ ಪ್ರಾಸಿಕ್ಯೂಟರು?"

"ಫೌಜದಾರರ ನಂತರ ಎರಡನೇ ನಂಬರ್ ಅವರದೇ."

"ಎಲಾ ಕಳ್ಳ ಬಡ್ಡೀಮಕ್ಕಳೇ! ನಮ್ಮಿಂದ ಎಷ್ಟೋ ಕೆಲಸ ಮಾಡಿಸಿ ಕೊಂಡರೂ ಒಂದಿನ ಕೂಡಾ ಸೆರೆಯ ಮಾತೆತ್ತಿಲ್ಲವಲ್ಲ! ಇರಲಿರಲಿ. ಅವರನ್ನ ನೋಡಿಕೊಳ್ತೇನಿ."

"ಅವರಿಗೆಲ್ಲಾ ಚಲೋ ಬುದ್ಧಿ ಕಲಿಸಬೇಕ್ರೀ ಸಾಹೇಬರೆ!" ಎಂದಳು ಚೆನ್ನಿ.

"ಚಲೋ ಚಲೋ ಬುದ್ಧಿ ಕಲಿಸೂಣು. ಇಂದಿನಿಂದ ನೀನೇ ನನ್ನ ಪ್ರೈವೇಟ್ ಸೆಕ್ರೆಟರಿ ಬಸಲಿಂಗಪ್ಪ!"

"ವಾಹವ್ವಾ!" ಎಂದಳು ಚೆನ್ನಿ. "ಇವ ಸೆಕ್ರೆಟರಿಯಾದರೆ ನಾನೋ?"

"ನೀನು ನನ್ನ ಡಾರ್ಲಿಂಗ್!" ಎಂದು ತೊದಲುತ್ತಾ ಜಗದಂಬೆಯವರು ಅವಳನ್ನು ಹಿಡಿದುಕೊಳ್ಳಲೆಂದು ಮೇಲಕ್ಕೆದ್ದರು.

"ಈಗಲೇ ಬ್ಯಾಡ ಸಾಹೇಬರೆ. ಇನ್ನೊಂದು ಬಾಟ್ಲಿ ಮುಗಿಸೂಣು." ಎಂದಳು ಚೆನ್ನಿ.

ಮತ್ತೊಂದು ಸೀಸೆ ಬರಿಯದಾಯಿತು.

"ನಮ್ಮ ವಕೀಲರ ಖಟ್ಲಿಗಳಲ್ಲಿ ನೀವು ಸಹಾಯಮಾಡಬೇಕ್ರೀ ಸಾಹೇಬರೇ!" ಎಂದು ಬಸಲಿಂಗ ಕೇಳಿಕೊಂಡ.

"ಬಹೂತ್ ಅಚ್ಛಾ!" ಎಂದರು ಸಾಹೇಬರು.

ಹನ್ನೆರಡು ಗಂಟೆಯವರೆಗೂ ಹಾಗೇ ಕುಡಿತ ಸಾಗಿತ್ತು. ಕುರ್ಚಿಯಲ್ಲಿ ತೂರಾಡುತ್ತಿದ್ದ ಹಾಗೇ ಜಗದಂಬೆಯವರು ತೊದಲು ತೊದಲು ಆಡುತ್ತಿದ್ದರು. ಅವರನ್ನು ಹಿಡಿದು ಸರಿಯಾಗಿ ಕೂಡ್ರಿಸುವ ನೆಪದಿಂದ ಚೆನ್ನಿ ಆಗಾಗ ಅವರ ಅಂಗಸ್ಪರ್ಶ ಮಾಡುತ್ತಿದ್ದಳು. ಅವಳ ಕೈ ತಾಕಿದಾಗಲೆಲ್ಲ ಜಗದಂಬೆಯವರು ಬೆಚ್ಚಿಬಿದ್ದು ಕಣ್ಣುಗಳನ್ನರಳಿಸುತ್ತಿದ್ದರು.

"ನಾನಿನ್ನು ಮನೆಗೆ ಹೊರಡುತ್ತೀನಿ ಬಸಲಿಂಗಪ್ಪಾ."

"ಛೆ. ಛೆ. ಇಂಥಾ ರಾತ್ರಿಯಲ್ಲಿ ಏನು ಹೋಗ್ತೀರಿ ಮನೆಗೆ? ಇದೇನು ನಿಮ್ಮ ಮನೆ ಅಲ್ಲವೇನು? ಇಲ್ಲೇ ಒಂದೆರಡು ತಾಸು ನಿದ್ದೆ ಮಾಡಿರಿ. ಮುಂಜಾನೆ ಐದು ಗಂಟೆಗೆ ಎಬ್ಬಿಸ್ತೀನಿ. ಮಾರ್ನಿಂಗ್ ವಾಕ್ ಹೋಗಿಬಂದವ ರಂತೆ ಮನೆ ಸೇರಿಕೊಳ್ಳಬಹುದು," ಎಂದ ಬಸಲಿಂಗ.

ಜಗದಂಬೆಯವರಿಗೆ ಬೇಕಿದ್ದುದೂ ಅಷ್ಟೇ. ಮಲಗಿಕೊಳ್ಳುವುದಕ್ಕೆಂದು ಅವರು ಕುರ್ಚಿಯಿಂದೆದ್ದರು. ಮುಂದಕ್ಕೆ ಹೆಜ್ಜೆಯಿಡಲೂ ಸಾಧ್ಯವಾಗದೆ ನೆಲಕ್ಕೆ ಕುಸಿದುಬೀಳುವುದರಲ್ಲಿದ್ದಾಗ ಚೆನ್ನಿಯೇ ಮುಂದಾಗಿ ಮಗುವನ್ನೆತ್ತಿ ಹಿಡಿಯು ವಂತೆ ಅವರನ್ನೆತ್ತಿ ಹಿಡಿದು ತನ್ನ ಮಲಗುವ ಕೊಟಡಿಗೆ ಸಾಗಿಸಿದಳು. ಬಸಲಿಂಗ ಹಿಂದೆ ಹಿಂದೆ ಹೋದ. ಜಗದಂಬೆಯವರನ್ನು ಮಂಚದ ಮೇಲೆ ಮಲಗಿಸಿ ಚೆನ್ನಿ ತಾನೂ ಮಂಚವನ್ನೇರುತ್ತಿದ್ದಂತೆಯೇ ವಿದ್ಯುದ್ದೀಪವನ್ನಾರಿಸಿ ಅಲ್ಲಿಂದ ಕಾಲ್ತೆಗೆದ ಬಸಲಿಂಗ.

## ಹತ್ತೊಂಭತ್ತು... ಚಂಡಾಳ ಚೌಕಡಿ

ಮಾರನೆಯ ದಿನ ಬೆಳಗಾಗುತ್ತಲೂ ಬಸಲಿಂಗ ಮೊದಲು ಕಂಡದ್ದು ವೀರಭದ್ರಯ್ಯನವರನ್ನು.

ಆತ ಅವರ ಮನೆಗೆ ಬಂದು ಮುಟ್ಟಿದಾಗ ಅವರು ಅದೇ ತಾನೆ ಎದ್ದು ಮುಖಕ್ಷೌರ ಮಾಡಿಕೊಳ್ಳುತ್ತ ಕುಳಿತಿದ್ದರು. ಅಂಥ ಅವೇಳೆಯಲ್ಲಿ ಬಂದ ಬಸಲಿಂಗನನ್ನು ಕಂಡು ಅವರಿಗೆ ಆಶ್ಚರ್ಯವೂ ಆಯಿತು, ಕೊಂಚ ಹೆದರಿಕೆಯೂ ಆಯಿತು. ತಾವು ಬಸಲಿಂಗನಲ್ಲಿಗೆ ಹೋಗಿ ಮದ್ಯ ಸೇವಿಸುತ್ತಿದ್ದ ವಿಚಾರ ಬಯಲಿಗೆ ಬಂದಿರಲಾರದಷ್ಟೆ? ಡಿ. ಎಸ್. ಪಿ.ಯವರಿಗಾಗಲಿ ಕಲೆಕ್ಟರರಿಗಾಗಲಿ ಆ ಸಂಗತಿ ತಿಳಿದಿರಲಾರದಷ್ಟೆ? ತಮ್ಮ ಕೆಲಸಕ್ಕೆ ಕಲ್ಲು ಬೀಳುವಂಥ ಪ್ರಸಂಗ ಬಂದಿರಲಿಕ್ಕಿಲ್ಲವಷ್ಟೆ?

"ನಮಸ್ಕಾರ ರಾವ್‌ಸಾಹೇಬರೆ. ಈಗ ಎದ್ದಿರಾ?" ಎಂದ ಬಸಲಿಂಗ.

ಅವನ ಹಸನ್ಮುಖವನ್ನು ನೋಡಿದಾಗ ವೀರಭದ್ರಯ್ಯನವರಿಗೆ ಕೊಂಚ ಹಾಯೆನ್ನಿಸಿತಾದರೂ ಅವರು ಅಳುಕಿನಿಂದಲೇ ಕೇಳಿದರು :

"ಬಾರಪಾ ಬಸಲಿಂಗಪ್ಪಾ, ಕೂತುಕೋ. ಏನು ಇಷ್ಟು ಬೇಗ ಬೆಳಗಾಯಿತೇ ನಿನಗೆ?"

"ಇನ್ನೇನು ಬಿಡಿರಿ. ನಾವು ಪೂರಾ ಗೆದ್ದಂತಾಯ್ತು."

"ಅಂದರೆ? ಮತ್ತಾವ ಹಕ್ಕಿ ಹಿಡಿದೆ ಮಾರಾಯಾ?"

"ಅಂಥಿಂಥಾ ಹಕ್ಕಿಯಲ್ಲ ರಾವ್‌ಸಾಹೇಬರೆ. ಗರುಡಪಕ್ಷಿಯನ್ನೇ ಹಿಡಿದೀವಿ," ಎನ್ನುತ್ತಾ ಮೀಸೆಯ ಮೇಲೆ ಕೈಯೆಳೆದ ಬಸಲಿಂಗ.

"ಯಾರನ್ನ ಹೇಳೋ. ಏನು ಕಲೆಕ್ಟರನ್ನೇ ಹಿಡಿದಿರೋ? ನಿಮಗೇನಪ್ಪಾ, ನೀವು ಗಂಡಹೆಂಡರು ಗವರ್ನರರನ್ನೇ ಬುಟ್ಟಿಗೆ ಹಾಕಿಕೊಳ್ಳುವಂಥವರು."

"ಅಷ್ಟು ದೂರ ಏನು ಹೋಗಿಲ್ಲ ವಕೀಲರೆ. ಆದರೂ ನಾವು ಹಿಡಿದದ್ದು ಸಾಧಾರಣ ಕುಳ ಏನೂ ಅಲ್ಲ – ಸಾಕ್ಷಾತ್ ವ್ಯಾಜಿಸ್ಟ್ರೇಟರನ್ನೇ...."

"ಹಾ? ಜಗದಂಬೆಯವರನ್ನೇ?"

"ಹೌದ್ರೀ."

"ಎಲಾ! ಅವರು ಹ್ಯಾಗೆ ಸಿಕ್ಕರೋ ನಿಮ್ಮ ಕೈಗೆ? ಎಷ್ಟು ರಿಜರ್ವ್ ಇದ್ದಾರಲ್ಲ! ಯಾರನ್ನೂ ನೆಟ್ಟಗೆ ಮಾತಾಡಿಸೂದಿಲ್ಲ ಕೂಡಾ!"

"ಅಂಥವರನ್ನು ನಮ್ಮ ಗೋವಾದೇವಿ ಮಾತಾಡಿಸುತಾಳ ರಾವ್ ಸಾಹೇಬರೆ," ಎಂದು ಆರಂಭಿಸಿ ರಾತ್ರೆ ನಡೆದುದೆಲ್ಲವನ್ನೂ ರಸವತ್ತಾಗಿ ಬಣ್ಣಿಸಿ ಹೇಳಿದ ಬಸಲಿಂಗ.

"ಇನ್ನು ಮ್ಯಾಲ ನಿಮ್ಮ ಕೆಲಸ ಕೂಡಾ ಹಗುರಾಗುತ್ತೈತಿ ವಕೀಲರೆ. ನಮ್ಮ ವಕೀಲರೂ ನೀವೂ ಮಾತಾಡಿಕೊಂಡೇ ಎಲ್ಲಾ ಖಟ್ಲೆ ನಡೆಸಬಹುದು. ನೀವು ಬೇಕನ್ನುವ ತೀರ್ಪನ್ನ ನಾ ದೊರಕಿಸಿಕೊಡ್ತೀನಿ ಮ್ಯಾಜಿಸ್ಟ್ರೇಟರಿಂದ. ಬಂದ ಲಾಭದಲ್ಲಿ ನನಗೂ ಸ್ವಲ್ಪ ಕೊಡೂದು ಮಾತ್ರ ಮರಿಯಬ್ಯಾಡ್ರಿ."

"ಛೆ. ಛೆ. ನಿನ್ನ ಮರೆತರೆ ನಡದೀತೇನಪ್ಪಾ? ನೀನೇ ಇನ್ನು ಮ್ಯಾಲ ನಮ್ಮೆಲ್ಲರ ಸೂತ್ರಧಾರ. ಬಹಳ ಚಲೋ ಕೆಲಸ ಮಾಡಿದಿರಿ ನೀನೂ ಚೆನ್ನಿ ಕೂಡಿ."

ಬಸಲಿಂಗ ಅಲ್ಲಿಂದ ಹೊರಟವನು ತನ್ನ ಐವರು ವಕೀಲರ ಬಳಿ ಬಂದು ನಡೆದ ಸಂಗತಿಯನ್ನು ತಿಳಿಸಿದ. ಅವರಿಗಾದ ಆನಂದ ಅವರ್ಣನೀಯವಾದುದು. ಬಸಲಿಂಗ ಮತ್ತು ಚೆನ್ನಿಯರು ತಮ್ಮ ಪಾಲಿನ ಭಾಗ್ಯದೇವತೆಗಳೆಂದೇ ಅವರು ಭಾವಿಸಿದರು. ಬಸಲಿಂಗನ ಸಹಾಯದಿಂದಲೇ ಅವರಿಗೆ ಖಟ್ಲೆಗಳು ದೊರಕುತ್ತಿದ್ದುದು. ಅವನ ಸಹಾಯದಿಂದಲೇ ಇನ್ನು ಮುಂದೆ ಎಲ್ಲ ಖಟ್ಲೆಗಳಲ್ಲೂ ಜಯ ಸಿಕ್ಕುವುದು. ಸರಿ. ಇನ್ನೇನು ಬೇಕು?

ವಕೀಲರನ್ನು ಕಂಡ ಬಳಿಕ ಬಸಲಿಂಗ ಜಗದಂಬೆಯವರ ಮನೆಗೆ ಬಂದ. ಅವರು ಊಟ ಮುಗಿಸಿ ಕೋರ್ಟಿಗೆ ಹೊರಡಲು ಅಣಿಯಾಗುತ್ತಿದ್ದರು.

"ನಮಸ್ಕಾರ ಸಾಹೇಬರೆ," ಎಂದ ಬಸಲಿಂಗ.

ಅವರು ಶುಷ್ಕವಾದ ನಗು ನಕ್ಕರು. ಮುಖದಲ್ಲಿ ಅಸಮಾಧಾನ ಛಾಯೆ

ಕಾಣುತ್ತಿತ್ತು. ರಾತ್ರೆ ನಡೆದ ಘಟನೆಗಳನ್ನು ನೆನೆದುಕೊಂಡು ಅವರು ತಮ್ಮನ್ನು ತಾವೇ ಮೂಕವಾಗಿ ಹಳಿದುಕೊಳ್ಳುತ್ತಿದ್ದ ಹಾಗಿತ್ತು.

"ಇವತ್ತು ಸಂಜೆ ನಮ್ಮಲ್ಲಿಗೇ ಊಟಕ್ಕೆ ಬರಬೇಕಂತ ಯಜಮಾನಿ ಹೇಳಿದಾಳ ಸಾಹೇಬರೆ."

ಯಜಮಾನಿ!

ಜಗದಂಬೆಯುವರ ಮುಖದ ಮೇಲೆ ಬೆವರು ಕಾಣಿಸಿಕೊಂಡಿತು. ಯಜಮಾನಿ! ಯಾರ ಯಜಮಾನಿ? ಬಸಲಿಂಗನ ಯಜಮಾನಿಯಂತೂ ಖಂಡಿತ ಅಲ್ಲ. ಹಾಗಾದರೆ ಯಾರ ಯಜಮಾನಿ ಆಕೆ? ರಾತ್ರೆ ಅವಳ ಮಗ್ಗುಲಲ್ಲಿ....ತಾವು....ಛಿ....ಛಿ....ಎಂಥ ಅಧಃಪತನ ತಮ್ಮದು! ತಾವು.... ಬಿ.ಎ.ಎಲ್‌ಎಲ್ ಬಿ. ಪದವೀಧರರು....ಸುಸಂಸ್ಕೃತರು....ದೊಡ್ಡ ಅಧಿಕಾರಿಗಳು.... ನ್ಯಾಯಮೂರ್ತಿಗಳು....ಅಪರಾಧಿಗಳಿಗೆ ಶಿಕ್ಷೆ ವಿಧಿಸುವವರು....ತಾವೂ ಕೀಳು ಜನರಂತೆ ಆ ಹೆಣ್ಣಿನ ಮಗ್ಗುಲಲ್ಲಿ....ಛಿ....ಛಿ....ತಮ್ಮಂಥ ಪ್ರತಿಷ್ಠಿತರನ್ನು ಅಡ್ಡದಾರಿಗೆಳೆಯುವುದೇ ಈ ಜನರ ವೃತ್ತಿಯಾಗಿದೆಯೊ ಏನೊ. ತಿಳಿದು ತಿಳಿದೂ ತಾವು ಇಂಥವರ ಬಲೆಗೆ ಬೀಳಬಾರದು.

"ಬರ್ತೀರಲ್ಲರೀ ಸಾಹೇಬರೇ ರಾತ್ರಿ?" ಎಂದು ಮತ್ತೆ ಕೇಳಿದ ಬಸಲಿಂಗ.

"ಬರುವದಿಲ್ಲ. ಇನ್ನೊಮ್ಮೆ ನಿಮ್ಮ ಮನೆಯಲ್ಲಿ ಕಾಲು ಹಾಕುವದಿಲ್ಲ. ಗೆಟ್ ಔಟ್ ಯೂ ಬ್ಲಡೀ," ಎಂದು ಹೇಳಬೇಕೆನಿಸಿತು ಜಗದಂಬೆಯವರಿಗೆ. ಬಾಯಿಯಿಂದ ಮಾತು ಮಾತ್ರ ಹೊರಡಲಿಲ್ಲ. ಯಾರೋ ತಮ್ಮ ನಾಲಗೆ ಯನ್ನು ಬಿಗಿಯಾಗಿ ಹಿಡಿದಿದ್ದ ಹಾಗೆ ಭಾಸವಾಯಿತು.

"ನಾನು ಹೋಗಲೇ ಸಾಹೇಬರೆ? ರಾತ್ರಿ ಕಾದಿರ್ತೀವಿ," ಎಂದು ಹೇಳಿ ಕಿಸಕಿಸ ಎಂದು ನಕ್ಕು ಮತ್ತೊಮ್ಮೆ ನಮಸ್ಕರಿಸಿ ಬಸಲಿಂಗ ಹೊರಟುಹೋದ. "ಪಾರಾದೆ!" ಎಂದು ಹೇಳಿಕೊಳ್ಳುತ್ತಾ ಟೈ ಸರಿಪಡಿಸಿಕೊಂಡರು ಜಗದಂಬೆ ಯವರು.

ಅಂದು ಕೋರ್ಟಿನಲ್ಲಿ ಯಾವ ಯಾವ ಖಟ್ಲೆಗಳು ವಿಚಾರಣೆಗೆ ಬಂದುವು, ವಕೀಲರು ಏನು ವಾದ ಮಾಡಿದರು, ತಾವು ಹೇಳಿದುದೇನು – ಯಾವುದೂ ಅವರ ನೆನಪಿನಲ್ಲುಳಿಯಲಿಲ್ಲ. ಸಾಯಂಕಾಲ ಮನೆಗೆ ಬರುತ್ತಾ ಮತ್ತೆ ಮತ್ತೆ ಹೇಳಿಕೊಂಡರು :

"ಇನ್ನು ಮೇಲೆ ಅಲ್ಲಿಗೆ ಹೋಗುವದಿಲ್ಲ. ಇನ್ನು ಹೋಗುವದಿಲ್ಲ."

ಆದರೆ ಸಂಜೆ ಕಳೆದು ಕತ್ತಲಾಗುತ್ತಲೂ ಸಹಿಸಲಸಾಧ್ಯವಾದ ದಾಹವಾಗ ತೊಡಗಿತು. ಚೆನ್ನಿಯ ಮುಖ, ಚೆನ್ನಿಯ ದೇಹ, ಚೆನ್ನಿಯ ಕೈ, ಮದ್ಯದ ಗ್ಲಾಸು ಕಣ್ಣೆದುರಿಗೆ ಕುಣಿಯತೊಡಗಿದುವು.

"ಇದೊಂದೇ ಒಂದು ದಿನ ಹೋಗಿ ಬಂದರಾಯಿತು. ಇದೇ ಕಡೆಯ ದಿನ. ಮತ್ತೆ ಅತ್ತ ಕಾಲಿಡುವದಿಲ್ಲ," ಎಂದು ಹೇಳಿಕೊಳ್ಳುತ್ತಾ ಮತ್ತೆ ವೇಷ ಬದಲಿಸಿ ಸಾಹೇಬರು ಚೆನ್ನಿಯ ಮನೆಗೆ ಹೊರಟರು.

ಹಿಂದಿನ ದಿನಕ್ಕಿಂತಲೂ ಹೆಚ್ಚಿನ ಸ್ವಾಗತ ಸತ್ಕಾರ ನಡೆದುವು. ಹೋಳಿಗೆಯ ಊಟವೂ ಆಯಿತು. ಊಟ ಮುಗಿಸಿ ಜಗದಂಬೆಯವರು ಮಲಗುವ ಕೊಟಡಿಗೆ ಬಂದಾಗ ಕೈಯಲ್ಲಿ ಗ್ಲಾಸ್ ಹಿಡಿದು ನಿಂತುಕೊಂಡಿದ್ದ ಹೊಸ ಹೆಂಗಸೊಬ್ಬಳನ್ನು ಕಂಡರು.

"ಇವತ್ತು ಇವರೇ ನಿಮ್ಮ ಸೇವಾ ಮಾಡುತಾರೆ," ಎಂದು ಹೇಳಿ ಬಸಲಿಂಗ ಅಲ್ಲಿಂದ ಹೊರಟುಹೋದ.

"ನೀವು....ನೀವು....ನಿಮ್ಮ ಹೆಸರು?" ಎಂದು ಜಗದಂಬೆಯವರು ತಬ್ಬಿಬ್ಬಾಗಿ ಕೇಳಿದರು.

"ಹೆಸರು ತಗೊಂಡೇನು ಮಾಡ್ತೀರಿ? ಮೊದಲು ಈ ಮಶೀರಾ ಕುಡೀರಿ," ಎನ್ನುತ್ತಾ ಅವರ ಕೈಹಿಡಿದು ಮಂಚದತ್ತ ಸಾಗಿಸಿದಳು ಆ ಹೆಂಗಸು.

ಅದೇ ಕಡೆಯ ದಿನವೆಂದುಕೊಂಡಿದ್ದರು ಜಗದಂಬೆಯವರು.

ಅದೇ ಕಡೆಯ ದಿನವಾಗಲಿಲ್ಲ.

ಅವರು ದಿನದಿನವೂ ತಪ್ಪದೆ ಅಲ್ಲಿಗೆ ಬರುವ ಹಾಗೆ ಎಲ್ಲ ಉಪಾಯ ಗಳನ್ನೂ ಯೋಚಿಸಿದ್ದಳು ಚೆನ್ನಿ.

ದಿನವೂ ಒಂದು ಹೊಸ ಹೆಣ್ಣು.

ಕುಡಿಯಲು ಸಾಕಷ್ಟು ಮಶೀರಾ.

ಎಲ್ಲವೂ ಉಚಿತ. ಪೂರಾ ಉಚಿತ.

ಅಂಥ ಲಾಭವನ್ನು ಜಗದಂಬೆಯವರಾದರೂ ಯಾಕೆ ಕಳೆದು ಕೊಂಡಾರು?

ಒಂದೇ ಒಂದು ವಾರದೊಳಗಾಗಿ ಅವರು ಚೆನ್ನಿಯ ಪರಮಭಕ್ತರಾದರು. ಅವಳ ಹೇಳಿಕೆಯಂತೆಯೆ ಅವರ ಕೋರ್ಟಿನಲ್ಲಿ ಖಟ್ಲೆಗಳ ನಿರ್ಣಯವಾಗ ತೊಡಗಿತು.

ವೀರಭದ್ರಯ್ಯನವರ ಜೇಬು ತುಂಬುತ್ತ ಬಂತು, ಬಸಲಿಂಗನ ವಕೀಲರ ಜೇಬು ತುಂಬುತ್ತ ಬಂತು.

ಅವರೆಲ್ಲರ ಜೇಬೂ ಬರಿಯವಾಗಿ ಬಸಲಿಂಗನ ಜೇಬು ತುಂಬುತ್ತ ಬಂತು.

ಚೆನ್ನಿಯ ಟ್ರಂಕು ತುಂಬುತ್ತ ಬಂತು.

ಬಸಲಿಂಗನ ಹೊಲಮನೆಗಳನ್ನು ಎಂದೋ ಪಡೆದುದಾಗಿತ್ತು.

ಸವದತ್ತಿಯಲ್ಲಿ ಹೊಸ ಹೊಲಗಳನ್ನು ಖರೀದಿ ಮಾಡಲು ತವಕಿಸುತ್ತಿದ್ದಳು ಚೆನ್ನಿ.

ಜಗದಂಬೆ ಮ್ಯಾಜಿಸ್ಟ್ರೇಟರಿಗೆ ಬಸಲಿಂಗನೇ ಆಪ್ತಕಾರ್ಯದರ್ಶಿಯೆಂದು ಎಲ್ಲೆಡೆಯಲ್ಲೂ ಪ್ರಚಾರವಾಯಿತು. ಅಪರಾಧಿಗಳೂ ವಕೀಲರೂ ಅವನ ಮನೆಯ ಬಾಗಿಲು ಕಾಯತೊಡಗಿದರು. ಸಾಮಾನ್ಯವಾಗಿ ಎಲ್ಲ ಖಟ್ಲೆಗಳೂ ಬಸಲಿಂಗನ ಮಾತಿನಂತೆ ಬಿಡುಗಡೆಯಾಗತೊಡಗಿದುವು.

ಈ ಗದ್ದಲದ ನಡುವೆ ಬಸಲಿಂಗ ನಗರದ ಮತ್ತು ತಾಲ್ಲೂಕಿನ ಫೌಜದಾರರನ್ನು ಮರೆತಿರಲಿಲ್ಲ. ಅವರನ್ನೂ ಆಗಾಗ ಮನೆಗೆ ಬರಮಾಡಿ ಕೊಂಡು ಮದ್ಯ ಮತ್ತು ಮಹಿಳೆಯರನ್ನರ್ಪಿಸಿ ಸಂತುಷ್ಟಗೊಳಿಸಿ ಕಳಿಸುತ್ತಿದ್ದ.

ಒಂದು ದಿನ ಚೆನ್ನಿಗೆ ಏನು ಹೊಳೆಯಿತೊ ಏನೊ. ಬಸಲಿಂಗನನ್ನು ಕರೆದು ಹೇಳಿದಳು :

“ನಮ್ಮ ಶಕ್ತಿ ಎಷ್ಟು ಅನ್ನೂದು ಒಮ್ಮೆ ಎಲ್ಲರಿಗೂ ಗೊತ್ತಾಗಬೇಕು ಬಸಲಿಂಗಾ. ನಮ್ಮ ಗಿರಾಕಿಗಳನ್ನೆಲ್ಲಾ ಒಂದೇ ಸಲ ಕೂಡಿಸಿ ಎಲ್ಲರೂ ಭೆಟ್ಟಿ ಯಾಗುವಂತೆ ಮಾಡೂಣು.”

“ಹೌದೌದು. ಚಲೋ ವಿಚಾರ. ಫೌಜದಾರರನ್ನ ಮ್ಯಾಜಿಸ್ಟ್ರೇಟರೂ ಮ್ಯಾಜಿಸ್ಟ್ರೇಟರನ್ನ ಪ್ರಾಸಿಕ್ಯೂಟರೂ ಇಲ್ಲಿ ಭೆಟ್ಟಿಯಾಗುವಂತಾದರೆ ಬಹಳ ಮೋಜಾಗುತ್ತೈತಿ. ಸತ್ಯನಾರಾಯಣಪೂಜೆಯ ನೆವ ಹೂಡೂಣೇನು ಚೆನ್ನೀ?”

“ಹೌದು. ಹಾಂಗೇ ಮಾಡು,” ಎಂದಳಾಕೆ.

ಸತ್ಯನಾರಾಯಣ ಪೂಜೆಗೆ ಅವರ ಗಿರಾಕಿಗಳೆಲ್ಲರೂ ನೆರೆದರು. ಫೌಜದಾರರು, ಪೋಲೀಸು ಇನ್ಸ್‌ಪೆಕ್ಟರು, ಜಗದಂಬೆಯವರು, ವೀರಭದ್ರಯ್ಯನವರು, ಮೋಜಣ್ಣವರ್ ಮೊದಲಾದ ವಕೀಲರು ಮತ್ತು ಅವರ ಸತೀಮಣಿಯರು, ಡಾಕ್ಟರ್ ಇಂದ್ರಗೇರಿಯವರು ಎಲ್ಲರೂ ಸೇರಿ ನಾರಾಯಣನ ಪ್ರಸಾದವೆಂದು ಮಶೀರಾ ಸೇವಿಸಿದರು.

"ಪೋಲೀಸರ ಕರ್ತವ್ಯವಾದರೂ ಏನು?" ಎಂದು ಒಬ್ಬರು ಮೆಲ್ಲನೆ ಚರ್ಚೆಗಾರಂಭಿಸಿದರು.

"ಅಪರಾಧಗಳಾಗದಂತೆ ನೋಡಿಕೊಳ್ಳುವದು. ಅಪರಾಧ ನಡೆದಾಗ ಅಪರಾಧಿಗಳನ್ನ ಕೋರ್ಟಿಗೆ ಕಳಿಸುವದು," ಎಂದರು ಫೌಜದಾರರು.

"ಮ್ಯಾಜಿಸ್ಟ್ರೇಟರ ಕರ್ತವ್ಯ?"

"ಮನಸು ಬಂದರೆ ಆ ಅಪರಾಧಿಗಳಿಗೆ ಶಿಕ್ಷೆ ವಿಧಿಸುವದು, ಇಲ್ಲವಾದರೆ ಬಿಟ್ಟುಬಿಡುವದು. ಹೌದೋ ಅಲ್ಲವೋ?" ಎಂದರು ಮೋಜಣ್ಣವರ್.

"ರೈಟ್, ರೈಟ್," ಎಂದರು ಎಲ್ಲರೂ.

ಜಗದಂಬೆಯವರ ಆಯುರಾರೋಗ್ಯ ಬಯಸಿ ಗ್ಲಾಸುಗಳು ತಾಕಲಾಡಿದುವು.

"ಜೈ ಹಿಂದ್," ಎಂದು ಕೂಗಿದ ಬಸಲಿಂಗ.

"ಜೈ ಹಿಂದ್," ಎಂದರು ಎಲ್ಲರೂ.

ಆ ಜೈ ಹಿಂದ್ ಎಂಬ ಮಂತ್ರ ಅವರೆಲ್ಲರನ್ನೂ ಒಂದೇ ಬಳಗದವರನ್ನಾಗಿ ಮಾಡಿತು. ಒಬ್ಬರ ಮನಸ್ಸನ್ನು ಇನ್ನೊಬ್ಬರು ನೋಯಿಸದೆ ಎಲ್ಲರಿಗೂ ನಾಲ್ಕು ಕಾಸು ಸಿಗುವಂಥ ಉಪಾಯ ಯೋಜಿಸತೊಡಗಿದರು.

ಬಸಲಿಂಗನ ಗದ್ದೇಹಳ್ಳಿ ಯಾತ್ರೆಯೂ ಯಥಾಪ್ರಕಾರ ನಡೆಯಿತು. ಮಶೀರಾ ಗಿರಾಕಿಗಳಂತೂ ದಿನದಿಂದ ದಿನಕ್ಕೆ ಬೆಳೆಯುತ್ತಿದ್ದರು. ಎಲ್ಲ ಕಡೆಗಳಿಂದಲೂ ಬಸಲಿಂಗನಿಗೆ ಲಾಭವೇ ಲಾಭ. ಬ್ಯಾಂಕಿನಲ್ಲಿ ಅವನ ಲೆಕ್ಕ ಲಕ್ಷಕ್ಕೇರಿ ನಿಂತರೂ ಅವನಿಗೆ ತೃಪ್ತಿಯೆನಿಸಲಿಲ್ಲ.

ಬಾಜೀರಾಯರ ಮಾತೂ ಹಾಗೆಯೇ. ಮನೆಯ ಮೂಲೆಮೂಲೆಯಲ್ಲಿ ದುಡ್ಡು ಕೂಡಿಬಿದ್ದಂತೆ ಕಾಣುತ್ತಿದ್ದಿತಾದರೂ, ಇನ್ನು ಈ ವ್ಯವಹಾರ ಸಾಕು ಎಂದೆನಿಸುತ್ತಿದ್ದಿತಾದರೂ ಬಸಲಿಂಗ ಬಂದು, ತಾನು ಗದ್ದೇಹಳ್ಳಿಗೆ ಹೋಗಿ

ಬರುವುದಾಗಿ ಹೇಳಿದಾಗ ಇದೊಂದು ಬಾರಿ ಹೋಗಿಬರಲಿ, ಮುಂದೆ ಬೇಡ ಎಂದುಕೊಂಡು ಸುಮ್ಮನಾಗುತ್ತಿದ್ದರು. ಅವರಿಗೆ ಒಳಗೊಳಗೇ ಅಳುಕು.

ಬಸಲಿಂಗನಿಗೆ ಮಾತ್ರ ಯಾವ ಹೆದರಿಕೆಯೂ ಇರಲಿಲ್ಲ.

ಚೆನ್ನಿಗೂ ಅಷ್ಟೆ.

ಫೌಜದಾರರು, ಪ್ರಾಸಿಕ್ಯೂಟರರು, ಮ್ಯಾಜಿಸ್ಟ್ರೇಟರು ಮೊದಲಾದವರೆಲ್ಲರೂ ಅವಳ ದಾಸಾನುದಾಸರಾಗಿರುವಾಗ ಅವಳಾದರೂ ಏಕೆ ಹೆದರಬೇಕು?

ಅವಳ ಗಂಡನ ಬಳಗ ಬೆಳೆದಂತೆ ಅವಳ ತಂಡವೂ ಬೆಳೆಯುತ್ತಿತ್ತು.

ಅವಳಿಂದ ಸಲಹೆಗಳನ್ನೋ ಸಹಾಯವನ್ನೋ ಆಶಿಸಿ ಬಂದ ಮುಗ್ಧ ಯುವತಿಯರು, ಮನೆತನಸ್ಥ ಹೆಂಗಸರು ಶೀಲವನ್ನು ಮಾರಿಕೊಂಡೇ ಹೋಗಬೇಕಾಯಿತು. ತಮ್ಮ ಶೀಲಹರಣದ ಸಂಗತಿಯನ್ನು ಆ ಮಾನವಂತ ಹೆಂಗಸರು ಯಾರೆದುರಿಗೆ ಹೇಳಿಕೊಳ್ಳಬೇಕು? ಹೇಳಿದರೂ ಅವರದೇ ಅವಮಾನ. ಅಂತೆಯೇ ಅವರೆಲ್ಲರೂ ಬಾಯಿ ಹೊಲಿದುಕೊಂಡು ಕುಳಿತರು.

ಅವರಲ್ಲಿಯೆ ಒಬ್ಬಿಬ್ಬರು ಧೈರ್ಯ ತಂದುಕೊಂಡು ಚೆನ್ನಿಯ ಸಂಗತಿಯನ್ನು ತಮ್ಮ ಗಂಡಸರ ಕಿವಿಗೆ ಹಾಕಿದರು. ಆ ಗಂಡಸರು ಚೆನ್ನಿಯ ಬಾಗಿಲಿಗೆ ಬಂದು ಕೂಗಾಡತೊಡಗಿದಾಗ ಅವಳು ಹೇಳುವಳು:

"ನಿಮ್ಮ ಹೆಂಗಸರ ಗುರ್ತು ನಮಗಿಲ್ಲ. ನಾವೇನು ಸೂಳೆಯರಲ್ಲ, ಕಸಬು ಮಾಡುವವರೂ ಅಲ್ಲ. ನಮ್ಮಲ್ಲ್ಯಾಕೆ ಬರ್ತಾರ ನಿಮ್ಮ ಹೆಂಗಸರು? ನಿಮ್ಮದೇನಾರೆ ತಕ್ರಾರಿದ್ದರ ಪೋಲೀಸರ ಹತ್ತರ ಫಿರ್ಯಾದು ಕೊಡಿರಿ. ಬಾಗಿಲ ಮುಂದೆ ನಿಂತು ಒದರಾಡಬ್ಯಾಡ್ರಿ. ನಾವೇ ಪೋಲೀಸರನ್ನ ಕರೆಯಬೇಕಾದೀತು."

ಪೋಲೀಸರ ಹತ್ತಿರ ಫಿರ್ಯಾದು?

ಪೋಲೀಸರೂ ಅವಳ ಗುಲಾಮರೆಂಬುದು ಆ ಜನಕ್ಕೆ ಗೊತ್ತೇ ಇದ್ದಿತಲ್ಲ. ಅವರ ಹತ್ತಿರ ದೂರು ಒಯ್ದರೂ ಪ್ರಯೋಜನವಾಗುವಂತಿರಲಿಲ್ಲವಲ್ಲ. ಸರಿ. ಪೋಲೀಸರು, ಮ್ಯಾಜಿಸ್ಟ್ರೇಟರು, ಸರಕಾರ ಎಲ್ಲರನ್ನೂ ಬಯ್ದು ಅದರಿಂದಲೇ ಸಮಾಧಾನಮಾಡಿಕೊಂಡು ತೆಪ್ಪಗಿರುತ್ತಿದ್ದರು ಜನರು:

ಆದರೆ, ಜನರ ತಾಳ್ಮೆಗೂ ಒಂದು ಮಿತಿಯುಂಟು.

ಒಂದು ಬಾರಿ, ಹೈಸ್ಕೂಲಿನ ವಿದ್ಯಾರ್ಥಿನಿಯೊಬ್ಬಳನ್ನು ಚೆನ್ನಿ ತನ್ನ

ಮನೆಗೆ ಬರಮಾಡಿಕೊಂಡು ಮೋಸದಿಂದ ಅವಳ ಮಾನಹರಣ ಮಾಡಿಸಿದಳು. ಆ ವಿದ್ಯಾರ್ಥಿನಿ ಮನೆಗೆ ಹೋಗುತ್ತಲೂ ತನ್ನ ಅಣ್ಣನೆದುರಿಗೆ ಎಲ್ಲವನ್ನೂ ಹೇಳಿದಳು. ಆತ ಕಾಲೇಜಿನಲ್ಲಿ ಓದುತ್ತಿದ್ದ ಯುವಕ. ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯಾಗಿ ತರುಣರ ಸಂಘಟನೆ ಮಾಡುತ್ತಿದ್ದ ತೇಜಸ್ವಿ. ಈ ಸಮಾಜಕಂಟಕರನ್ನು ಬಗ್ಗು ಬಡಿಯಲೇಬೇಕೆಂದು ಆತ ನಿರ್ಧರಿಸಿ, ಅವರಿಂದ ಅವಮಾನಿತರಾದ ಇತರ ಜನರನ್ನೂ ಭೇಟಿಮಾಡಿ ಅವರನ್ನೂ ಹುರಿದುಂಬಿಸಿದ.

ಇದುವರೆಗೆ ಕೈಸಾಗದೆ ಸುಮ್ಮನಿದ್ದ ಜನರೆಲ್ಲರೂ ಮುಖಂಡನೊಬ್ಬ ದೊರೆತೊಡನೆ ಆವೇಶದಿಂದ ಕಾರ್ಯಪ್ರವೃತ್ತರಾದರು.

ಚೆನ್ನಿಯ ಮನೆಯಲ್ಲಿ ನಡೆಯುವ ಕುಕೃತ್ಯಗಳನ್ನು ಕುರಿತು ವಿವರಿಸುವ ಅರ್ಜಿಯೊಂದನ್ನು ಬರೆದು ಸಿದ್ಧಗೊಳಿಸಲಾಯಿತು, ಅವಳ ಮನೆಗೆ ನಿತ್ಯವೂ ಭೆಟ್ಟಿಕೊಡುವ ಅಧಿಕಾರಿಗಳ ಹೆಸರುಗಳನ್ನೂ ಆ ಅರ್ಜಿಯಲ್ಲಿ ಉಲ್ಲೇಖಿಸಲಾಯಿತು.

ಅರ್ಜಿಯನ್ನು ಹಿಡಿದುಕೊಂಡು ಆ ಯುವಕ ಮಾಧವನೂ ಇನ್ನಿತರರೂ ಕಲೆಕ್ಟರರ ಬಂಗಲೆಗೆ ಹೋಗಿ ಅವರನ್ನು ಕಂಡು ಅರ್ಜಿಯನ್ನು ಕೊಟ್ಟು, ಚೆನ್ನಿಯ ಸಂಭಾವಿತ ಕಳ್ಳರನ್ನು ಸದೆಬಡಿಯಬೇಕೆಂದು ಬಿನ್ನವಿಸಿಕೊಂಡರು.

ಅರ್ಜಿಯನ್ನೋದಿ, ಮ್ಯಾಜಿಸ್ಟ್ರೇಟ್, ಪ್ರಾಸಿಕ್ಯೂಟರ್, ಫೌಜದಾರ್, ಇನ್ಸ್‌ಪೆಕ್ಟರ್ ಮೊದಲಾದ ದೊಡ್ಡ ದೊಡ್ಡ ಅಧಿಕಾರಿಗಳ ಮೇಲಿನ ದೂರುಗಳನ್ನು ಕಂಡು ಕಲೆಕ್ಟರರಿಗೆ ಆಶ್ಚರ್ಯದ ಆಘಾತವಾಯಿತು.

“ಇದೆಲ್ಲಾ ನಿಜವೇ?”

“ನಿಜ. ನೂರಕ್ಕೆ ನೂರರಷ್ಟು ನಿಜ. ಇಡೀ ನಗರಕ್ಕೆಲ್ಲಾ ಗೊತ್ತಿದೆ ಈ ವಿಷಯ. ಈ ಗ್ಯಾಂಗಿನಿಂದ ಎಷ್ಟೋ ಜನರಿಗೆ ಅವಮಾನವಾಗಿದೆ. ಇನ್ನೂ ಆಗಬಹುದಾಗಿದೆ. ನೀವಾದರೂ ಮನಸು ಮಾಡಿದರೆ ಇವರ ಹುಟ್ಟಡಗಬಹುದು.”

ಐ. ಎ. ಎಸ್. ಪರೀಕ್ಷೆಯಲ್ಲಿ ಹೊಸದಾಗಿ ತೇರ್ಗಡೆ ಹೊಂದಿ ಒಂದೆರಡು ವರ್ಷಗಳ ಹಿಂದೆಯಷ್ಟೆ ಕೆಲಸಕ್ಕೆ ನೇಮಕರಾಗಿದ್ದ ಯುವಕ ಕಲೆಕ್ಟರರು ಕೊಂಚ ಆದರ್ಶಪ್ರಿಯರೇ ಆಗಿದ್ದರು. ಕಾಂಗ್ರೆಸ್ ಸರಕಾರದ ಸ್ಥಾನ

ಪ್ರತಿಬಂಧ ನೀತಿಯನ್ನು ಮನಃಪೂರ್ವಕವಾಗಿ ಸಮರ್ಥಿಸಿ ಅದನ್ನು ಯಶಸ್ವಿಗೊಳಿಸಲು ದುಡಿಯಬೇಕೆಂಬ ಆಕಾಂಕ್ಷೆಯೂ ಅವರಿಗಿತ್ತು. ಅಂತೆಯೆ, ಹಾದಿ ತಪ್ಪಿ ವರ್ತಿಸುತ್ತ ಸರಕಾರಕ್ಕೆ ಕೆಟ್ಟ ಹೆಸರು ತಂದುಕೊಡುತ್ತಿದ್ದ ಈ ಅಧಿಕಾರಿಗಳಿಗೆ ತಕ್ಕ ಪಾಠ ಕಲಿಸಬೇಕೆಂದು ಅವರು ನಿರ್ಧರಿಸಿ ಮಾಧವನನ್ನು ಕುರಿತು ಹೇಳಿದರು:

"ನಾನೆಲ್ಲ ವ್ಯವಸ್ಥೆ ಮಾಡುತ್ತೇನೆ. ನೀವು ಮಾತ್ರ ಈ ವಿಚಾರ ಯಾರಿಗೂ ತಿಳಿಸದೆ ಮೌನವಾಗಿರಬೇಕು. ಸುದ್ದಿ ಹೊರಬಿದ್ದರೆ ಇಲಿಗಳು ಬಿಲ ಸೇರಿಕೊಂಡಾವು."

"ನೀವೂ ಕೂಡಾ ಬಹಳ ಗುಪ್ತರೀತಿಯಿಂದ ಕ್ರಮ ತೆಗೆದುಕೊಳ್ಳಬೇಕು."

"ಆಗಲಿ. ಈಗ ನೀವೊಂದು ಕೆಲಸ ಮಾಡಬೇಕು. ಆ ಮನೆಯಲ್ಲಿ ಮದ್ಯದ ಪಾರ್ಟಿ ನಡೆದಾಗ ಯಾರಾದರೊಬ್ಬರು ಕೂಡಲೇ ಬಂದು ನನಗೆ ತಿಳಿಸಬೇಕು. ನಾನು ಡಿ. ಎಸ್. ಪಿ. ಯವರೊಂದಿಗೆ ಬಂದು ಅವರನ್ನು ಬಂಧಿಸುತ್ತೇನೆ."

ಮಾಧವನಿಗೂ ಅವನ ಗುಂಪಿಗೂ ಹೊಸ ಹುರುಪು ಬಂತು.

"ನಮ್ಮ ಕಿಸೆಯಿಂದ ನೂರು ನೂರು ರೂಪಾಯಿ ಖರ್ಚಾದರೂ ಚಿಂತೆಯಿಲ್ಲ. ಆ ಚಂಡಾಳ ಚೌಕಡಿಯನ್ನ ಜೇಲಿಗೆ ಕಳಿಸುವವರೆಗೂ ಸುಮ್ಮನಿರಬಾರದು," ಎಂದನೊಬ್ಬ.

"ಅವರ ಪಾರ್ಟಿ ನಡೆದಾಗ ತಿಳಿದುಕೊಂಡು ಕಲೆಕ್ಟರರಿಗೆ ಸುದ್ದಿ ಮುಟ್ಟಿಸಬೇಕಲ್ಲ? ಯಾರಾದರೊಬ್ಬರು ಬಸಲಿಂಗನ ದೋಸ್ತಿ ಮಾಡಿಕೊಂಡು ಅವರೊಳಗೇ ಸೇರಿಕೊಂಡು ಸಮಯಸಾಧಿಸಿ ಸುದ್ದಿ ಕೊಡಬೇಕು," ಎಂದ ಮಾಧವ.

ಬಸಲಿಂಗ ಮತ್ತು ಚೆನ್ನಿಯರೊಡನೆ ಪ್ರತ್ಯಕ್ಷವಾಗಿ ಜಗಳಕ್ಕಿಳಿಯದಿದ್ದವನೊಬ್ಬ ಆ ಕೆಲಸ ಮಾಡಲು ಸಿದ್ಧನಾದ, ಬಸಲಿಂಗನಲ್ಲಿ ಒಂದೆರಡು ಸೀಸೆ ಮಶೀರಾವನ್ನೂ ಖರೀದಿಮಾಡಿ ಅವನ ವಿಶ್ವಾಸಗಳಿಸಿದ, ಚೆನ್ನಿಯ ಸಹವಾಸವನ್ನೂ ದೊರಕಿಸಿ ಅವಳ ನಂಬುಗೆಗೂ ಪಾತ್ರನಾದ.

## ಇಪ್ಪತ್ತು.... ವಿದಾಯ ಸಮಾರಂಭ

ಇತ್ತ ಕಲೆಕ್ಟರರೂ ಸುಮ್ಮನೆ ಕುಳಿತುಕೊಳ್ಳದೆ ಅವಶ್ಯವೆನ್ನಿಸಿದ ಸಿದ್ಧತೆಗಾರಂಭಿಸಿದರು. ಡಿ. ಎಸ್. ಪಿ. ಯವರನ್ನು ಬಂಗಲೆಗೆ ಬರಮಾಡಿಕೊಂಡು ವಿಷಯವನ್ನೆಲ್ಲ ತಿಳಿಸಿ ಅವರ ಸಲಹೆ ಕೋರಿದರು.

"ಜಗದಂಬೆಯವರ ಹತ್ತರ ನಡೆಯುವ ಖಟ್ಲೆಗಳೆಲ್ಲಾ ಬಿಡುಗಡೆಯಾಗುತ್ತ ಬರುವದನ್ನು ಕಂಡು ನನಗೂ ಅವರ ಬಗ್ಗೆ ಸಂಶಯ ಬಂದಿತ್ತು. ಆದರೂ ಆಧಾರವಿಲ್ಲವೆಂದು ಸುಮನಿದ್ದೆ," ಎಂದರು ಡಿ. ಎಸ್. ಪಿ. ಯವರು.

"ಈಗ ಹ್ಯಾಗೆ ಮಾಡೋಣ?"

"ಈ ಪ್ರಕರಣವನ್ನು ಸರಿಯಾಗಿ ತಿಳಿದುಕೊಳ್ಳಬೇಕು ಮೊದಲು. ಆ ಮೇಲೆ ಮುಂದಿನ ಮಾತು."

"ನಿಮ್ಮ ವಿಶ್ವಾಸಪಾತ್ರರಾದ ಸಿ. ಐ. ಡಿ. ಅಧಿಕಾರಿಯೊಬ್ಬರನ್ನು ತನಿಖೆಗಾಗಿ ನೇಮಿಸಿದರೊಳ್ಳೆಯದು. ಅವರೂ ಕುಡುಕರಾಗಿರಬಾರದು, ಅಷ್ಟೆ."

"ಅಂಟಿಕರಪ್ಶನ್ ಬ್ರ್ಯಾಂಚಿನ ಡಿ. ವೈ. ಎಸ್. ಪಿ. ಮಹಮ್ಮದಖಾನ ಅಂತ ಇದಾರೆ. ಬಹಳ ಒಳ್ಳೆಯವರು. ಕುಡಿತ ಗಿಡಿತ ಯಾವ ಚಟವೂ ಇಲ್ಲ. ಒಂದು ಕಾಸು ಲಂಚವನ್ನೂ ಮುಟ್ಟುವವರಲ್ಲ. ಅವರನ್ನೇ ನೇಮಿಸಲೇನು?"

"ಹಾಗೇ ಮಾಡಿ. ಅಂತೂ ಎಲ್ಲಾ ಗುಟ್ಟಾಗಿ ನಡೆಯಬೇಕು."

ಡಿ. ಎಸ್ ಪಿ. ಯವರು ಮಹಮ್ಮದಖಾನರನ್ನು ಕರೆಸಿಕೊಂಡು ಅವರಿಗೆ ಯೋಗ್ಯ ಸೂಚನೆಗಳನ್ನಿತ್ತು, ಜಗದಂಬೆ ಮತ್ತು ವೀರಭದ್ರಯ್ಯನವರ ಮೇಲೆ 'ನಿಗಾ' ಇಡಲು ತಿಳಿಸಿದರು.

ಮಹಮ್ಮದಖಾನರು ವೇಷ ಬದಲಿಸಿ ಒಂದೆರಡು ದಿನ ನಗರದಲ್ಲಿ

ಸುತ್ತಿದರಲ್ಲದೆ, ಜಗದಂಬೆ ಮತ್ತು ವೀರಭದ್ರಯ್ಯನವರ ಹಿಂದೆಯೂ ತಿರುಗಿ ವಿಷಯವನ್ನೆಲ್ಲ ಕಂಡುಕೊಂಡರು.

"ಅಂತೂ ಅರ್ಜಿಯಲ್ಲಿರುವದೆಲ್ಲಾ ಸತ್ಯಸಂಗತಿಯೆಂದಂತಾಯಿತು. ಆದಷ್ಟು ಬೇಗ ಅವರನ್ನು ಹಿಡಿಯುವ ವ್ಯವಸ್ಥೆ ಮಾಡಬೇಕು," ಎಂದರು ಕಲೆಕ್ಟರರು.

"ಎಲ್ಲರನ್ನೂ ಒಂದೇ ಸಲ ಹಿಡಿದರೆ ಮಾತ್ರ ಎಲ್ಲರೂ ಸಿಕ್ಕಿಬೀಳುತಾರೆ ಸಾಹೇಬರೆ. ಒಬ್ಬರನ್ನೇ ಹಿಡಿಯುವದರಿಂದ ಉಪಯೋಗವಿಲ್ಲ," ಎಂದರು ಮಹಮ್ಮದಖಾನರು.

"ಅದೂ ನಿಜ. ಅವರೆಲ್ಲಾ ಒಂದೇದಿನ ಆ ಮನೆಯಲ್ಲಿ ಕೂಡಿದಾಗ ಹಿಡಿಯಬೇಕು," ಎಂದರು ಡಿ. ಎಸ್. ಪಿ. ಯವರು.

"ಹೌದು. ಆದರೆ ಅವರೆಲ್ಲಾ ಒಟ್ಟುಗೂಡುವದೇ ಅಪರೂಪ. ಅದಕ್ಕೊಂದು ಉಪಾಯ ಮಾಡಬೇಕು," ಎಂದರು ಮಹಮ್ಮದಖಾನರು.

"ಏನುಪಾಯ ?"

"ಜಗದಂಬೆಯವರಿಗೆ ಇಲ್ಲಿಂದ ವರ್ಗ ಮಾಡಿಸಬೇಕು. ಗುಂಪಿನ ಆಧಾರ ದಂತಿದ್ದ ಮನುಷ್ಯ ಹೊರಟುಹೋಗುವನೆನ್ನುತ್ತಲೂ ಎಲ್ಲರಿಗೂ ಆಘಾತ ವಾಗುವದು. ತಮ್ಮ ಅನ್ನದಾತನಂತಿರುವ ಆಸಾಮಿ ಹೊರಟುಹೋಗುವಾಗ ಈ ವಕೀಲರು ಅವರನ್ನು ಬೀಳ್ಕೊಡಲು ಒಂದು ಪಾರ್ಟಿ ಕೊಡದಿರುವದಿಲ್ಲ. ಆ ಪಾರ್ಟಿಯ ಕಾಲಕ್ಕೆ ಗುಂಪಿನ ಎಲ್ಲಾ ಜನ ಸೇರುತ್ತಾರೆ. ಪಾರ್ಟಿಯ ಕಾಲಕ್ಕೆ ಮಶೀರಾ ಪಾನ ನಡೆಯದಿರುವದಿಲ್ಲ. ಅದರ ಸುದ್ದಿಯನ್ನ ಅರ್ಜಿದಾರರಲ್ಲೊಬ್ಬರು ತಿಳಿಸಿದರೆ ಸಾಕು. ನಾನು ಗೊಬ್ಬೂರಿನಲ್ಲಿರುತ್ತೀನಿ. ನಿಮ್ಮಿಂದ ಫೋನ್ ಬಂದೊಡನೆ ಹಾಜರಾಗುತ್ತೀನಿ. ಒಂದುವೇಳೆ ಪಾರ್ಟಿಯೇನೂ ನಡೆಯದಿದ್ದರೆ ಜಗದಂಬೆಯವರ ವರ್ಗವನ್ನು ರದ್ದುಗೊಳಿಸಲೂ ಬಂದೀತು."

"ಶಾಬಾಸ್! ಒಳ್ಳೆಯ ಉಪಾಯ. ಹಾಗೇ ಮಾಡುವಾ," ಎಂದರು ಕಲೆಕ್ಟರರು.

ಅದೇ ದಿನವೆ ಕಲೆಕ್ಟರರು ಮಾಧವನನ್ನು ಬರಮಾಡಿಕೊಂಡು ತಮ್ಮ ಯೋಜನೆಯನ್ನು ತಿಳಿಸಿ ಹೇಳಿದರು. ಮಾರನೆಯ ದಿನ ಮುಂಬಯಿಗೆ ಫೋನ್ ಮಾಡಿ ಜಗದಂಬೆಯವರನ್ನು ತಕ್ಷಣ ವರ್ಗಮಾಡಲು ಕೇಳಿಕೊಂಡರು.

ಎರಡೇ ಎರಡು ದಿನಗಳಲ್ಲಿ ವರ್ಗದ ಆಜ್ಞೆ ಬಂತು. ಜಗದಂಬೆಯವರ ತಲೆಯ ಮೇಲೆ ಬಂಗಲೆಯೇ ಕುಪ್ಪಳಿಸಿ ಬಿದ್ದಂತಾಯಿತು. ಇದ್ದಕ್ಕಿದ್ದ ಹಾಗೇ ತಮಗೆ ವರ್ಗವಾಗಲು ಕಾರಣವೇನೆಂಬುದೇ ಅವರಿಗೆ ಹೊಳೆಯಲಿಲ್ಲ. ಅವರ ಗುಂಪಿಗೂ ಅದೊಂದು ಬಲವಾದ ಆಘಾತವೆನಿಸಿತು.

"ದೊಡ್ಡಸಾಹೇಬರಿಗೆ ವರ್ಗವಾಯಿತಲ್ಲೋ ಗೌಸೂ? ನಾವೆಲ್ಲಾ ಪರದೇಶಿಗಳಾದೆವು. ಇನ್ನು ಹ್ಯಾಂಗ ಮಾಡೂದಪ್ಪಾ?" ಎಂದು ಗೋಗರೆದ ಬಸಲಿಂಗ.

"ಯಾಕ ಅಳ್ತೀಯೋ? ಇವರು ಹೋದರೆ ಇವರಂಥವರೇ ಇನ್ನೊಬ್ಬರು ಬರ್ತಾರೆ. ನೀನ್ಯಾಕೆ ಚಿಂತೀ ಮಾಡುತೀ?" ಎಂದ ಗೌಸೂ.

ಆದರೂ ಬಸಲಿಂಗನಿಗೆ ಸಮಾಧಾನವಾಗಲಿಲ್ಲ. ಜಗದಂಬೆಯವರಂಥ ಮ್ಯಾಜಿಸ್ಟ್ರೇಟರು ಸಿಕ್ಕುವುದು ಪೂರ್ವಜನ್ಮದ ಪುಣ್ಯವೆಂದೇ ಅವನು ಭಾವಿಸಿದ್ದ.

ಮುಹಮ್ಮದಖಾನರ ತರ್ಕ ಸುಳ್ಳಾಗಲಿಲ್ಲ.

ಜಗದಂಬೆಯವರ ಉಪಕಾರದ ಲಾಭವನ್ನುಂಡು ಧನ್ಯರಾಗಿದ್ದ ವಕೀಲರುಗಳೂ, ವೀರಭದ್ರಯ್ಯನವರೂ ಫೌಜದಾರರೂ ಸೇರಿ ಮಾತನಾಡಿ ಕೊಂಡು 'ವಿದಾಯ ಸಮಾರಂಭ'ವನ್ನು ನಿಶ್ಚಿತಗೊಳಿಸಿದರು. ಬಸಲಿಂಗನ ಮನೆಯಲ್ಲಿಯೆ ಸಮಾರಂಭ. ಸಂಜೆಯ ಐದು ಗಂಟೆಗೆ ಕೇವಲ 'ಟಫಿನ್', ರಾತ್ರೆ ಊಟ ಮತ್ತು ಮುಶೀರಾ ಎಂದು ಗೊತ್ತಾಯಿತು.

"ಇಂಥಾ ಪಾರ್ಟಿ ಎಂದೆಂದೂ ಎಲ್ಲೆಲ್ಲೂ ಆಗಿರಬಾರದು, ಮುಂದೆ ಆಗು ವಂತಿರಬಾರದು. ಅಷ್ಟು ಅಭ್ಯಾಟ್ ಮಾಡೋಣ," ಎಂದರು ಡಾಕ್ಟರ್ ಇಂದ್ರ ಗೇರಿಯವರು.

"ಬಸಲಿಂಗನೇ ಮ್ಯಾನೇಜರ್ ಆಗಿರುವಾಗ ಅಭ್ಯಾಟ್ ಆಗದಿರ್‍ತ ದೇನ್ರೀ?" ಎಂದರು ಮೋಜಣ್ಣವರು.

ಐದು ಗಂಟೆಯ ಉಪಾಹಾರದ ಕಾರ್ಯಕ್ರಮ ಕೊನೆಗೊಂಡ ಬಳಿಕ ರಾತ್ರಿಯ ಭಾರಿ ಸಮಾರಂಭದ ಸಿದ್ಧತೆಗಾರಂಭವಾಯಿತು. ಈ ಸಮಾರಂಭಕ್ಕೆ ಎಲ್ಲರೂ ಸಪತ್ನೀಕರಾಗಿಯೋ ಪ್ರೇಯಸಿಯರ ಜೊತೆಯಲ್ಲಿಯೋ ಬರಬೇಕೆಂದು ಮೊದಲೇ ಸೂಚನೆ ಕೊಡಲಾಗಿತ್ತು. ಅದರಂತೆ ಗೊತ್ತುಪಡಿಸಿದ ವೇಳೆಗೆ ಸರಿಯಾಗಿ ಎಲ್ಲ ಗಂಡಸರೂ, ಲೀಲಾದೇವಿ, ಗೌರೀದೇವಿ, ಸುಮಿತ್ರಾದೇವಿ

ಮೊದಲಾದವರೂ ಬಂದು ಸೇರಿದರು. ಬಾಜೀರಾಯರು, ಕೃಷ್ಣರಾಯರು, ಇಂದ್ರಗೇರಿಯವರು, ಮತ್ತು ವೀರಭದ್ರಯ್ಯನವರು, ಫೌಜದಾರರು ಮತ್ತು ಇನ್ಸ್‌ಪೆಕ್ಟರರು ಮಾತ್ರ ತಮ್ಮ ಪತ್ನಿಯರನ್ನು ಕರೆದುತಂದಿರಲಿಲ್ಲ. ಇವರು ಕರೆದರೂ ಅವರು ಬರುತ್ತಿರಲಿಲ್ಲ. ಆ ಮಾತು ಬೇರೆ.

ಚೆನ್ನಿಯ ಮನೆಯ ಪ್ರಶಸ್ತವಾದ ನಡುಮನೆಯಲ್ಲಿ ಎಲ್ಲರೂ ನೆರೆದು ಜಗದಂಬೆಯವರ ಗುಣಗಾನಮಾಡುತ್ತಾ ಒಂಭತ್ತರವರೆಗೆ ಹರಟೆ ಕೊಚ್ಚುತ್ತಿದ್ದರು. ಮಾತಿನ ಜೊತೆಯಲ್ಲೇ ಮಶೀರಾ ಸೀಸೆಗಳೂ ಖಾಲಿಯಾಗುತ್ತಿದ್ದುವು.

ಅಂದಿನ ಸಮಾರಂಭದ ಸಂಗತಿಯನ್ನು ಮೊದಲೇ ತಿಳಿದುಕೊಂಡಿದ್ದ ಕಲೆಕ್ಟರರು ಡಿ. ಎಸ್. ಪಿ. ಯವರನ್ನೂ ಮಹಮ್ಮದಖಾನರನ್ನೂ ತಮ್ಮ ಬಂಗಲೆಗೆ ಬರಮಾಡಿಕೊಂಡು ಸುದ್ದಿಗಾರನ ಆಗಮನವನ್ನೇ ನಿರೀಕ್ಷಿಸುತ್ತ ಕುಳಿತಿದ್ದರು.

ಒಂಭತ್ತೂವರೆಯ ಹೊತ್ತಿಗೆ ಆತ ಬಂದು 'ಪಾರ್ಟಿ' ರಭಸದಿಂದ ನಡೆದಿರುವುದಾಗಿ ವರದಿಯೊಪ್ಪಿಸಿದ.

ಎರಡು ಮೋಟಾರುಗಳಲ್ಲಿ ಪೋಲೀಸರನ್ನು ತುಂಬಲಾಯಿತು. ಡಿ. ಎಸ್. ಪಿ. ಮಹಮ್ಮದಖಾನ್ ಮತ್ತು ಪಂಚರನ್ನೊಳಗೊಂಡ ಕಲೆಕ್ಟರರ ಕಾರು ಮುಂದೆ ಸಾಗಿದಂತೆ ಪೋಲೀಸರ ಮೋಟರುಗಳು ಹಿಂದೆ ಹೊರಟುವು. ಬಸಲಿಂಗನ ಮನೆ ಇನ್ನೂ ಒಂದು ಫರ್ಲಾಂಗು ದೂರದಲ್ಲಿರುವಾಗ ಮೋಟರುಗಳನ್ನು ನಿಲ್ಲಿಸಲಾಯಿತು. ಎಲ್ಲರೂ ಮೋಟರುಗಳಿಂದಿಳಿದರು.

ಡಿ. ಎಸ್. ಪಿ. ಯವರ ಆಜ್ಞೆಯಂತೆ ಪೋಲೀಸರು ತಮ್ಮ ಪಾದರಕ್ಷೆಗಳನ್ನು ತೆಗೆದು ಮೋಟರುಗಳಲ್ಲಿಟ್ಟರು. ಮಹಮ್ಮದಖಾನರ ಜೊತೆಗೆ ಕೆಲವರು ಪೋಲೀಸರನ್ನು ಕೊಟ್ಟು, ಹಿತ್ತಲ ಬಾಗಿಲಿನ ಕಡೆಯಿಂದ ಹಾದು ಬರುವಂತೆ ಸೂಚನೆಯಿತ್ತು ಕಳಿಸಲಾಯಿತು. ಡಿ. ಎಸ್. ಪಿ. ಯವರೂ ಕಲೆಕ್ಟರರೂ ಇತರ ಪೋಲೀಸರೊಂದಿಗೆ ಮುಂದಿನ ಬಾಗಿಲಿನ ಕಡೆ ನಡೆದರು. ಡಿ. ಎಸ್. ಪಿ. ಯವರು ಕೈಯಲ್ಲಿನ ಬ್ಯಾಟರಿಯನ್ನು ಮೇಲಕ್ಕೆ ತಿರುಗಿಸಿ ಮೂರು ಬಾರಿ ಬೆಳಕು ಬಿಡುತ್ತಲೂ ಪೋಲೀಸರೆಲ್ಲರೂ ಮನೆಯ ಗೋಡೆಗೆ ಹೊಂದಿ ನಿಲ್ಲಬೇಕೆಂದು ಸೂಚಿಸಲಾಯಿತು.

ಅಷ್ಟರೊಳಗಾಗಿ, ಮನೆಯೆದುರಿಗೆ ಉರಿಯುತ್ತಿದ್ದ ವಿದ್ಯುದ್ದೀಪವನ್ನು ಒಳಗಿನವರು ಆರಿಸಿದರು. ಅವರು ಊಟಕ್ಕೇಳುವ ಸಮಯವಾಗಿತ್ತು.

ಡಿ. ಎಸ್. ಪಿ. ಯವರ ಸಂಕೇತದಂತೆ ಪೋಲೀಸ್ ಪಡೆ ಕೊಂಚವೂ ಸದ್ದುಮಾಡದೆ ಬಸಲಿಂಗನ ಮನೆಯನ್ನು ಮುತ್ತಿತು. ಮಹಮ್ಮದಖಾನರು ಮೊದಲೇ ಜಾಗ್ರತೆ ವಹಿಸಿ ಕರೆದುತಂದಿದ್ದ ಪಂಚರನ್ನು ಮುಂದೆ ಬಿಟ್ಟುಕೊಂಡು ಡಿ. ಎಸ್. ಪಿ. ಮತ್ತು ಕಲೆಕ್ಟರರು ಮುಂದಿನ ಬಾಗಿಲಿಗೆ ಬಂದು ಬಾಗಿಲು ತೆರೆಯುವಂತೆ ಕೂಗಿದರು.

ಹೆಚ್ಚಾಗಿ ಕುಡಿಯದೆ ಕೊಂಚ ಎಚ್ಚರದಿಂದಲೇ ಇದ್ದ ಬಸಲಿಂಗನೇ ಬಾಗಿಲ ಬಳಿ ಬಂದ.

"ಬಾಗಿಲು ತೆಗೆ, ಬಾಗಿಲು ತೆಗೆ," ಎಂದರು ಡಿ. ಎಸ್. ಪಿ.

ಆತ ದೀಪವನ್ನು ಬೆಳಗಿಸಿ ನೋಡಿದ. ರುದ್ರಾವತಾರ ತಳೆದು ನಿಂತಿದ್ದ ಡಿ. ಎಸ್. ಪಿ. ಗಂಭೀರ ಮುಖಮುದ್ರೆಯಿಂದ ನಿಂತಿದ್ದ ಕಲೆಕ್ಟರರು. ಅವರ ಹಿಂದೆ ಬಂದೂಕಧಾರಿ ಪೋಲೀಸರು....ಬಸಲಿಂಗ ಥರಥರನೆ ನಡುಗತೊಡಗಿದ.

"ಬಾಗಿಲು ತೆಗೆ," ಎಂದು ಮತ್ತೆ ಕೂಗಿದರು ಡಿ. ಎಸ್. ಪಿ.

ನಡುಗುತ್ತಿದ್ದ ಕೈಗಳಿಂದ ಬಾಗಿಲು ತೆಗೆದು ಬಸಲಿಂಗ ಕೈಜೋಡಿಸಿ ಮುಂದೆ ಬಂದ.

"ಈ ಮನೆಯ ಮಾಲೀಕರಾರು?"

"ನಾ....ನಾ....ನಾನೇ...." ಎಂದು ತೊದಲಿದ ಬಸಲಿಂಗ.

"ಹಾಗಾದರೆ ಮೊದಲು ನಮ್ಮನ್ನ ಶೋಧಿಸಿ ನೋಡು. ನಾವು ಒಳಗೆ ಬರಬೇಕು. ನಿಮ್ಮ ಮನೆಯಲ್ಲಿ ಮದ್ಯದ ಪಾರ್ಟಿ ನಡೆದಿದೆಯೆಂದು ಕೇಳಿ, ನಾನು, ಈ ಜಿಲ್ಲೆಯ ಡಿ. ಎಸ್. ಪಿ. ಮತ್ತು ಇವರು ಕಲೆಕ್ಟರರು ಬಂದಿದ್ದೇವೆ. ಬೇಗ ಬೇಗ ನಮ್ಮನ್ನ ಶೋಧಿಸು."

"ಬರ್ರಿ ಸಾಹೇಬರೆ. ನಮ್ಮಿಂದ ಬಹಳ ದೊಡ್ಡ ತಪ್ಪಾಯಿತು," ಎನ್ನುತ್ತಾ ಬಸಲಿಂಗ ಡಿ. ಎಸ್. ಪಿ. ಯವರ ಕಾಲುಗಳ ಮೇಲೆ ಬಿದ್ದುಕೊಂಡ.

ಒಂದು ಕುರಿಯನ್ನೆತ್ತುವಂತೆ ಡಿ. ಎಸ್. ಪಿ. ಯವರು ಬಸಲಿಂಗನನ್ನೆತ್ತಿ. ಒಬ್ಬ ಪೋಲೀಸನ ಕೈಗೆ ಕೊಟ್ಟು ಕಲೆಕ್ಟರರೊಡನೆ ಒಳನುಗ್ಗಿದರು. ಪಂಚರೂ

ಇನ್ನಿತರರೂ ಅವರನ್ನು ಹಿಂಬಾಲಿಸಿಕೊಂಡು ಬರುತ್ತಲೂ ಬಾಗಿಲನ್ನು ಮುಚ್ಚಿ ಒಳಗಿನಿಂದ ಚಿಲಕ ಹಾಕಲಾಯಿತು. ನಾಲ್ಕು ಜನ ಬಂದೂಕಧಾರಿ ಪೋಲೀಸರು ಕಾವಲಿಗೆ ನಿಂತರು.

ಕಾಲಭೈರವನಂತೆ ಪ್ರವೇಶಿಸಿದ ಡಿ. ಎಸ್. ಪಿ. ಯವರನ್ನೂ ಕಲೆಕ್ಟರ ರನ್ನೂ ನೋಡುತ್ತಲೂ ಒಳಗಿದ್ದವರ ಕೈಗಳಲ್ಲಿನ ಗ್ಲಾಸುಗಳು ಪಟಪಟನೆ ನೆಲಕ್ಕುರುಳಿದುವು. ಚೆನ್ನಿ ಪ್ರಸಂಗಾವಧಾನ ತಂದುಕೊಂಡು, ಹತ್ತಿರ ಇದ್ದ ಮುಶೀರಾ ಸೀಸೆಗಳನ್ನು ನೆಲಕಪ್ಪಳಿಸಿದಳು. ಅವಳು ಹೆಂಗಸಾದರೂ ಅವಳನ್ನು ಹಿಡಿದು ಬೇಡಿಗಳನ್ನು ತೊಡಿಸಬೇಕಾಯಿತು. ಇನ್ನುಳಿದವರನ್ನೆಲ್ಲ ಸಾಲು ಸಾಲಾಗಿ ಕೂಡ್ರಿಸಿ ಇಬ್ಬಿಬ್ಬರನ್ನು ಒಟ್ಟುಗೂಡಿಸಿ ಬೇಡಿ ಹಾಕಲಾಯಿತು.

ಮುಹಮ್ಮದಖಾನರು ಪಂಚನಾಮೆಗಾರಂಭಿಸಿದರು.

ಇಪ್ಪತ್ತು ಸೀಸೆ ಮುಶೀರಾ, ಗ್ಲಾಸುಗಳು, ಸೋಡಾಸೀಸೆಗಳು ಮೊದಲಾದುವುಗಳನ್ನು ಜಫ್ತು ಮಾಡಲಾಯಿತು. ಆಪಾದಿತರೆಲ್ಲರನ್ನೂ ಬಂಧಿಸಿ, ಮೋಟರುಗಳಲ್ಲಿ ತುಂಬಿ ಸಿವಿಲ್ ಹಾಸ್ಪಿಟಲಿಗೆ ಸಾಗಿಸಲಾಯಿತು. ವಾಂತಿಯ ಔಷಧಿ ಕೊಟ್ಟು ಎಲ್ಲರನ್ನೂ ಪರೀಕ್ಷಿಸಲಾಯಿತು. ಅವರೆಲ್ಲರೂ ಮದ್ಯ ಸೇವಿಸಿದ್ದುದು ಸತ್ಯವೆಂದು ಡಾಕ್ಟರುಗಳು ನಿರ್ಣಯವಿತ್ತರು.

ಆಸ್ಪತ್ರೆಯಿಂದ ಎಲ್ಲರನ್ನೂ ನಗರದ ಪೋಲೀಸ್ ಕಚೇರಿಗೆ ಕರೆದು ತರಲಾಯಿತು.

ಎಲ್ಲರಿಗಿಂತ ಮೊದಲು ಕಚೇರಿಯಲ್ಲಿ ಪ್ರವೇಶಿಸಿದ ಡಿ. ಎಸ್. ಪಿ. ಯವರನ್ನು ನೋಡುತ್ತಲೂ ರಾತ್ರಿಯ ಕಾವಲಿಗಿದ್ದ ಪೋಲೀಸು ಸಿಪಾಯಿ ಸೆಟೆದು ನಿಂತು ವಂದನೆ ಸಲ್ಲಿಸಿದ.

ಡಿ. ಎಸ್. ಪಿ. ಯವರ ಹಿಂದೆಯೇ ಕಲೆಕ್ಟರರು, ಮುಹಮ್ಮದಖಾನರು. ಅವರ ಹಿಂದೆ ಆಪಾದಿತರು....

ಆ ದೃಶ್ಯವನ್ನು ಕಂಡು ಕಾವಲುಗಾರನಿಗೆ ಆಶ್ಚರ್ಯವಾಗದಿರಲಿಲ್ಲ.

"ಎಲಾ, ಇದೇನಿದು! ನಮ್ಮ ಫೌಜದಾರರು....ತಾಲೂಕಿನ ಫೌಜ ದಾರರು, ಇನ್ಸ್‌ಪೆಕ್ಟರ್ ಸಾಹೇಬರು, ಪ್ರಾಸಿಕ್ಯೂಟರ್ ಸಾಹೇಬರು, ಮ್ಯಾಜಿಸ್ಟ್ರೇಟ್ ಸಾಹೇಬರು, ಡಾಕ್ಟರ್ ಸಾಹೇಬರು, ವಕೀಲ್ ಸಾಹೇಬರೆಲ್ಲರ ಕೈಯೊಳಗೆ ಬೇಡಿಗಳೇ! ಈ ಹೆಂಗಸರೂ ಆರೋಪಿಗಳು.....ಎಲಾ,

ಬಸಲಿಂಗಪ್ಪಾ.... ನೀನೂ? ಹಾಂ. ಗೊತ್ತಾಯ್ತು. ಮಶೀರಾ ಪಾರ್ಟಿಯೇನು? ಚಲೋ ಮಾಡಿದರು ನಮ್ಮ ಡಿ. ಎಸ್. ಪಿ. ಸಾಹೇಬರು!" ಎಂದು ಆತ ಮನಸ್ಸಿನಲ್ಲಿಯೇ ಹೇಳಿಕೊಂಡು ತುಟಿಗಳಲ್ಲಿ ನಗೆ ತುಳುಕಿಸುತ್ತ ಆಪಾದಿತರೆಲ್ಲರನ್ನೂ ದಿಟ್ಟಿಸತೊಡಗಿದ.

ಅವನ ಮುಖದ ಮೇಲೆ ಎದ್ದು ಕಾಣುತ್ತಿದ್ದ ಸಂತೋಷವನ್ನು ಗುರುತಿಸಿಕೊಂಡ ಡಿ. ಎಸ್. ಪಿ. ಯವರು ಬೇಕೆಂತಲೇ ಅವನನ್ನು ಪ್ರಶ್ನಿಸಿದರು:

"ಏನಪ್ಪಾ, ಇವರನ್ನೆಲ್ಲ ಅರೆಸ್ಟ ಮಾಡಿದ್ದು ಬರೋಬರಿ ಆಯ್ತೋ ಇಲ್ಲವೋ?"

ಸಿಪಾಯಿ ಮತ್ತೊಮ್ಮೆ ಸೆಟೆದು ನಿಂತ, ಕೈಯೆತ್ತಿ ಸಲಾಂ ಹೊಡೆದ, ಅನಂತರ ಹೇಳಿದ:

"ಹಾಲೂಸಕ್ಕರೆ ಕುಡಿದಾಂಗ ಆತ್ರೀ ಸಾಹೇಬ್. ನಮ್ಮ ಈ ಫೌಜದಾರರಿಗೆ ಸೆರೆ ಮಾರುವವರಿಂದ ತಿಂಗಳಿಗೆ ನಾಲ್ಕು ಸಾವಿರ ರೂಪಾಯಿ ಮಾಮೂಲು ಸಿಗುತ್ತೈತಿ. ಇದೊಂದೇ ಶಹರ ಅಲ್ಲ, ಎಲ್ಲಾ ಶಹರಗಳ ಫೌಜದಾರರಿಗೂ ಸಿಗುತ್ತೈತಿ. ಅದಕ್ಕೇ ಎಲ್ಲರೂ ಶಹರಗಳ ಫೌಜದಾರರಾಗಬೇಕಂತ ಹಪಾಪಿಸ್ತಾರೆ. ನಾವು ಪೋಲೀಸರು ಸೆರೆ ಮಾರುವವರ ಹತ್ತರ ಹೋಗಿ ದುಡ್ಡು ವಸೂಲುಮಾಡಿ ತಂದು ಇವರಿಗೆ ಕೊಡಬೇಕಾಗತ್ತೈತಿ. ನಮುಗೂ ಒಂದೆರಡು ರೂಪಾಯಿ ಕೊಡುತಾರೆ. ನನಗೆ ಮಾತ್ರ ಇಂಥಾ ಹರಾಮದ ರೊಕ್ಕ ಬೇಕಾಗಿರಲಿಲ್ಲ. ಈ ರೊಕ್ಕ ವಸೂಲುಮಾಡುವ ಕೆಲಸ ನನ್ನಿಂದಾಗುವದಿಲ್ಲಂತ ಹೇಳಿದ್ದಕ್ಕೆ ನನಗೆ ರಾತ್ರಿಯ ಪಹರೆಗೆ ನೇಮಿಸಿದ್ದಾರೆ. ಒಂದು ತಿಂಗಳಿಂದ ನಿದ್ದೆಯಿಲ್ಲ ಸಾಹೇಬ್."

"ಹೀಗೇನು! ಇವನ್ನೆಲ್ಲ ನೀನು ಮೊದಲೇ ತಿಳಿಸಿದ್ದರೆ ನೆಟ್ಟಗಾಗುತ್ತಿತ್ತು. ಚಿಂತೆಯಿಲ್ಲ. ಇಂಥ ಬದ್ಮಾಷರು ಅಧಿಕಾರಿಗಳಾಗಿರುವಾಗ ನೀನಾದರೂ ಏನು ಮಾಡೀಯು. ಇವರೊಡನೆ ಸಹಕರಿಸದಿದ್ದುದೇ ನಿನ್ನ ಪ್ರಾಮಾಣಿಕತನಕ್ಕೆ ಸಾಕ್ಷಿ. ಒಂದು ತಿಂಗಳಿಂದ ನಿದ್ದೆಗೆಟ್ಟಿದ್ದಕ್ಕಾಗಿ, ಸ್ವಾರ್ಥವನ್ನ ಧಿಕ್ಕರಿಸಿ ಸರಕಾರದ ನಿಯಮ ಪಾಲಿಸಿದ್ದಕ್ಕಾಗಿ ನಿನ್ನನ್ನ ಇವತ್ತಿನಿಂದ ಹವಲ್ದಾರನನ್ನಾಗಿ ಮಾಡಿದ್ದೇನೆ. ನಾಳೆ ಹುಕುಂ ಕಳಿಸುತ್ತೇನೆ," ಎಂದು ಹೇಳಿ ಡಿ. ಎಸ್. ಪಿ. ಯವರು ಕಚೇರಿಯತ್ತ ನಡೆದರು.

ಕಾನೂನಿನ ಪ್ರಕಾರ ವಿಚಾರಣೆಗಾರಂಭವಾಯಿತು.

ಒಂದು ವಾರದವರೆಗೆ ಪತ್ರಿಕೆಗಳಲ್ಲೆಲ್ಲ ಇದೇ ವಾರ್ತೆ. ಜಿಲ್ಲೆಯ ಕಲೆಕ್ಟರರು, ಡಿ. ಎಸ್. ಪಿ. ಮಹಮ್ಮದಖಾನ್‌ರವರನ್ನು ಎಲ್ಲರೂ ಹೊಗಳುವವರೇ.

ಈ ಮೊಕದ್ದಮೆಯ ವಿಚಾರಣೆ ನ್ಯಾಯಾಲಯದಲ್ಲಿ ಆರಂಭವಾದಾಗ ಹೊರಗಡೆ ಸಹಸ್ರಾರು ಜನ ಸೇರಿದ್ದರು. ವಿಶೇಷ ಪೋಲೀಸ್ ಪಡೆ ಬಂದು ಶಾಂತಿಯನ್ನು ಕಾಯಬೇಕಾಯಿತು.

ಮೊಕದ್ದಮೆಯ ನಿರ್ಣಯ ಹೊರಬೀಳುವ ದಿನವಂತೂ ಜನಜಂಗುಳಿಯನ್ನು ಹತೋಟಿಯಲ್ಲಿರಿಸುವುದು ಅಸಾಧ್ಯವಾಯಿತು. ಓರೆಕೋರೆನಗರದ ಜನರು ಮಾತ್ರವಲ್ಲ, ಗೊಬ್ಬೂರು ಉಗ್ರಪುರ ಕಳ್ಳೀಕಾಯಿ ನಗರಗಳಿಂದಲೂ ಕುತೂಹಲಿಗಳಾದ ಜನರು ಬಂದು ಸೇರಿದ್ದರು.

ಐದು ಗಂಟೆಯ ವೇಳೆಗೆ ಅಪರಾಧಿಗಳೆಲ್ಲರನ್ನೂ ಹೊರಗೆ ಕರೆದುತಂದು ಪೋಲೀಸ್ ವಾಹನಗಳಿಗೇರಿಸಲಾಯಿತು.

ಅವರ ಜೊತೆಯಲ್ಲೇ ಹೊರಗಡೆ ಬಂದ ಮಾಧವ, ನ್ಯಾಯಾಧೀಶರ ತೀರ್ಪನ್ನು ತಿಳಿಸಿದ.

“ಗಂಡಸರಿಗೆ ಎರಡೆರಡು ವರ್ಷ ಸಶ್ರಮಶಿಕ್ಷೆ; ಹೆಂಗಸರಿಗೆ ಆರು ತಿಂಗಳ ಸಾದಾಶಿಕ್ಷೆ.”

—:—

# ಮುಂದಿನ ಪ್ರಕಟನೆಗಳು

## ಪಾಪಕೂಪ
ವೇಶ್ಯಾಜೀವನದ ವಿಶ್ವವಿಖ್ಯಾತ ಕಾದಂಬರಿ
ಅಲೆಗ್ಝಾಂಡರ್ ಕುಪ್ರಿನ್

●

## ಪದ್ಮಿನಿ ಪ್ರೇಮಾಪಹರಣ
ಶ್ರೀ 'ಜಿಬಿಜ್'ರವರ ಕಾದಂಬರಿ

●

## ಪ್ರೋಲಿ ಪಟಾಲಂ
ಶ್ರೀ ದೇವುಡುರವರ ಕಾದಂಬರಿ

●

## ಬಿಡುಗಡೆಯ ಬೇಡಿ
ಶ್ರೀ 'ತ. ರಾ. ಸು'ರವರ ಜನಪ್ರಿಯ ಕಾದಂಬರಿಯ
ಸುಲಭ ಬೆಲೆಯ ಆವೃತ್ತಿ

●

## ರಾಜ - ರಾಣಿ - ಗುಲಾಮ
ಶ್ರೀ ರಾ. ವೆಂ. ಶ್ರೀನಿವಾಸರ ಕಾದಂಬರಿ

●

## ರೂಪಸರ್ಪಿಣಿ
('ರಾಗಿಣಿ'ಯ ಎರಡನೆಯ ಭಾಗ)
ಶ್ರೀ 'ಭಾರತೀಪ್ರಿಯ'ರ ಕಾದಂಬರಿ

●

## ಹೊನ್ನಾವರದ ಹುಡುಗಿ
ಶ್ರೀ ಮಾ. ನಾ. ಚೌಡಪ್ಪನವರ ಕಾದಂಬರಿ

●

## ಕಾಂಚನ - ಗಂಗಾ
('ಕಾಮಿನಿ ಕಾಂಚನ'ದ ಎರಡನೇ ಭಾಗ)
ಶ್ರೀ ಅ. ನ. ಕೃ. ರವರ ಕಾದಂಬರಿ

# ಶಾರದಾ ಪ್ರಕಟನಾಲಯದ ಪ್ರಕಟನೆಗಳು

| | | | ಬೆಲೆ | |
|---|---|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) | ೧ | ೪ | ೦ |
| ೨. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) | ೨ | ೪ | ೦ |
| ೩. | ಜೀವನ – ಕಲೆ * | ೧ | ೦ | ೦ |
| ೪. | ಮುಗುಳುನಗೆ * | ೧ | ೪ | ೦ |
| ೫. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) | ೧ | ೪ | ೦ |
| ೬. | ಆಲದ ಹೂ | ೧ | ೧೨ | ೦ |
| ೭. | ಹುಡುಗಾಟ | ೧ | ೪ | ೦ |
| ೮. | ಶವದ ಮನೆ | ೧ | ೪ | ೦ |
| ೯. | ಎದಿರೇಟು | ೧ | ೮ | ೦ |
| ೧೦. | ಸರ್ವಮಂಗಳಾ (ದ್ವಿತೀಯ ಮುದ್ರಣ) | ೩ | ೮ | ೦ |
| ೧೧. | ಕೇಡಿಗನ ಕಿಡಿಗಳು | ೧ | ೦ | ೦ |
| ೧೨. | ದೇವತೆಗಳು ನಕ್ಕಾಗ | ೧ | ೪ | ೦ |
| ೧೩. | ಜ್ವಾಲಾಮುಖಿಯ ಮೇಲೆ | ೪ | ೦ | ೦ |
| ೧೪. | ನನ್ನ ರಸಿಕ ಮುತ್ತು ಬಂಗಾರದ ಗೆಜ್ಜೆ | ೧ | ೮ | ೦ |
| ೧೫. | ಹಾಳು – ಮೂಳು | ೧ | ೦ | ೦ |
| ೧೬. | ನಾಡಿಗೇರರ ನಗೆಬರಹಗಳು ೧ | ೧ | ೪ | ೦ |
| ೧೭. | ಮೋಹದ ಬಲೆಯಲ್ಲಿ | ೫ | ೧೨ | ೦ |
| ೧೮. | ಸಾವಿನೊಂದಿಗೆ ಸರಸ | ೧ | ೪ | ೦ |
| ೧೯. | ಅನುರಾಗ | ೧ | ೪ | ೦ |
| ೨೦. | ಬಿಡುಗಡೆಯ ಬೇಡಿ | ೩ | ೪ | ೦ |
| ೨೧. | ಜೋಳದ ಬೆಳೆಯ ನಡುವೆ | ೧ | ೪ | ೦ |
| ೨೨. | ಜರತಾರಿ ಜಗದ್ಗುರು | ೩ | ೧೨ | ೦ |
| ೨೩. | ಕಾನ್ವೆಂಟ್ ಗರ್ಲ್ | ೧ | ೦ | ೦ |
| ೨೪. | ಖಾನಾವಳಿಯ ನೀಲಾ | ೧ | ೦ | ೦ |
| ೨೫. | ರಂಗನಾಯಕಿ | ೨ | ೦ | ೦ |

* ಪ್ರತಿಗಳು ಮುಗಿದಿವೆ.

| | | | | |
|---|---|---|---|---|
| ೨೬. | ಮದುವೆ ಮಾಡಿ ನೋಡು | ೧ | ೦ | ೦ |
| ೨೭. | ಕಲ್ಯಾಣಿ (ದ್ವಿತೀಯ ಮುದ್ರಣ) | ೧ | ೮ | ೦ |
| ೨೮. | ನೀ ನನ್ನ ಮುಟ್ಟಬೇಡ | ೧ | ೮ | ೦ |
| ೨೯. | ನನ್ನ ದೇವರು ('ಕುವೆಂಪು' ರವರ ಕಥಾಸಂಕಲನ) | ೧ | ೪ | ೦ |
| ೩೦. | ಕಾಮಿನಿ – ಕಾಂಚನ | ೧ | ೮ | ೦ |
| ೩೧. | ಜನಿವಾರ ಮತ್ತು ಶಿವದಾರ | ೧ | ೮ | ೦ |
| ೩೨. | ಮಲ್ಲಿ | ೧ | ೮ | ೦ |
| ೩೩. | ಆನಂದ ಲಹರಿ | ೦ | ೧೨ | ೦ |
| ೩೪. | ಸೀತಾ – ರತ್ನ | ೦ | ೧೨ | ೦ |
| ೩೫. | ನಾಡಿಗೇರರ ನಗೆಬರಹಗಳು ೨ | ೧ | ೮ | ೦ |
| ೩೬. | ನಾನು ಪೋಲೀಸನಾಗಿದ್ದೆ | ೧ | ೮ | ೦ |
| ೩೭. | ರಾಗಿಣಿ | ೧ | ೮ | ೦ |
| ೩೮. | ಮಧುಚಂದ್ರ | ೦ | ೧೨ | ೦ |
| ೩೯. | ಬಂಗಾರದ ಜಿಂಕೆಯ ಹಿಂದೆ | ೧ | ೮ | ೦ |
| ೪೦. | ಬಣ್ಣದ ಮಾಲಿಂಗ | ೧ | ೮ | ೦ |
| ೪೧. | ಗೋವಾದೇವಿ | ೧ | ೮ | ೦ |
| ೪೨. | ಪಟ್ಟಣದ ಹುಡುಗಿ (ನಾಟಕ) | ೧ | ೪ | ೦ |

---

# ಗೋವಾದೇವಿ

ಗೋವಾದೇವಿ ಎಂದರೆ ಯಾವ ದೇವಿ?

ಗೋವಾ ಪ್ರಾಂತದಲ್ಲಿರುವ ದೇವತೆಯೋ?

ಗೋವಾದಿಂದ ಬಂದ ಮಹಿಳೆಯೋ?

– ಗೋವಾದೇವಿ ಒಂದು ವ್ಯಕ್ತಿಯಲ್ಲ – ಗೋವಾ ಪ್ರಾಂತದಲ್ಲಿ ದೊರೆಯುವ ವಿದೇಶೀಯ ಮದ್ಯ ಮಶೀರಾಕ್ಕೆ ಬಸಲಿಂಗ ಇಟ್ಟ ಹೆಸರು ಅದು. ಪಾನಪ್ರತಿಬಂಧಕ ಕಾನೂನು ಬಂದ ತರುವಾಯ, ಕಾಂಗ್ರೆಸ್ ರಾಜ್ಯದಲ್ಲಿನ ಕುಡುಕರಿಗಾಗಿ ಗುಪ್ತರೀತಿಯಿಂದ ಗಡಿ ದಾಟಿ ಬರತೊಡಗಿದಳು ಈ ಗೋವಾದೇವಿ!

ಈ ದೇವಿಯ ಪೂಜಾರಿಗಳಾದ ವಿಸೂಮಾಮಾ, ಬಸಲಿಂಗ, ಬಾಜೀರಾವ್ ಮತ್ತು ಚೆನ್ನಿ –

ಈ ದೇವಿಯ ಭಕ್ತಶಿಖಾಮಣಿಗಳಾದ ಮೋಜಣ್ಣವರ್, ಹರಕಸೆಟ್ಟಿ, ಕೃಷ್ಣರಾವ್, ಚೈನೀ ಚಿದಂಬರರಾವ್, ಮಡಿವಾಳ ಮೊದಲಾದ 'ಸಂಡೇ ಪ್ಲೀಡರು'ಗಳು –

ಈ 'ಪಂಚಪಾಂಡವ ವಕೀಲರುಗಳಿಗೆ' ದ್ರೌಪದಿಯರಂತಿದ್ದ ಲೀಲಾದೇವಿ, ಗೌರೀದೇವಿ, ಸುಮಿತ್ರಾದೇವಿ ಮೊದಲಾದ ನಾರೀರತ್ನಗಳು –

ಇಂಥ ನಾರೀಮಣಿಯರಿಗೆಲ್ಲ 'ಇಂದ್ರ'ನಂತಿದ್ದ ಓರೆಕೋರೆನಗರದ ವಿ. ಡಿ. ಡಾಕ್ಟರ್ ಇಂದ್ರಗೇರಿಯವರು –

ಕೊನೆಗೆ ಈ ಲಂಪಟಕೂಟಕ್ಕೊದಗಿದ ದುರ್ಗತಿ –

ಇದೆಲ್ಲದರ ಚಿತ್ರಣ ಇಲ್ಲಿದೆ.

ಕನ್ನಡದಲ್ಲಿ ಈ ಮೊದಲು ಯಾರೂ ಉಪಯೋಗಿಸದಿದ್ದಂಥ ಹೊಸ ಕಥಾವಸ್ತು. ಯಾರೂ ಚಿತ್ರಿಸದಿದ್ದಂಥ ಅದ್ಭುತ ಪಾತ್ರಗಳು. ಯಾರೂ ಬಳಸಿಕೊಳ್ಳದಿದ್ದಂಥ ಹೊಸ ರಚನಾವಿಧಾನ –

ಬಸವರಾಜ ಕಟ್ಟೀಮನಿಯವರ ಮತ್ತೊಂದು ದಿಟ್ಟತನದ ಹೆಜ್ಜೆ 'ಗೋವಾದೇವಿ!'